ಶ್ರೀ ಜಗನ್ನಾಥದಾಸ ವಿರಚಿತ

# ಶ್ರೀ ಹರಿಕಥಾಮೃತಸಾರ - ನಿಘಂಟು



ಸಂಗ್ರಹಕಾರರು :

ಗುರುಮಧ್ವರಾವ್ ಉಪ್ಪಲಿ, ರಾಯಚೂರು

ಪ್ರಕಾಶಕರು :

ಶ್ರೀ ಗುರುವಿಜಯದಾಸಾಶ್ರಮ, ರಾಯಚೂರು

ಶ್ರೀ ಜಗನ್ನಾಥದಾಸ ವಿರಚಿತ

# ಶ್ರೀ ಹರಿಕಥಾಮೃತಸಾರ - ನಿಘಂಟು

ಮುಖಚಿತ್ರ :

ಶ್ರೀ ಜಗನ್ನಾಥದಾಸವರ್ಯರ ಸ್ತಂಭ

ಮಾನವಿ

ಛಾಯಾಗ್ರಾಹಕರು :

ಗುರುರಾಜ ಪಟವಾರಿ

ಎಸ್. ಬಿ. ಹೆಚ್. ಮಾನವಿ

ಕೊಡುಗೆ :

ಅರ್ಚಕರು

ಜಗನ್ನಾಥದಾಸರ ಗುಡಿ, ಮಾನವಿ

ಸಂಗ್ರಹಕಾರರು :

ಗುರುಮಧ್ವರಾವ್ ಉಪ್ಪಲಿ

ರಾಯಚೂರು

ಪ್ರಕಾಶಕರು

ಶ್ರೀ ಗುರುವಿಜಯದಾಸಾಶ್ರಮ

ರಾಯಚೂರು

SRI HARIKATHAMRUTHASARA - NIGHANTU, A collection of poems of Sri Jagannatha Dasa with compilation of difficult words in the form of dictionery. - Compiled by Guru Madhwa Rao Uppali & Published by Gnana Prasara Prakashana, Sri Guru Vijayadasashrama, 6-2-68/24/1, Amarkhed Layout, Manickkaprabhu Temple Road, Raichur - 584 101.



ಪ್ರಥಮ ಮುದ್ರಣ : 2000

ಬೆಲೆ : ರೂ. 75.00

ಡಿ. ಟಿ. ಪಿ. ಮತ್ತು ಮುದ್ರಣ :

ಭಾರತೀಶ ಎಂಟರ್‌ಪ್ರೈಸಸ್

ಬೆಂಗಳೂರು - 560 078

ದೂರವಾಣಿ 666 2254

ಪ್ರಕಾಶಕರು :

ಜ್ಞಾನ ಪ್ರಸಾರ ಪ್ರಕಾಶನ

ಶ್ರೀ ಗುರು ವಿಜಯದಾಸಾಶ್ರಮ

6-2-68/24/1, ಅಮರಖೇಡ ಲೇಔಟ್

ಮಾಣಿಕ್ಯ ಪ್ರಭು ಗುಡಿ ಬೀದಿ

ರಾಯಚೂರು - 584 101

ಶ್ರೀ ಲಕ್ಷ್ಮೀ ಚಿಂತಲರಾಯ ಪ್ರಸೀದತು

# ಸಂಪಾದಕರ ನುಡಿ

ಶ್ರೀ ಹರಿದಾಸ ಸಾಹಿತ್ಯ ಪ್ರಪಂಚದಲ್ಲಿ ಶ್ರೀಜಗನ್ನಾಥ ದಾಸರ ಕೃತಿ **ಹರಿಕೃಥಾಮೃತಸಾರವು** ಅಪೂರ್ವಕೃತಿಯೆನಿಸಿದೆ. ದ್ವೈತ ಸಿದ್ಧಾಂತದ ಸಮಗ್ರ ತತ್ವಗಳನ್ನು ಒಳಗೊಂಡ, ಪ್ರಮೇಯಗಳನ್ನು ಅಳವಡಿಸಿಕೊಂಡ, ಜ್ಞಾನ - ಭಕ್ತಿ - ಸಾಧನೆಯ ಆಕರ ಗ್ರಂಥ ಹರಿಕಥಾಮೃತಸಾರ. ಮುಮುಕ್ಷು ಜೀವರಿಗೆ ಅಪೇಕ್ಷೆ ಪೂರೈಸುವ ಮಾರ್ಗದರ್ಶನದ ಕೈಪಿಡಿ. ಮಧ್ವ ಮತದ ಗುರುತರವಾದ ಸಿದ್ಧಾಂತಗಳ ಸಮಗ್ರ ದರುಶನಕ್ಕೆ ಹರಿಕಥಾಮೃತಸಾರ ಒಂದು ದರ್ಪಣ.

ಈ ನಾಡಿನ ತಾಯಿ ನುಡಿಯೆನಿಸಿದ ಕನ್ನಡ ಭಾಷೆಯಲ್ಲಿ ರಚಿಸಿದ **ಹರಿಕಥಾಮೃತಸಾರಕ್ಕೆ** ಸಂಸ್ಕೃತ ಭಾಷೆಯ ವ್ಯಾಖ್ಯಾನ, ಟೀಕೆ - ಟಿಪ್ಪಣಿಗಳನ್ನು ಪಡೆದು, ತನ್ನದೇ ಆದ ಹಿರಿಮೆ ಗರಿಮೆಗಳಿಂದ ಮೆರೆಯುವ ಖ್ಯಾತಿ ಇದಕ್ಕೆ.

ಪ್ರಸ್ತುತ ಈಗ ಪ್ರಕಾಶನಗೊಂಡ ಈ ಗ್ರಂಥದಲ್ಲಿ ಕಠಿಣ ಪದಗಳ ಅರ್ಥವನ್ನು ಸಂಗ್ರಹಿಸಿ, ಅಭ್ಯಾಸಿಗಳಿಗೆ ಸುಲಭ ಗ್ರಾಹ್ಯವಾಗುವಂತೆ ವಿಶೇಷ ಪ್ರಯತ್ನ ಮಾಡಲಾಗಿದೆ. ಇದಕ್ಕಾಗಿ ಪ್ರಕಾಶನಗೊಳಿಸಿದ ಶ್ರೀಯುತರೆಲ್ಲರನ್ನು ಅಭಿನಂದಿಸುತ್ತೇನೆ.

ಧಾರ್ಮಿಕ, ಹಾಗು ಜ್ಞಾನಯಜ್ಞ, ಹಾಗು ದಾಸ ಸಾಹಿತ್ಯದ ಕೈಂಕರ್ಯಕ್ಕೆ ಸದಾ ಮುಂಚೂಣಿಯಲ್ಲಿರುವ ಕಸಬೆ ಶ್ರೀ ಮಧುಸೂದನ ರಾವ ಪಟವಾರಿ ಇವರು ಈ ಗ್ರಂಥ ಪ್ರಕಾಶನಕ್ಕೆ ತನು - ಮನ - ಧನದಿಂದ ಸಹಾಯಸಲ್ಲಿಸಿದ್ದಾರೆ. ಇವರು ತಮ್ಮ ಬದುಕನ್ನು ಸಾಧನೆಯ ಮಾರ್ಗದಲ್ಲಿ ನಡೆಸಿಕೊಂಡು ಹೋಗುತ್ತಿರುವುದು ಇತರರಿಗೆ ಆದರ್ಶವಾಗಲಿ. ಜೀವನ ಸಾರ್ಥಕ್ಯದ ಮಾರ್ಗ, ಸೇವೆ ಎಂದು ಭಾವಿಸಿದ್ದಾರೆ.

ದಾಸ ಸಾಹಿತ್ಯ ಪ್ರೇಮಿಗಳೆನಿಸಿದ, ಶ್ರೀ ಎಂ.ಕೆ.ವಿಜಯೀಂದ್ರ, ಶ್ರೀ ಶ್ರೀನಿವಾಸ ಕಟ್ಟಿ, ಮತ್ತು ಮಿತ್ರರು ಇದರ ಪ್ರಕಾಶನ ಕಾರ್ಯದಲ್ಲಿ ಸಕ್ರಿಯವಾಗಿ ಸಹಕರಿಸಿದ್ದಾರೆ. ಇದಲ್ಲದೆ ಭಾರತೀಶ ಎಂಟರ್ ಪ್ರೈಸಸ್ ಇವರ ಪರಿಶ್ರಮದಿಂದ ಗ್ರಂಥವು ಸುಂದರವಾಗಿ ಅಚ್ಚಾಗಿದೆ. ಇವರೆಲ್ಲರ ಸೇವೆ ಶ್ರೀಹರಿಗೆ ಪ್ರೀತಿಯಾಗಲೆಂದು, ಮತ್ತು ಇವರೆಲ್ಲರಿಗೂ ಇತೋಪ್ಯತಿಶಯವಾದ ಜ್ಞಾನ - ಭಕ್ತಿ - ಸಾಧನೆಯನ್ನು ಕರುಣಿಸಲೆಂದು ಶ್ರೀಹರಿ - ವಾಯು - ಗುರುಗಳಲ್ಲಿ ಪ್ರಾರ್ಥಿಸುತ್ತೇನೆ.

ಗುರು ಮಧ್ವರಾವ್ ಉಪ್ಪಲಿ
ಶ್ರೀ ಗುರುವಿಜಯ ದಾಸಾಶ್ರಮ
ರಾಯಚೂರ

ಶ್ರೀ ಗುರು ವಿಜಯವಿಠಲ ಪ್ರಸೀದತು

# ಮುನ್ನುಡಿ

ಶ್ರೀ ವಿಷ್ಣು ಸರ್ವೋತ್ತಮತ್ವದ ಸುಜ್ಞಾನ ಸಾರವೆಂದರೆ **ಹರಿಕಥಾಮೃತಸಾರ.** ವೇದೋಪನಿಷತ್‌ಗಳ, ಬ್ರಹ್ಮಸೂತ್ರಗಳ, ಭಗವದ್ಗೀತೆ, ತಾತ್ಪರ್ಯನಿರ್ಣಯ ಮುಂತಾದ ಸಚ್ಛಾಸ್ತ್ರಗಳ, ಸಾರವೆಂದರೆ ಹರಿಕಥಾಮೃತಸಾರ. ಶ್ರೀ ಪುರಂದರ ದಾಸರ, ಶ್ರೀವಿಜಯದಾಸರ, ಶ್ರೀ ಗೋಪಾಲದಾಸರ ಪದ, ಪದ್ಯ ಸುಳಾದಿಗಳ ಸಾರವೆಂದರೆ **ಹರಿಕಥಾಮೃತಸಾರ.** ಸಕಲ ಶಾಸ್ತ್ರಗಳ ಮಂಥನ, ಚಿಂತನೆಯಲ್ಲಿ ತೇಲಿದ ನವನೀತ ಕಂತುಪಿತನ ಅಪಾರ ಮಹಿಮೆಯ ಸ್ತೋತ್ರ ಹರಿಕಥಾಮೃತಸಾರ.

ಶ್ರೀ ಜಗನ್ನಾಥದಾಸರು ರಚಿಸಿದ ಮೇರು ಕೃತಿ **ಹರಿಕಥಾಮೃತಸಾರ.** ಈ ಗ್ರಂಥದ ಬಗ್ಗೆ ಅನೇಕ ಜ್ಞಾನಿಗಳು ವಿದ್ವಾಂಸರು, ಪಂಡಿತರು ತಮ್ಮ ಅಭಿಪ್ರಾಯಗಳನ್ನು, ವ್ಯಾಖ್ಯಾನಗಳನ್ನು ಕಾಣಿಕೆಯಾಗಿ ಅರ್ಪಿಸಿ, ದಾಸ ಸಾಹಿತ್ಯ ಭಂಡಾರವನ್ನು ಶ್ರೀಮಂತಗೊಳಿಸಿದ್ದಾರೆ. ಹರಿಕಥಾಮೃತಸಾರದ ಬಗ್ಗೆ ಅಲ್ಪಜ್ಞನಾದ ನಾನು ಏನಾದರೂ ಹೇಳಿದರೆ, ಅದು ಮತಿಗೆ ನಿಲುಕದ ವಿಷಯ, ಕೈಯಿಗೆ ಎಟುಕದ ದ್ರಾಕ್ಷಿ ಹಣ್ಣು ಹುಳಿಯೆಂದಂತೆ ಆದೀತು.

ಅಪರೋಕ್ಷಜ್ಞಾನಿಗಳ ಬಗ್ಗೆ, ಹರಿಕಥಾಮೃತಸಾರ ಗ್ರಂಥ ಚಕ್ರವರ್ತಿ ಬಗ್ಗೆ ಜ್ಞಾನಿಗಳ ವಚನಗಳಿಂದ ತಿಳಿದು ಕೊಳ್ಳುವದೇ ವಿಹಿತ. ಈ ಗ್ರಂಥ ಮತ್ತು ಗ್ರಂಥಕರ್ತರ ಬಗ್ಗೆ ಶ್ರೀ ಶ್ರೀದ ವಿಠ್ಠಲ ಕರ್ಜಗಿದಾಸರ ವಿರಚಿತ ಫಲ ಸ್ತುತಿ ಸಂಧಿಯಲ್ಲಿ ಉಕ್ತವಾದ:

ಭಾಮಿನಿಯ ಷಟ್ಪದಿಯ ರೂಪದ ।
ಲೀ ಮಹಾದ್ಭುತಕಾವ್ಯದಾದಿಯೊ ।
ಳಾ ಮನೋಹರ ತರತಮಾತ್ಮನಾಂದಿ ಪದ್ಯಗಳ ॥
ಯಾಮ ಯಾಮಕೆ ಪಠಿಸುವವರ ಸು ।
ದಾಮ ಸಖ ಕೈಪಿಡಿಯಲೋಸುಗ ।
ಪ್ರೇಮದಿಂದಲಿ ಪೇಳ್ದ ಗುರು ಕಾರುಣ್ಯಕೇನೆಂಬೆ ॥

---

ಹರಿಕಥಾಮೃತಸಾರ ನವರಸ ।
ಭರಿತ ಗುಣ ಗಂಭೀರ ರತ್ನಾ ।
ಕರ ರುಚಿರ ಶೃಂಗಾರ ಸಾಲಂಕಾರ ವಿಸ್ತಾರ ॥

ಸರಸ ನರಕಂಠೀರವಾಚಾ ।
ರ್ಯರ ಜನಿತ ಸುಕುಮಾರ ಸಾತ್ವೀ ।
ಕರಿಗೆ ಪರಮೋದಾರ ಮಾಡಿದ ಮರೆಯದುಪಕಾರ ॥

*

ಮಣಿಖಚಿತ ಹರಿವಾಣದಲಿ ವಾ ।
ರಣ ಸುಭೋಜ್ಯ ಪದಾರ್ಥ ಕೃಷ್ಣಾ ।
ರ್ಪಣ ವೆನುತ ಪಸಿದವರಿಗೋಸುಗ ನೀಡುವಂದದಲಿ ॥
ಪ್ರಣತರಿಗೆ ಪೊಂಗನಡ ವರ ವಾ ।
ಣ್ಮಣೆಗಳಿಂ ವಿರಚಿಸಿದ ಕೃತಿಯೊ ।
ಳುಣಿಸಿ ನೋಡುವ ಹರಿಕಥಾಮೃತಸಾರವನುದಾರ ॥

*

ಮತ್ತೆ ಶ್ರೀಗುರುಶ್ರೀಶ ವಿಠ್ಠಲ ವಿರಚಿತ ಫಲಸ್ತುತಿಸಂಧಿಯಲ್ಲಿ ಸ್ತುತಿಸಿದುದು ಹೀಗೆ :

ದಾಸವರ್ಯರ ದಾಸ ಕರ್ಜಗಿ ।
ದಾಸರೆಂಬರ ಈ ಸುವಾಕ್ಯವು ।
ದಾಸಿ ನವ ಮಾಡದಿರಿ ಶ್ರೀ ಹರಿದಾಸರಾದವರು ॥
ಕಾಶಿ ಮೊದಲಾದ ಸುಕ್ಷೇತ್ರದಿ ।
ವಾಸ ಮಾಡಲು ಈ ಸುಜನ ಸಹ ।
ವಾಸ ಫಲ ದೊರಕುವದೆ ಶೋಧಿಸೆ ಸಕಲ ಶಾಸ್ತ್ರದಲಿ ॥

*

ಶ್ರೀವರನ ದಾಸರಿಗೆ ಭಕುತಿಲಿ ।
ಸೇವಕನು ನಾನೆಂದು ಪೇಳುವ ।
ಜೀವನವೆ ಸುಜ್ಜೀವಿ ಅವ ಹರಿದಾಸನೆಂದರಿದು ॥
ಆ ವನಾದರು ಆದಿಯಲಿ ಇದೆ ।
ಭಾವ ಶುದ್ಧದಿ ಓದಿ ಬರೆಯಲು ।
ಕಾವನಯ್ಯನು ಕರುಣಿಸುವನು ಸದಾವಕಾಲದಲಿ ॥

*

ಹರಿಕಥಾಮೃತಸಾರ ನೋಡುವ ।
ಪರಮಭಕ್ತರ ಜ್ಞಾನ ದೃಷ್ಟಿಗೆ ।
ವರ ಸುಲೋಚನದಂತೆ ಇಪ್ಪವು ಈ ಸುಪದ್ಯಗಳು ॥
ಅರಸಿಕರಿಗಿದು ಪೇಳಲಾಗದು ।
ಮುರಹರನ ದಾಸರಿಗೆ ತಪ್ಪದೆ ।
ಹರುಷ ಸುರಿಸುವನಿಹ ಪರದಿ ಗುರುಶ್ರೀಶವಿಠ್ಠಲನು ॥

———— * ————

ಹೀಗೆ ದಾಸ ವರೇಣ್ಯರ ಕೃತಿಗೆ ಮಹಾನುಭಾವ ಶ್ರೀಜಗನ್ನಾಥದಾಸರು ಮಾಡಿದ ಮಹೋಪಕಾರವನ್ನು ಸ್ಮರಿಸಿ ಕೃತಜ್ಞತೆ ಅರ್ಪಿಸಿದ್ದಾರೆ.

ನಾನು ಶಾಸ್ತ್ರ ಓದಿ, ತಿಳಿದವನಲ್ಲ, ಪಂಡಿತನೂ ಅಲ್ಲ, ಅನುಭವಿಯಂತೂ ಮೊದಲೇ ಅಲ್ಲ. ಕೇವಲ ಶ್ರವಣ ಆಸಕ್ತಿಯುಳ್ಳವ. ಹೀಗಿದ್ದರೂ ನನ್ನಿಂದ ಒಂದೆರಡು ಮಾತುಗಳನ್ನು ಬರೆಯಿಸಿ ಆಶೀರ್ವದಿಸಿದ ಪೂಜ್ಯ ಶ್ರೀ ಗುರುಮಧ್ವರಾವ ಉಪ್ಪಲಿ ತಾತಾ ಇವರಿಗೆ ನನ್ನ ಅನಂತ ಪ್ರಣಾಮಗಳು. ಅವರು ತೋರಿಸುವ ಈ ಪ್ರೀತಿ ಅಭಿಮಾನಕ್ಕೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಈ ಅವಕಾಶ ಕಲ್ಪಿಸಿ ಕೊಟ್ಟ ಪೂಜ್ಯ ಉಪ್ಪಲಿ ತಾತಾ ಅವರಿಗೆ ಮತ್ತೆ ಯೋಜಕರಿಗೆ ನನ್ನ ಧನ್ಯವಾದಗಳು.

ಹರಿಕಥಾಮೃತಸಾರ ಓದಿ ಆನಂದಿಸುವ ಹವ್ಯಾಸಿಗಳಿಗೆ, ಹಾಗು ಅಭ್ಯಾಸಮಾಡಿ ತಿಳಿಯಲು, ತಿಳಿದುಕೊಳ್ಳುವವರಿಗೆ, ಅನುಕೂಲವಾಗುವಂತೆ, ಇಲ್ಲಿ ಕಠಿಣ ಶಬ್ದಗಳಿಗೆ ಅರ್ಥಗಳನ್ನು ಕೊಡಲಾಗಿದೆ. ಪಂಡಿತ ವರೇಣ್ಯರಾದ ಶ್ರೀ ವಾಯಿ ಕೃಷ್ಣಾಚಾರ್ಯರು ಬರೆಸಿದ ಅರ್ಥಗಳನ್ನು ಸಂಗ್ರಹಿಸಿ, ಓದುಗರಿಗೆ ಸಹಾಯವಾಗುವಂತೆ ಪ್ರಕಾಶನಗೊಂಡ ಗ್ರಂಥವು ಪ್ರಾರಂಭದ ಓದುಗರಿಗೆ ಮೊದಲು ಗೊಂಡು ಎಲ್ಲರಿಗೂ ಉಪಯುಕ್ತವೆನಿಸಿದೆ. ಹರಿಕಥಾಮೃತಸಾರ ಅಭ್ಯಾಸಿಗರಿಗೆ ಕದಳಿ ಫಲದಂತೆ. ಕಠಿಣ ಶಬ್ದಗಳಿಗೆ ಅರ್ಥವು ಇಲ್ಲಿರುವದರಿಂದ ಈಗ ಅದು ಭಕ್ತರ ಕೈಯಲ್ಲಿ ಸುಲಿದ ಬಾಳೆಯ ಹಣ್ಣಿನಂತೆ ಕೊಡಲಾಗಿದೆ. ಈ ಗ್ರಂಥವನ್ನು ಅವಲೋಕಿಸಿ, ಸಾರವನ್ನು ಸವಿಯುವವರೆ ಸುಖಿಗಳು. ಧನ್ಯರು. ಸಾಧನೆಯ ಗ್ರಂಥವಾದ ಇದರ ಪ್ರಯೋಜನವನ್ನು ಸದ್ಭಕ್ತರೆಲ್ಲರೂ ಪಡೆದುಕೊಳ್ಳುವರೆಂಬುದರಲ್ಲಿ ಸಂದೇಹವಿಲ್ಲ.

ಆಧ್ಯಾತ್ಮಿಕ, ಧಾರ್ಮಿಕ, ಜ್ಞಾನಕಾರ್ಯಗಳಲ್ಲಿ ಸದಾ ಸೇವೆಯ ಆಸಕ್ತರು ಕೊಡುಗೈ ದಾನಿಗಳೂ , ಪೂಜ್ಯ ಶ್ರೀ ಉಪ್ಪಲಿ ತಾತಾ ಅವರ ಪ್ರೀತಿ ಪಾತ್ರರೂ ಆದ ಕಸ್ಬೆ ಶ್ರೀ ಮಧುಸೂದನರಾವ್ ಪಟವಾರಿ, ರಾಯಚೂರು ಇವರು ಈ ಗ್ರಂಥ ಪ್ರಕಾಶನಕ್ಕೆ ಉದಾರ

ದೇಣಿಗೆ ನೀಡಿ ಪುಣ್ಯವಂತರೆನಿಸಿದ್ದಾರೆ. ಹೀಗೆಯೇ ಪ್ರಕಾಶನ ಕಾರ್ಯಕ್ಕೆ ಶ್ರೀ ಎಂ.ಕೆ.ವಿಜಯೀಂದ್ರ ಮತ್ತು ಶ್ರೀನಿವಾಸ ಕಟ್ಟಿ ಹಾಗು ಮಿತ್ರರು ಸಕ್ರಿಯವಾಗಿ ಸಹಕರಿಸಿದ್ದಾರೆ. ಇವರೆಲ್ಲರಿಗೂ ಶ್ರೀಹರಿ ವಾಯು ಗುರುಗಳ ಸರ್ವ ಶ್ರೇಯಸ್ಸನ್ನು ದಯಪಾಲಿಸಲಿ ಎಂದು ಗುರುವಂತರ್ಗತ, ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀವಿಜಯ ವಿಠ್ಠಲನಲ್ಲಿ ಭಕ್ತಿ ಪೂರ್ವಕ ಪ್ರಾರ್ಥನೆಗಳು.

॥ ಶ್ರೀ ಮಧ್ವೇಶಾರ್ಪಿತ ಶ್ರೀ ಕೃಷ್ಣಾರ್ಪಣ ನಮಸ್ತು ॥

ಶರಣರ ಚರಣ ಧೂಳಿ
ಕೃಷ್ಣ ಜಾಲಿಹಾಳ
ಸತ್ಯನಾಥ ಕಾಲೋನಿ
ರಾಯಚೂರು.

ಓಂ ಶ್ರೀ ಲಕ್ಷ್ಮೀ ನರಸಿಂಹಾಯ ನಮಃ ಓಂ

**ಶ್ರೀ ಹರಿಕಥಾಮೃತಸಾರ**

# ಮಂಗಳಾಚರಣ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ ||
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ||

ಶ್ರೀರಮಣಿ ಕರಕಮಲ ಪೂಜಿತ
ಚಾರು ಚರಣ ಸರೋಜ ಬ್ರಹ್ಮ ಸಮೀರ
ವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖ ವಿನುತ ||
ನೀರಜ ಭವಾಂಡೋದಯ ಸ್ಥಿತಿ
ಲಯ ಕಾರಣನೆ ಕೈವಲ್ಯದಾಯಕ
ನಾರಸಿಂಹನೆ ನಮಿಪೆ ಕರುಣಿಪುದೆಮಗೆ ಮಂಗಳವಾ || ೧ ||

ಜಗದುದರನತಿವಿಮಲ ಗುಣ
ರೂಪಗಳನಾಲೋಚನದಿ ಭಾರತ ನಿಗಮ ತತಿ
ಗಳತಿಕ್ರಮಿಸಿ ಕ್ರಿಯಾವಿಶೇಷಗಳ ||
ಬಗೆಬಗೆಯ ನೂತನವ ಕಾಣುತ
ಮಿಗೆಹರುಷದಿಂ ಪೊಗಳಿಹಿಗ್ಗುವ
ತ್ರಿಗುಣಮಾನಿ ಮಹಾಲಕುಮಿ ಸಂತೈಸಲನುದಿನವು || ೨ ||

ನಿರುಪಮಾನಂದಾತ್ಮಭವನಿ
ರ್ಜರ ಸಭಾ ಸಂಸೇವ್ಯ ಋಜುಗಣ
ದರಸೇ, ಸತ್ವಪ್ರಚುರವಾಣೀ ಮುಖಸರೋಜೇನ ||
ಗರುಡ, ಶೇಷ, ಶಶಾಂಕದಳ ಶೇ
ಖರರ ಜನಕ ಜಗದ್ಗುರುವೇ, ತ್ವ
ಚ್ಚರಣಗಳಿಗಭಿವಂದಿಸುವೇ ಪಾಲಿಪುದು ಸನ್ಮತಿಯ || ೩ ||

ಆರು ಮೂರೆರಡೊಂದು ಸಾವಿರ
ಮೂರೆರಡು ಶತಶ್ವಾಸಜಪಗಳ ಮೂರುವಿಧ
ಜೀವರೊಳಗಬ್ಜಜ ಕಲ್ಪ ಪರಿಯಂತ ||
ತಾರತಿಸಿ ಸತ್ವರಿಗೆ ಸುಖ ಸಂಸಾರ ಮಿಶ್ರ
ರಿಗಧಮ ಜನರಿಗಪಾರದುಃಖಗಳೀವ ಗುರು
ಪವಮಾನ ಸಲಹೆಮ್ಮ || ೪ ||

ಚತುರ ವದನನ ರಾಣಿ ಅತಿರೋ
ಹಿತವಿಮಲ ವಿಜ್ಞಾನಿ ನಿಗಮ
ಪ್ರತತಿಗಳಿಗಭಿಮಾನಿ ವೀಣಾ ಪಾಣಿ ಬ್ರಹ್ಮಾಣಿ ||
ನತಿಸಿ ಬೇಡುವೆ ಜನನಿ ಲಕುಮಿ
ಪತಿಯ ಗುಣಗಳ ತುತಿಪುದಕೆ ಸ
ನ್ಮತಿಯ ಪಾಲಿಸಿ ನೆಲಿಸು ನೀ ಮದ್ವದನ ಸದನದಲಿ || ೫ ||

ಕೃತಿರಮಣ ಪ್ರದ್ಯುಮ್ನ ನಂದನೇ
ಚತುರವಿಂಶತಿ ತತ್ವ ಪತಿ ದೇ -
ವತೆಗಳಿಗೆ ಗುರುವೆನಿಸುತಿಹ ಮಾರುತನ ನಿಜಪತ್ನಿ ||
ಸತತ ಹರಿಯಲಿ ಗುರುಗಳಲಿ ಸ -
ದ್ರತಿಯ ಪಾಲಿಸಿ ಭಾಗವತ ಭಾ -
ರತ ಪುರಾಣ ರಹಸ್ಯ ತತ್ವಗಳರುಪು ಕರುಣದಲಿ || ೬ ||

ವೇದಪೀಠ ವಿರಂಚಿ ಭವ ಶ -
ಕ್ರಾದಿ ಸುರವಿಜ್ಞಾನ ದಾಯಕ
ಮೋದಚಿನ್ಮಯ ಗಾತ್ರಲೋಕಪವಿತ್ರಸುಚರಿತ್ರ ||
ಛೇದಭೇದ ವಿಷಾದ ಕುಟಿಲಾಂ
ತಾದಿ ಮಧ್ಯ ವಿದೂರ ಅದಾ
ನಾದಿ ಕಾರಣ ಬಾದರಾಯಣ ಪಾಹಿ ಸತ್ರಾಣ || ೭ ||

ಕ್ಷಿತಿಯೊಳಗೆ ಮಣಿಮಂತ ಮೊದಲಾ -
ದತಿ ದುರಾತ್ಮರು ವಂದಧಿಕ ವಿಂ -
ಶತಿ ಕುಭಾಷ್ಯವರಚಿಸೆ ನಡುಮನೆಯೆಂಬ ಬ್ರಾಹ್ಮಣನ ||

ಸತಿಯ ಜಠರ ದೊಳವತರಿಸಿ ಭಾ -
ರತಿರಮಣ ಮಧ್ವಾಭಿಧಾನದಿ
ಚತುರದಶಲೋಕದಲಿ ಮೆರೆದ ಪ್ರತಿಮಗೊಂದಿಸುವೆ || ೮ ||

ಪಂಚ ಭೇದಾತ್ಮಕ ಪ್ರಪಂಚಕೆ
ಪಂಚರೂಪಾತ್ಮಕನೇ ದೈವಕ
ಪಂಚಮುಖ ಶಕ್ರಾದಿಗಳು ಕಿಂಕರರು ಶ್ರೀಹರಿಗೆ ||
ಪಂಚವಿಂಶತಿ ತತ್ವತರತಮ
ಪಂಚಿಕೆಗಳನು ಪೇಳ್ದ ಭಾವಿ ವಿ-
ರಂಚಿನೆನಿಪಾನಂದ ತೀರ್ಥರ ನೆನವೆನನುದಿನವು || ೯ ||

ವಾಮದೇವ ವಿರಿಂಚಿ ತನಯ ಉ -
ಮಾಮನೋಹರ ಉಗ್ರ ಧೂರ್ಜಟಿ
ಸಾಮಜಾಜಿನ ವಸನ ಭೂಷಣ ಸುಮನ ಸೋತ್ತಂಸಾ ||
ಕಾಮಹರ ಕೈಲಾಸಮಂದಿರ
ಸೋಮಸೂರ್ಯಾನಲ ವಿಲೋಚನ
ಕಾಮಿತಪ್ರದ ಕರುಣಿಸೆಮಗೆ ಸದಾ ಸುಮಂಗಳವಾ || ೧೦ ||

ಕೃತ್ತಿವಾಸನೆ ಹಿಂದೆ ನೀ ನಾ -
ಲ್ವತ್ತು ಕಲ್ಪ ಸಮೀರನಲಿ ಶಿ -
ಷ್ಯತ್ವ ವಹಿಸ್ಯಖಿಳಾಗಮಾರ್ಥಗಳೋದಿ ಜಲಧಿಯೊಳು ||
ಹತ್ತು ಕಲ್ಪದಿ ತಪವ ಗೈದಾ -
ದಿತ್ಯರೊಳುಗುತ್ತಮನೆನಿಸಿ ಪುರು -
ಷೋತ್ತಮನ ಪರ್ಯಂಕ ಪದ ವೈದಿದೋಯೋ ಮಹದೇವಾ || ೧೧ ||

ಪಾಕಶಾಸನ ಮುಖ್ಯ ಸಕಲದಿ -
ವೌಕಸರಿಗಭಿನಮಿಪೆ ಋಷಿಗಳಿ -
ಗೇಕ ಚಿತ್ತದಿ ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ ||
ಆ ಕಮಲನಾಭಾದಿ ಯತಿಗಳ -
ನೀಕಕಾನಮಿಸುವೆನು ಬಿಡದೆ ರ -
ಮಾಕಳತ್ರನ ದಾಸವರ್ಗಕೆ ನಮಿಪೆನನವರತಾ || ೧೨ ||

ಪರಿಮಳವು ಸುಮನದೊಳಗನಲನು
ಅರಣಿಯೊಳಗಿಪ್ಪಂತೆ ದಾಮೋ
ದರನು ಬ್ರಹ್ಮಾದಿಗಳ ಮನದಲಿ ತೋರಿ ತೋರದಲೆ ||
ಇರುತಿಹ ಜಗನ್ನಾಥ ವಿಠಲನ
ಕರುಣ ಪಡೆವ ಮುಮುಕ್ಷು ಜೀವರು
ಪರಮ ಭಾಗವತರನು ಕೊಂಡಾಡುವದು ಪ್ರತಿದಿನವೂ || ೧೩ ||

# ೨ ಕರುಣಾ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ ||
ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಶ್ರವಣ ಮನಕಾನಂದ ವೀವುದು
ಭವಜನಿತ ದುಃಖಗಳ ಕಳೆವದು
ವಿವಿಧ ಭೋಗಗಳಿಹಪರಂಗಳಲಿತ್ತು ಸಲಹುವುದು ||
ಭುವನ ಪಾವನ ವೆನಿಪ ಲಕುಮೀ
ಧವನ ಮಂಗಳ ಕಥೆಯು ಪರಮೋ
ತ್ಸವದಿ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ || ೧ ||

ಮಳೆಯನೀರೋಣಿಯಲಿ ಹರಿಯಲು
ಬಳಸರೂರೊಳಗಿದ್ದ ಜನರಾ
ಜಲವು ಹೆದ್ದೊರೆಗೂಡೆ ಮಜ್ಜನ ಪಾನಗೈದಪರು ||
ಕಲುಷ ವಚನಗಳಾದರಿವು ಬಾಂ -
ಬೊಳೆಯ ಪೆತ್ತನ ಪಾದ ಮಹಿಮಾ
ಜಲಧಿ ಪೊಕ್ಕದರಿಂದ ಮಾಣ್ಪರೇ ಮಹೀಸುರರು || ೨ ||

ಕೃತಿ ತತಿಗಳಿಗಭಿಮಾನಿ ಲಕುಮಿ -
ಸ್ತುತಿ ಗಳಿಗೆ ಗೋಚರಿಸದಪ್ರತಿ
ಹತ ಮಹೈಶ್ವರ್ಯಾದ್ಯಖಿಳ ಸದ್ಗುಣಗಣಾಂಬೋಧಿ ||

ಪ್ರತಿ ದಿವಸ ತನ್ನಂಘ್ರಿ ಸೇವಾ -
ರತ ಮಹಾತ್ಮರು ಮಾಡುತಿಹ ಸಂ -
ಸ್ತುತಿಗೆ ವಶನಾಗುವನಿವನ ಕಾರಣ್ಯ ಕೇನೆಂಬೇ || ೩ ||

ಮನವಚನಕತಿ ದೂರ ನೆನೆವವರ -
ನನುಸರಿಸಿ ತಿರುಗುವನು ಜಾಹ್ನವೀ
ಜನಕ ಜನರೊಳಗಿದ್ದು ಜನಿಸುವ ಜಗದುದರ ತಾನು ||
ಘನ ಮಹಿಮ ಗಾಂಗೇಯನುತ ಗಾ
ಯನವ ಕೇಳುತ ಗಗನ ಚರವಾ
ಹನ ದಿವೌಕಸರೊಡನೆ ತಿರುಗುವನು ಮನೆ ಮನೆಗಳಲಿ || ೪ ||

ಮಲಗಿ ಪರಮಾದರದಿ ಪಾಡಲು
ಕುಳಿತು ಕೇಳುವ ಕುಳಿತು ಪಾಡಲು
ನಿಲುವ ನಿಂತರೆ ನಲಿವ ನಲಿವರೆ ಒಲಿವ ನಿಮಗೆಂಬಾ ||
ಸುಲಭನೋ ಹರಿ ತನ್ನವರ ನರ
ಘಳಿಗೆ ಬಿಟ್ಟಗಲನು ರಮಾಧವ
ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ || ೫ ||

ಮನದೊಳಗೆ ತಾನಿಪ್ಪ ಮನವೆಂ
ದೆನಿಸಿಕೊಂಬನು ಮನದ ವೃತ್ತಿಗ
ಳನುಸರಿಸಿ ಭೋಗಂಗಳೀವನು ತ್ರಿವಿಧ ಚೇತನಕೆ ||
ಮನವನಿತ್ತರೆ ತನ್ನನೀವನು
ತನುವ ದಂಡಿಸಿ ದಿನದಿನದಿ ಸಾ
ಧನವವ ಮಾಳ್ಪಗಿರಿತ್ತಪನು ಸ್ವರ್ಗಾದಿ ಭೋಗಗಳ || ೬ ||

ಪರಮ ಸತ್ಪುರುಷಾರ್ಥ ರೂಪನು
ಹರಿಯು ಲೋಕಕೆಯುಂಡು ಪರಮಾ
ದರದಿ ಸದುಪಾಸನೆಯ ಗೈವರಿಗಿತ್ತಪನು ತನ್ನ ||
ಮರೆದು ಧರ್ಮಾರ್ಥಗಳ ಕಾಮಿಸು
ವರಿಗೆ ನಗುತತಿ ಶೀಘ್ರದಿಂದಲಿ
ಸುರಪ ತನಯ ಸುಯೋಧನರಿಗಿತ್ತಂತೆ ಕೊಡುತ್ತಿಪ್ಪ || ೭ ||

ಜಗವನೆಲ್ಲ ನಿರ್ಮಿಸುವ ನಾಲ್
ಮೊಗನೊಳಗೆ ತಾನಿದ್ದು ಸಲಹುವ
ಗಗನ ಕೇಶನೊಳಿದ್ದು ಸಂಹರಿಸುವನು ಲೋಕಗಳ ||
ಸ್ವಗತ ಭೇದ ವಿವರ್ಜಿತನು
ಸರ್ವಗ ಸದಾನಂದೈಕ ದೇಹನು ಬಗೆ
ಬಗೆಯ ನಾಮದಲಿ ಕರೆಸುವ ಭಕುತರನು ಪೊರೆವ || ೮ ||

ಒಬ್ಬನಲಿ ನಿಂತಾಡುವನು ಮ -
ತ್ತೊಬ್ಬನಲಿ ನೋಡುವನು ಬೇಡುವ
ನೊಬ್ಬನಲಿ ನೀಡುವನು ಮಾತಾಡುವನು ಬೆರಗಾಗಿ ||
ಅಬ್ಬರದ ಹೃದ್ವ್ಯೋವನಿವ ಮ
ತ್ತೊಬ್ಬರನು ಲೆಕ್ಕಿಸನು ಲೋಕದೊ -
ಳೊಬ್ಬನೇ ತಾ ಬಾಧ್ಯ ಬಾಧಕನಾಹ ನಿರ್ಭೀತ || ೯ ||

ಶರಣಜನ ಮಂದಾರ ಶಾಶ್ವತ
ಕರುಣಿ ಕಮಲಾಕಾಂತ ಕಾಮದ
ಪರಮ ಪಾವನತರ ಸುಮಂಗಳ ಚರಿತ ಪಾರ್ಥ ಸಖ ||
ನಿರುಪಮಾನಂದಾತ್ಮ ನಿರ್ಗತ
ದುರಿತ ದೇವವರೇಣ್ಯನೆಂದಾ -
ದರದಿ ಕರೆಯಲು ಬಂದೊದಗುವನು ತನ್ನವರ ಬಳಿಗೆ || ೧೦ ||

ಜನನಿಯನು ಕಾಣದಿಹ ಬಾಲಕ
ನೆನೆನೆನೆದು ಹಲುಬುತಿರೆ ಕತ್ತಲೆ
ಮನೆಯೊಳಗಿದ್ದವನ ನೋಡುತ ನಗುತ ಹರುಷದಲಿ ||
ತನಯನಂ ಬಿಗಿದಪ್ಪಿ ರಂಜಿಸಿ
ಕನಲಿಕೆಯ ಕಳೆವಂತೆ ಮಧುಸೂ -
ದನನೂ ತನ್ನವರಿದ್ದೆಡೆಗೆ ಬಂದೊದಗಿ ಸಲಹುವನು || ೧೧ ||

ಇಟ್ಟಿಕಲ್ಲಲು ಭಕುತಿಯಿಂದಲಿ
ಕೊಟ್ಟ ಭಕುತಗೆ ಮೆಚ್ಚಿ ತನ್ನನು
ಕೊಟ್ಟ ಬಡ ಬ್ರಾಹ್ಮಣನ ಒಪ್ಪಿಡಿಯವಲಿಗಖಿಳಾರ್ಥ ||

ಕೆಟ್ಟ ಮಾತುಗಳಿಂದ ಚೈದ್ಯನ
ಪೊಟ್ಟೆಯೊಳಿಗಿಂಬಿಟ್ಟು ಬಾಣದ
ಲಿಟ್ಟ ಭೀಷ್ಮನವಗುಣಗಳೆಣಿಸಿದನೇನೊ ಕರುಣಾಳೊ || ೧೨ ||

ಧನವ ಸಂರಕ್ಷಿಸುವ ಫಣಿತಾ -
ನುಣದೆ ಮತ್ತೊಬ್ಬರಿಗೆ ಕೊಡದನು -
ದಿನದಿ ನೋಡುತ ಸುಖಿಸುವಂದದಿ ಲಕುಮಿವಲ್ಲಭನು ||
ಪ್ರಣತರನು ಕಾದಿಹನು ನಿಷ್ಕಾ -
ಮದಿ ನಿತ್ಯಾನಂದಮಯ ದು -
ರ್ಜನರ ಸೇವೆಯನೊಲ್ಲನಪ್ರತಿಮಲ್ಲ ಜಗಕೆಲ್ಲ || ೧೩ ||

ಬಾಲಕನ ಕಲ ಭಾಷೆ ಜನನಿಯು
ಕೇಳಿ ಸುಖಪಡುವಂತೆ ಲಕುಮಿ
ಲೋಲ ಭಕುತರು ಮಾಡುತಿಹ ಸಂಸ್ತುತಿಗೆ ಹಿಗ್ಗುವನು ||
ತಾಳಿ ತನ್ನವರಲ್ಲಿ ಮಾಡುವ
ಹೇಳನವ ಹೆದ್ದೈವ ವಿದುರನ
ಆಲಯದಿ ಪಾಲುಂಡ ಕುರುಪನ ಮಾನವನೆಕೊಂಡಾ || ೧೪ ||

ಸ್ಮರಿಸುವರ ಅಪರಾಧಗಳ ತಾ
ಸ್ಮರಿಸ ಸಕಲೇಷ್ಟಪ್ರದಾಯಕ
ಮರಳಿ ತನಗರ್ಪಿಸಲು ಕೊಟ್ಟುದನಂತ ಮಡಿಮಾಡಿ ||
ಪರಿ ಪರಿಯಲುಂಡುಣಿಸಿ ಸುಖ ಸಾ -
ಗರದಿ ಲೋಲಾಡಿಸುವ ಮಂಗಳ
ಚರಿತ ಚಿನ್ಮಯ ಗಾತ್ರ ಲೋಕಪವಿತ್ರ ಸುಚರಿತ್ರ || ೧೫ ||

ಏನು ಕರುಣಾನಿಧಿಯೊ ಹರಿ ಮ
ತ್ತೇನು ಭಕ್ತಾಧೀನನೋ ಇ -
ನ್ನೇನು ಈತನ ಲೀಲೆ ಇಚ್ಛಾಮಾತ್ರದಲಿ ಜಗವ ||
ತಾನೆ ಸೃಜಿಸುವ ಪಾಲಿಸುವ ನಿ -
ರ್ವಾಣ ಮೊದಲಾದಖಿಳ ಲೋಕ
ಸ್ಥಾನದಲಿ ಮುತ್ತವರನಿತ್ಯಾನಂದ ಪಡಿಸುವನು || ೧೬ ||

ಜನಪ ಮೆಚ್ಚಿದರೀವ ಧನವಾ -
ಹನ ವಿಭೂಷಣ ವಸನ ಭೂಮಿಯು
ತನುಮನಗಳಿತ್ತಾ ದರಿಪರುಂಟೇನೊ ಲೋಕದೊಳು ||
ಅನವರತ ನೆನೆವವರನಂತಾ -
ಸನವೆ ಮೊದಲಾದಾಲಯ ದೊಳಿ
ಟ್ಟಣುಗನಂದದಲವರ ವಶನಾಗುವ ಮಹಾಮಹಿಮ || ೧೭ ||

ಭುವನ ಪಾವನ ಚರಿತ ಪುಣ್ಯ
ಶ್ರವಣ ಕೀರ್ತನ ಪಾಪನಾಶನ
ಕವಿಭಿರೀಡಿತ ಕೈರವದಳಶ್ಯಾಮ ನಿಸ್ಸೀಮ ||
ಯುವತಿ ವೇಷದಿ ಹಿಂದೆ ಗೌರೀ
ಧವನ ಮೋಹಿಸಿ ಕೆಡಿಸಿ ಉಳಿಸಿದ
ಇವನ ಮಾಯುವ ಗೆಲುವನಾವನು ಈ ಜಗತ್ರಯದಿ || ೧೮ ||

ಪಾಪ ಕರ್ಮವ ಸಹಿಸುವಡೆ ಲ
ಕ್ಷ್ಮೀ ಪತಿಗೆ ಸಮರಾದ ದಿವಿಜರ
ನೀ ಪಯೋಜ ಭವಾಂಡದೊಳಗಾವಲ್ಲಿ ನಾ ಕಾಣೆ ||
ಗೋಪ ಗುರುವಿನ ಮಡದಿ ಭೃಗು ನಗ
ಚಾಪ ಮೊದಲಾದವರು ಮಾಡಿದ ಮ
ಹಾಪರಾಧಗಳೆಣಿಸಿದನೆ ಕರುಣಾ ಸಮುದ್ರ ಹರಿ || ೧೯ ||

ಅಂಗುಟಾಗ್ರದಿ ಜನಿಸಿದಮರತ
ರಂಗಿಣಿಯು ಲೋಕತ್ರಯಗಳಘ
ಹಿಂಗಿಸುವಳವ್ಯಾಕೃತಾಕಾಶಾಂತ ವ್ಯಾಪಿಸಿದ ||
ಇಂಗಡಲ ಮಗಳೊಡೆ ಯನಂಗೋ
ಪಾಂಗಗಳಲಿಪ್ಪಮಲನಂತ ಸು-
ಮಂಗಳ ಪ್ರದ ನಾಮ ಪಾವನ ಮಾಳ್ಪದೇ ನರಿದು || ೨೦ ||

ಕಾಮಧೇನು ಸುಕಲ್ಪತರು ಚಿಂ -
ತಾಮಣಿಗಳಮರೇಂದ್ರ ಲೋಕದಿ
ಕಾಮಿತಾರ್ಥಗಳೀವವಲ್ಲದೆ ಸೇವೆ ಮಾಳ್ಪರಿಗೆ ||

ಶ್ರೀ ಮುಕುಂದನ ಪರಮ ಮಂಗಳ
ನಾಮ ನರಕಸ್ಥರನ ಸಲಹಿತು
ಪಾಮರರ ಪಂಡಿತರೆನಿಸಿ ಪುರುಷಾರ್ಥಕೊಡುತಿಹುದು || ೨೧ ||

ಮನದೊಳಗೆ ಸುಂದರ ಪದಾರ್ಥವ
ನೆನೆದು ಕೊಡೆ ಕೈಕೊಂಡು ಬಲು ನೂ -
ತನ ಸುಶೋಭಿತಗಂಧ ಸುರಸೋಪೇತ ಫಲರಾಶಿ ||
ದ್ಯು ನದಿ ನಿವಹಗಳಂತೆ ಕೊಟ್ಟವ -
ರನು ಸದಾ ಸಂತೈಸುವನು ಸ -
ದ್ಗುಣವ ಕದ್ದವರಘವಕ ದಿವನು ಅನಘನೆಂದೆನಿಸಿ || ೨೨ ||

ಚೇತನಾ ಚೇತನ ವಿಲಕ್ಷಣ
ನೂತನ ಪದಾರ್ಥಗಳೊಳಗೆ ಬಲು
ನೂತನತಿಸುಂದರಕೆ ಸುಂದರ ರಸಕೆ ರಸರೂಪ ||
ಜಾತರೂಪೋದರ ಭವಾದ್ಯರೊ -
ಳಾತತ ಪ್ರತಿಮ ಪ್ರಭಾವ ಧ -
ರಾತಳದೊಳೆಮ್ಮೊಡನೆಯಾಡುತಲಿಪ್ಪ ನಮ್ಮಪ್ಪ || ೨೩ ||

ತಂದೆ ತಾಯ್ಗಳು ತಮ್ಮ ಶಿಶುವಿಗೆ
ಬಂದ ಭಯಗಳ ಪರಿಹರಿಸಿ ನಿಜ
ಮಂದಿರದಿ ಬೇಡಿದುದನಿತ್ತಾದರಿಸುವಂದದಲಿ ||
ಹಿಂದೆ ಮುಂದೆಡ ಬಲದಿ ವಳ ಹೊರ
ಗಿಂದಿರೇಶನು ತನ್ನವರ ನೆಂ -
ದೆಂದು ಸಲಹುವನಾಗಸದವೋಲ್ ಎತ್ತನೋಡಿದರೂ || ೨೪ ||

ಒಡಲ ನೆಳಲಂದದಲಿ ಹರಿಯು -
ಮ್ಮೊಡನೆ ತಿರುಗುವವಂದರಕ್ಷಣ
ಬಿಡದೆ ಬೆಂಬಲನಾಗಿ ಭಕ್ತಾಧೀನನೆಂದೆನಿಸಿ ||
ತಡೆವ ದುರಿತೌಘಗಳ ಕಾಮದ
ಕೊಡುವ ಸಕಲೇಷ್ಟಗಳ ಸಂತತ
ನಡೆವ ನಮ್ಮಂದದಲಿ ನವ ಸುವಿಶೇಷ ಸನ್ಮಹಿಮಾ || ೨೫ ||

ಬಿಟ್ಟವರ ಭವಪಾಶದಿಂದಲಿ
ಕಟ್ಟುವನು ಬಹು ಕಠಿಣನಿವ ಶಿ -
ಷ್ಟೇಷ್ಟನೆಂದರಿದನವರತ ಸದ್ಭಕ್ತಿ ಪಾಶದಲಿ ||
ಕಟ್ಟುವರ ಭವಕಟ್ಟು ಬಿಡಿಸುವ
ಸಿಟ್ಟಿಸವನಿವನಲ್ಲ ಕಾಮದ
ಕೊಟ್ಟು ಕಾವನು ಸಕಲ ಸೌಖ್ಯವನಿಹಪರಂಗಳಲಿ || ೨೬ ||

ಕಣ್ಣಿಗೆವೆಯಂದದಲಿ ಕೈ ಮೈ
ತಿಣ್ಣಿಗೊದಗುವ ತೆರದಿ ಪಲ್ಗಳು
ಪಣ್ಣು ಫಲಗಳನಗಿದು ಜಿಹ್ವೆಗೆ ರಸವನೀವಂತೆ ||
ಪುಣ್ಯ ಫಲಗಳ ನೀವುದಕೆ ನುಡಿ -
ವೆಣ್ಣೆ ನಾಣ್ಯಾಂಡದೊಳು ಲಕ್ಷ್ಮಣ
ನಣ್ಣನೊದಗುವ ಭಕ್ತರವಸರಕಮರಗಣ ಸಹಿತ || ೨೭ ||

ಕೊಟ್ಟದನು ಕೈಗೊಂಬರೆಕ್ಷಣ
ಬಿಟ್ಟಗಲ ತನ್ನವರದುರಿತಗ -
ಳಟ್ಟುವನು ದೂರದಲಿ ದುರಿತಾರಣ್ಯಪಾವಕನು ||
ಬೆಟ್ಟಬೆನ್ನಲಿ ಹೊರಿಸಿದವರೊಳು
ಸಿಟ್ಟು ಮಾಡಿದನೇನೊ ಹರಿ ಕಂ -
ಗೆಟ್ಟ ಸುರರಿಗೆ ಸುಧೆಯನುಣಿಸಿದ ಮುರಿದನಹಿತರನಾ || ೨೮ ||

ಖೇದ ಮೋದ ಜಯಾಪಜಯ ಮೊದ -
ಲಾದ ದೋಷಗಳಿಲ್ಲ ಚಿನ್ಮಯ
ಸಾದರದಿ ತನ್ನಂಘ್ರಿ ಕಮಲವ ನಂಬಿತುತಿಸುವರ ||
ಕಾದು ಕೊಂಡಿಹ ಪರಮ ಕರುಣ ಮ
ಹೋದಧಿಯು ತನ್ನವರು ಮಾಡಿದಪ -
ರಾಧಗಳ ನೋಡದೆ ಸಲಹುವ ಸರ್ವ ಕಾಮದನು || ೨೯ ||

ಮೀನ ಕೂರ್ಮ ವರಾಹ ನರಪಂ -
ಚಾನನಾತುಳ ಶೌರ್ಯ ವಾಮನ
ರೇಣುಕಾತ್ಮಜ ರಾವಣಾದಿ ನಿಶಾಚರ ಧ್ವಂಸಿ ||

ಧೇನುಕಾಸುರ ಮಥನ ತ್ರಿಪುರವ
ಹಾನಿ ಗೈಸಿದ ನಿಪುಣ ಕಲಿಮುಖ
ದಾನವರ ಸಂಹರಿಸಿ ಧರ್ಮಾದಿ ಕಾಯ್ದ ಸುಜನರನು || ೩೦ ||

ಶ್ರೀ ಮನೋಹರ ಶಮಲ ವರ್ಜಿತ
ಕಾಮಿತಪ್ರದ ಕೈರವದಳ
ಶ್ಯಾಮ ಶಬಲ ಶರಣ್ಯ ಶಾಶ್ವತ ಶರ್ಕರಾಕ್ಷಸಖಾ ||
ಸಾಮಸನ್ನುತ ಸಕಲ ಗುಣಗಣ
ಧಾಮ ಶ್ರೀ ಜಗನ್ನಾಥ ವಿಠ್ಠಲ
ಈ ಮಹಿಯೊಳುವತರಿಸಿ ಸಲಹಿದ ಸಕಲ ಸುಜನರನು || ೩೧ ||

# ೩. ವ್ಯಾಪ್ತಿ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಪುರುಷ ರೂಪತ್ರಯ ಪುರಾತನ
ಪುರುಷ ಪುರುಷೋತ್ತಮ ಕ್ಷರಾಕ್ಷರ
ಪುರುಷ ಪೂಜಿತ ಪಾದ ಪೂರ್ಣಾನಂದ ಜ್ಞಾನಮಯ ||
ಪುರುಷ ಸೂಕ್ತಸುಮೇಯ ತತ್ತ
ತ್ಪುರುಷ ಹೃತ್ಪುಷ್ಕರ ನಿಲಯ ಮಹಾ
ಪುರುಷಜಾಂಡಾಂತರದಿ ವ್ಯಾಪ್ತ ನಿರ್ಲಿಪ್ತ || ೧ ||

ಸ್ತ್ರೀ ನಪುಂಸಕ ಪುರುಷ ಭೂ ಸಲಿ
ಲಾನಲಾನಿಲ ಗಗನ ಮನ ಶಶಿ
ಭಾನು ಕಾಲ ಗುಣ ಪ್ರಕೃತಿಯೊಳಗೊಂದು ತಾನಲ್ಲ ||
ಏನು ಇವನ ಮಹಾಮಹಿಮೆ ಕಡೆ -
ಗಾಣರಜ ಭವ ಶಕ್ರ ಮುಖರು ನಿ -
ಧಾನಿಸಲು ಮಾನವರಿಗಳವಡುವದೇ ವಿಚಾರಿಸಲು || ೨ ||

ಗಂಧ ರಸ ರೂಪ ಸ್ಪರಶ ರ -
ಬ್ದೊಂದು ತಾನಲ್ಲದರದರ ಹೆಸ
ರಿಂದ ಕರೆಸುತ ಜೀವರಿಗೆ ತರ್ಪಕನು ತಾನಾಗಿ ||
ಪೊಂದಿ ಕೊಂಡಿಹ ಪರಮ ಕರುಣಾ
ಸಿಂಧು ಶಾಶ್ವತ ಮನವೆ ಮೊದಲಾ
ದಿಂದ್ರಿಯಗಳೊಳಗಿದ್ದು ಭೋಗಿಸುತಿಹನು ವಿಷಯಗಳ || ೩ ||

ಶ್ರವಣ ನಯನ ಘ್ರಾಣ ತ್ವಗ್ರಸ -
ನಿವಗಳಲಿ ವಾಕ್ ಪಾಣಿ ಪಾದಾ -
ದ್ಯವಯವಗಳಲಿ ತದ್ಗುಣಗಳಲಿ ತತ್ಪತಿಗಳೊಳಗೆ ||
ಪ್ರವಿತತನು ತಾನಾಗಿ ಕೃತಿಪತಿ
ವಿವಿಧ ಕರ್ಮವ ಮಾಡಿ ಮಾಡಿಸಿ
ಭವಕೆ ಕಾರಣನಾಗಿ ತಿರಿಗಿಸುತಿಹನು ತಿಳಿಸದಲೆ || ೪ ||

ಗುಣಿ ಗುಣಗಳೊಳಿದ್ದು ಗುಣಿ ಗುಣ
ನೆನಿಸುವನು ಗುಣಬದ್ಧನಾಗದೆ
ಗುಣಜ ಪುಣ್ಯಾಪುಣ್ಯ ಫಲ ಬ್ರಹ್ಮಾದಿ ಚೇತನಕೆ ||
ಉಣಿಸುತವರೊಳಗಿದ್ದು ವೃಜಿನಾ
ರ್ದನ ಚಿದಾನಂದೈಕ ದೇಹನು
ಕೊನೆಗೆ ಸಚರಾಚರ ಜಗದ್ಭುಕುವೆನಿಪನವ್ಯಯನು || ೫ ||

ವಿದ್ಯ ತಾನೆಂದೆನಿಸಿ ಕೊಂಬನಿ -
ರುದ್ಧ ದೇವನು ಸರ್ವ ಜೀವರ
ಬುದ್ಧಿಯೊಳ್ ನೆಲಸಿದ್ದು ಕೃತಿಪತಿ ಬುದ್ಧಿಯನಿಸುವನು ||
ಸಿದ್ಧಿಯೆನಿಸುವ ಸಂಕರ್ಷಣ ಪ್ರ -
ಸಿದ್ಧ ನಾಮಕ ವಾಸುದೇವನ -
ವದ್ಯ ರೂಪ ಚತುಷ್ಟಯಗಳರಿತವನೆ ಪಂಡಿತನು || ೬ ||

ತನು ಚತುಷ್ಟಯಗಳೊಳು ನಾರಾ -
ಯಣನು ಹೃತ್ಕಮಲಾಖ್ಯ ಸಿಂಹಾ -
ಸನದೊಳನಿರುದ್ಧಾದಿ ರೂಪಗಳಿಂದ ಶೋಭಿಸುತಾ ||

ತೃಣ ಕೃತಾಲಯದೊಳಗೆ ಪೊಗೆ ಸಂ
ದಣಿಸಿ ಪ್ರತಿ ಛಿದ್ರದಲಿ ಪೊರಮೊ
ಟ್ಟನಲನಿರವನು ತೋರಿ ತೋರದಲಿಪ್ಪ ತೆರನಂತೆ ||
ವನಜಜಾಂಡದೊಳಖಿಳ ಜೀವರ
ತನುವಿನೊಳಹೊರಗಿದ್ದು ಕಾಣಿಸ -
ದನಿಮಿಶೇಷನು ಸಕಲ ಕರ್ಮವ ಮಾಳ್ಪನವರಂತೆ || ೧೨ ||

ಪಾದಪಗಳಡಿಗೆರೆಯೆ ಸಲಿಲವು
ತೋದು ಕೊಂಬೆಗಳುಬ್ಬಿ ಪುಷ್ಪ
ಸ್ವಾದು ಫಲವೀವಂದದಲಿ ಸರ್ವೇಶ್ವರನು ಜನರಾ ||
ರಾಧನೆಯ ಕೈಕೊಂಡು ಬ್ರಹ್ಮ ಭ
ವಾದಿಗಳ ನಾಮದಲಿ ಫಲ ವಿ -
ತ್ತಾದರಿಸುವನು ತನ್ನ ಮಹಿಮೆಯ ತೋರಗೊಡ ಜಗಕೆ || ೧೩ ||

ಶ್ರುತಿ ತತಿಗಳಿಗೆ ಗೋಚರಿಸದ-
ಪ್ರತಿಮಜಾನಂದಾತ್ಮನಚ್ಯುತ
ವಿತತ ವಿಶ್ವಾಧಾರ ವಿಧ್ಯಾಧೀಶ ವಿಧಿಜನಕ ||
ಪ್ರತಿ ದಿವಸ ಚೇತನರೊಳಗೆ ಪ್ರಾ -
ಕೃತ ಪುರುಷನಂದದಲಿ ಸಂಚರಿ
ಸುತ ನಿಯಮ್ಯ ನಿಯಾಮಕನು ತಾನಾಗಿ ಸಂತೈಪ || ೧೪ ||

ಮನ ವಿಷಯದೊಳಗಿರಿಸಿ ವಿಷಯವ
ಮನದೊಳಗೆ ನೆಲೆಗೊಳಿಸಿ ಬಲು ನೂ -
ತನವು ಸಮಿಚೀನವಿದುಪಾದೇಯವೆಂದರುಹಿ ||
ಕನಸಲಾದರು ತನ್ನ ಪಾದದ
ನೆನೆವನೀಯದೇ ಸರ್ವರೊಳಗಿ -
ದ್ದನುಭವಿಸುವನು ಸ್ಥೂಲ ವಿಷಯವ ವಿಶ್ವನೆಂದೆನಿಸಿ || ೧೫ ||

ತೋದಕನು ತಾನಾಗಿ ಮನ ಮೊದ -
ಲಾದ ಕರಣದೊಳಿದ್ದು ವಿಷಯವ -
ನೈದುವನು ನಿಜಪೂರ್ಣಸುಖಮಯ ಗ್ರಾಹ್ಯ ಗ್ರಾಹಕನು ||

ವೇದ ವೇದ್ಯನು ತಿಳಿಯದವನೋ -
ಪಾದಿ ಭುಂಜಿಸುತೆಲ್ಲರೊಳಗಾ -
ಹ್ಲಾದಪಡುವನು ಭಕ್ತವತ್ಸಲ ಭಾಗ್ಯಸಂಪನ್ನ || ೧೬ ||

ನಿತ್ಯನಿಗಮಾತೀತ ನಿರ್ಗುಣ
ಭೃತ್ಯ ವತ್ಸಲ ಭಯ ವಿನಾಶನ
ಸತ್ಯಕಾಮ ಶರಣ್ಯ ಶ್ಯಾಮಲ ಕೋಮಲಾಂಗ ಸುಖಿ ||
ಮತ್ತನಂದದಿ ಮರ್ತ್ಯರೊಳಹೊರ
ಗೆತ್ತ ನೋಡಲು ಸುತ್ತುತಿಪ್ಪನು
ಅತ್ಯಧಿಕ ಸಂತೃಪ್ತ ತ್ರಿಜಗದ್ವ್ಯಾಪ್ತ ಪರಮಾಪ್ತ || ೧೭ ||

ಪವಿ ಹರಿನ್ಮಣಿ ವಿದ್ರುಮದ ಸ -
ಚ್ಛವಿಗಳಂದದಿ ರಾಜಿಸುತ ಮಾ -
ಧವ ನಿರಂತರ ದೇವ ಮಾನವ ದಾನವರೊಳಿದ್ದು ||
ತ್ರಿವಿಧ ಗುಣ ಕರ್ಮ ಸ್ವಭಾವವ
ಪವನಮುಖ ದೇವಾಂತರಾತ್ಮಕ
ದಿವಸದಿವಸದಿ ವ್ಯಕ್ತ ಮಾಡುತಲವರೊಳಿದ್ದುಣಿಪಾ || ೧೮ ||

ಅಣು ಮಹತ್ತಿನೊಳಿಪ್ಪ ಘನಪರ -
ಮಣುವಿನೊಳಗಡಗಿಸುವ ಸೂಕ್ಷ್ಮವ
ಮುಣಗಿಸುವ ತೇಲಿಸುವ ಸ್ಥೂಲಗಳವನ ಮಾಯವಿದು ||
ದನುಜ ರಕ್ಕಸರೆಲ್ಲರಿವನೊಳು
ಮುನಿದು ಮಾಡುವದೇನುಲೂಖಲ
ವನಿಕೆಗಳು ಧಾನ್ಯಗಳ ಹಣಿವಂದದಲಿ ಸಂಹರಿಪ || ೧೯ ||

ದೇವಮಾನವ ದಾನವರು ಎಂ -
ದೀ ವಿಧದಲಾವಾಗಲಿಪ್ಪರು
ಮೂವರೊಳಗಿವಗಿಲ್ಲ ಸ್ನೇಹೋದಾಸೀನ ದ್ವೇಷ ||
ಜೀವರಧಿಕಾರಾನುಸಾರದ -
ಲೀವ ಸುಖಸಂಸಾರ ದುಃಖವ
ತಾ ವಿಭಾಗ ಮಾಡಿ... || ೨೦ ||

ಎಲ್ಲಿ ಕೇಳಿದರೆಲ್ಲಿ ನೋಡಿದ -
ರೆಲ್ಲಿ ಬೇಡಿದರೆಲ್ಲಿ ನೀಡಿದ -
ರೆಲ್ಲಿ ಓಡಿದರೆಲ್ಲಿ ಯಾಡಿದರೆಲ್ಲಿ ಇರುತಿಹನು ||
ಬಲ್ಲಿದರಿಗತಿಬಲ್ಲಿದನು ಹರಿ
ಇಲ್ಲ ಇವಗಾವಲ್ಲಿ ನೋಡಲು
ಖುಲ್ಲ ಮಾನವರೊಲ್ಲನಪ್ರತಿಮಲ್ಲ ಜಗಕೆಲ್ಲ || ೨೧ ||

ತಪ್ತ ಲೋಹವು ನೋಳ್ಪ ಜನರಿಗೆ
ಸಪ್ತಜಿಹ್ವನ ತೆರದಿ ತೋರ್ಪುದು
ಲಪ್ತಪಾವಕಲೋಹ ಕಾಂಬುದು ಪೂರ್ವದೋಪಾದಿ ||
ಸಪ್ತವಾಹನ ನಿಖಿಳ ಜನರೊಳು
ವ್ಯಾಪ್ತನಾದುದರಿಂದ ಸರ್ವರು
ಆಪ್ತರಾಗಿಹರೆಲ್ಲ ಕಾಲದಿ ಹಿತವ ಕೈಗೊಂದು || ೨೨ ||

ವಾರಿದನು ಮಳೆಗರೆಯೆ ಬೆಳದಿಹ
ಭೂರುಹಂಗಳ ಚಿತ್ರಫಲರಸ
ಬೇರೆ ಬೇರಿಪ್ಪಂತೆ ಬಹುವಿಧ ಜೀವರೊಳಗಿದ್ದು ||
ಮಾರಮಣನವರವರ ಯೋಗ್ಯತೆ
ಮೀರದಲೆ ಗುಣ ಕರ್ಮಗಳನು
ಸಾರ ನಡೆಸುವ ದೇವನಿಗೆ ವೈಷಮ್ಯವೆಲ್ಲಿಹದೋ || ೨೩ ||

ವಾರಿಜಾಪ್ತನ ಕಿರಣ ಮಣಿಗಳ -
ಸೇರಿ ತತ್ತದ್ವರ್ಣಗಳನು.ವಿ
ಕಾರಗೈಸದೆ ನೋಳ್ಪರಿಗೆ ಥಳಥಳಿಸುವಂದದಲಿ ||
ಮಾರಮಣ ಲೋಕತ್ರಯದೊಳಿಹ
ಮೂರುವಿಧ ಜೀವರೊಳಗಿದ್ದು ವಿ -
ಹಾರ ಮಾಡುವನವರ ಯೋಗ್ಯತೆ ಕರ್ಮವನುಸರಿಸಿ || ೨೪ ||

ಜಲವನಪಹರಿಸುವ ಗಳಿಗೆ ಬ -
ಟ್ಟಲನುಳಿದು ಜೈಗಂಟೆ ಕೈಪಿಡಿ
ದೆಳೆದು ಹೊಡೆವಂದದಲಿ ಸಂತತ ಕರ್ತೃತಾನಾಗಿ ||

ಹಲಧರಾನುಜ ಪುಣ್ಯ ಪಾಪದ
ಫಲಗಳನು ದೇವಾಸುರರಗಣ -
ದೊಳು ವಿಭಾಗವ ಮಾಡಿ ವುಣಿಸುತ ಸಾಕ್ಷಿಯಾಗಿಪ್ಪ || ೨೫ ||

ಪೊಂದಿಕೊಂಡಿಹ ಸರ್ವರೊಳು ಸಂ -
ಬಂಧವಾಗದೆ ಸಕಲ ಕರ್ಮವ -
ರಂದದಲಿ ತಾ ಮಾಡಿ ಮಾಡಿಸಿ ತತ್ಫಲಗಳುಣದೆ ||
ಕುಂದದಣು ಮಹತ್ತೆನಿಪ ಘಟ
ಮಂದಿರದಿ ಸರ್ವತ್ರ ತುಂಬಿಹ
ಬಾಂದಳದ ತೆರನಂತೆ ಇರುತಿಪ್ಪನು ರಮಾರಮಣ || ೨೬ ||

ಕಾದಕಬ್ಬಿಣ ಹಿಡಿದು ಬಡಿಯಲು
ವೇದನೆಯು ಲೋಹಗಳಿಗಲ್ಲದೆ
ಆದುದೇನೈ ಅನಲಗಾವ್ಯಥೆಯೇನು ಮಾಡಿದರೂ ||
ಆದಿ ದೇವನು ಸರ್ವ ಜೀವರ
ಕಾದು ಕೊಂಡಿಹ ವಳ ಹೊರಗೆ ದುಃ -
ಖಾದಿಗಳ ಸಂಬಂಧ ವಾಗುವದೇನೊ ಚಿನ್ಮಯಗೆ || ೨೭ ||

ಮಳಲ ಮನೆಗಳ ಮಾಡಿ ಮಕ್ಕಳು
ಕೆಲವು ಕಾಲದಲಾಡಿ ಮೋದದಿ
ತುಳಿದು ಕೆಡಿಸುವ ತೆರದಿ ಲಕುಮಿರಮಣ ಲೋಕಗಳ ||
ಹಲವು ಬಗೆಯಲಿ ನಿರ್ಮಿಸುವ ನಿ -
ಶ್ಚಲನು ತಾನಾಗಿದ್ದು ಸಲಹುವ
ಯಲರುಣಿಯ ವೋಲ್ ನುಂಗುವವಗೆಲ್ಲಿಹದೊ ಸುಖ ದುಃಖ || ೨೮ ||

ವೇಷ ಭಾಷೆಗಳಿಂದ ಜನರ ಪ್ರ -
ಮೋಷಗೈಸುವ ನಟ ಪುರುಷನೋಲ್
ದೋಷದೂರನು ಲೋಕದೊಳು ಬಹುರೂಪ ಮಾತಿನಲಿ ||
ತೋಷಿಸುವನಪರವರ ಮನದಭಿ -
ಲಾಷೆಗಳ ಪೂರೈಸುತನುದಿನ
ಪೋಷಿಸುವ ಪೂತಾತ್ಮ ಪೂರ್ಣಾನಂದ ಜ್ಞಾನಮಯ || ೨೯ ||

ಅಧಮ ಮಾನವನೋರ್ವ ಮಂತ್ರೌ -
ಷಧಿಗಳನು ತಾನರಿತು ಪಾವಕ
ಉದಕಗಳ ಸಂಬಂಧವಿಲ್ಲದೆ ಇಪ್ಪನವರೊಳಗೆ ||
ಪದುಮಜಾಂಡೋದರನು ಸರ್ವರ
ಹೃದಯ ದೊಳಗಿರೆ ಕಾಲಗುಣ ಕ -
ರ್ಮದ ಕಲುಷ ಸಂಬಂಧವಾಗುವವೇ ನಿರಂಜನಗೆ || ೩೦ ||

ಒಂದು ಗುಣದೊಳನಂತ ಗುಣಗಳು
ಒಂದು ರೂಪದೊಳಿಹವು ಲೋಕಗ -
ಳೊಂದು ರೂಪದಿ ಧರಿಸಿ ತದ್ಗತ ಪದಾರ್ಥದೊಳಹೊರಗೆ ||
ಬಾಂದಳದವೋಲಿದ್ದು ಬಹು ಪೆಸ -
ರಿಂದ ಕರೆಸುತ ಪೂರ್ಣ ಜ್ಞಾನಾ
ನಂದ ಮಯ ಪರಿಪರಿ ವಿಹಾರವ ಮಾಡಿ ಮಾಡಿಸುವ || ೩೧ ||

ಯಲ್ಲರೊಳು ತಾನಿಪ್ಪ ತನ್ನೊಳ
ಗೆಲ್ಲರನು ಧರಿಸಿಹನು ಅಪ್ರತಿ -
ಮಲ್ಲ ಮನ್ಮಥ ಜನಕ ಜಗದಾದ್ಯಂತ ಮಧ್ಯಗಳ ||
ಬಲ್ಲಬಹುಗಣಭರಿತ ದಾನವ
ದಲ್ಲಣ ಜಗನ್ನಾಥ ವಿಠ್ಠಲ
ಸೊಲ್ಲನಾಲಿಸಿ ಕಂಬದಿಂದಲಿ ಬಂದ ಭಕುತನಿಗೆ || ೩೨ ||

# ೪ ಭೋಜನರಸ ವಿಭಾಗ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ವನಜಜಾಂಡದೊಳುಳ್ಳಖಿಳ ಚೇ -
ತನರು ಭುಂಜಿಪ ಚತುರವಿಧ ಭೋ -
ಜನ ಪದಾರ್ಥದಿ ಚತುರವಿಧ ರಸ ರೂಪ ತಾನಾಗಿ ||

ಮನಕೆ ಬಂದದನುಂಡುಣಿಸಿ ಸಂ -
ಹನನಕುಪಚಯ ಕರಣಕಾಸಂ
ದನಿಮಿಷರಿಗಾತ್ಮ ಪ್ರದರ್ಶನ ಸುಖವನೀವ ಹರಿ || ೧ ||

ನೀಡದಂದದಲಿಪ್ಪ ಲಿಂಗಕೆ
ಷೋಡಶಾತ್ಮಕ ರಸ ವಿಭಾಗವ
ಮಾಡಿ ಷೋಡಶ ಕಳೆಗಳಿಗೆ ಉಪಚಯಗಳನೆ ಕೊಡು ತಾ ||
ಕ್ರೋಡಯಪ್ಪತ್ತೆರಡು ಸಾವಿರ
ನಾಡಿಗತ ದೇವತೆಗಳೊಳಗಿ
ದ್ದಾಡುತಾನಂದಾತ್ಮ ಚರಿಸುವ ಲೋಕದೊಳು ತಾನು || ೨ ||

ವಾರಿವಾಚ್ಯನು ವಾರಿಯೊಳಗಿ -
ದ್ದಾರು ರಸವೆಂದೆನಿಸಿ ಮೂವ -
ತ್ತಾರು ಸಾವಿರ ಸ್ತ್ರೀ ಪುರುಷ ನಾಡಿಯೊಳು ತದ್ರೂಪ ||
ಧಾರಕನು ತಾನಾಗಿ ಸರ್ವ ಶ -
ರೀರಗಳಲಿ ಅಹಶ್ಚರಾತ್ರಿ ವಿ
ಹಾರ ಮಾಳ್ಪನು ಬೃಹತಿಯೆಂಬ ಸುನಾಮದಿಂ ಕರೆಸಿ || ೩ ||

ಆರು ರಸ ಸತ್ವಾದಿ ಭೇದದ -
ಲಾರು ಮೂರಾಗಿಹವು ಸಾರಾ -
ಸಾರ ನೀತಾಪ್ರಚುರ ಖಂಡಾಖಂಡ ಚಿತ್ ಪ್ರಚುರ ||
ಈರಧಿಕ ಎಪ್ಪತ್ತು ಸಾವಿರ
ಮಾರಮಣನ ರಸಾಖ್ಯರೂಪ ಶ -
ರೀರದಲಿ ಭೋಜ್ಯ ಸುಪದಾರ್ಥದಿ ತಿಳಿದು ಭುಂಜಿಪುದು || ೪ ||

ಕ್ಷೀರಗತ ರಸ ರೂಪಗಳು ಮು -
ನ್ನೂರು ಮೇಲೈವತ್ತು ನಾಲ್ಕು
ಚಾರು ಘೃತಗತರೂಪಗಳು ಇಪ್ಪತ್ತರೊಂಭತ್ತು ||
ಸಾರ ಗುಡದೊಳಗೈದು ಸಾವಿರ
ನೂರು ಒಂದು ಸುರೂಪ ದ್ವಿಸಹ -
ಸ್ರಾರೆರಡು ಶತ ಪಂಚ ವಿಂಶತಿ ರೂಪ ಫಲಗಳಲಿ || ೫ ||

ವಿಶದ ಸ್ಥಿರ ತೀಕ್ಷ್ಣವು ನಿರಹರ
ರಸಗಳಲಿ ಮೂರೈದು ಸಾವಿರ
ತ್ರಿಶತನವ ರೂಪಗಳ ಚಿಂತಿಸಿ ಭುಂಜಿಪುದು ವಿಷಯ ||
ಶ್ವಸನ ತತ್ತ್ವೇಶರೊಳಗಿದ್ದೀ -
ಪೆಸರಿನಿಂದಲಿ ಕರೆಸುವನು ಧೇ -
ನಿಸಿದರೀಪರಿ ಮನಕೆ ಪೊಳೆವನು ಬಲ್ಲ ವಿಭುದರಿಗೆ || ೬ ||

ಕಪಿಲ ನರಹರಿ ಭಾರ್ಗವ ತ್ರಯ
ವಪುಷ ನೇತ್ರದಿ ನಾಶಿಕಾಸ್ಯದಿ
ಶಫರನಾಮಕ ಜಿಹ್ವೆಯಲಿ ದಂತದಲಿ ಹಂಸಾಖ್ಯಾ ||
ತ್ರಿ ಪ್ರತಿಪಾದ್ಯ ಹಯಾಸ್ಯ ವಾಚ್ಯ ದೊ -
ಳಪರಿಮಿತ ಸುಖ ಪೂರ್ಣ ಸಂತತ
ಕೃಪಣರೊಳಿದ್ದವರವರ ರಸ ಸ್ವೀಕರಿಸಿ ಕೊಡುವಾ || ೭ ||

ನಿರುಪಮಾನಂದಾತ್ಮ ಹರಿ ಸಂ -
ಕರುಷಣ ಪ್ರದ್ಯುಮ್ನ ರೂಪದಿ
ಇರುತಿಹನು ಭೋಕ್ತೃಗಳೊಳಗೆ ತಚ್ಛಕ್ತಿದನು ಯನಿಸಿ ||
ಕರೆಸುವನು ನಾರಾಯಣಾನಿರು -
ದ್ಧರಡು ನಾಮದಿ ಭೋಜ್ಯ ವಸ್ತುಗ
ನಿರುತ ತರ್ಪಕನಾಗಿ ತೃಪ್ತಿಯನೀವ ಚೇತನಕೆ || ೮ ||

ವಾಸುದೇವನು ಒಳ ಹೊರಗೆ ಅವ |
ಕಾಶ ಕೊಡುವ ನಭಸ್ಥನಾಗಿ ರ -
ಮಾ ಸಮೇತ ವಿಹಾರ ಮಾಳ್ಪನು ಪಂಚ ರೂಪದಲಿ ||
ಆ ಸರೋರುಹ ಸಂಭವಾ ಭವ
ವಾಸವಾದ್ಯಮರಾದಿ ಚೇತನ
ರಾಶಿಯೊಳಗಿಹನೆಂದು ಅರಿತವನವನೆ ಕೋವಿದನು || ೯ ||

ವಾಸುದೇವನು ಅನ್ನದೊಳು ನಾ -
ನಾ ಸುಭಕ್ಷ್ಯದಿ ಸಂಕರುಷಣ ಕೃ -
ತೀಶ ಪರಮಾನ್ನದೊಳು ಘೃತದೊಳಗಿಪ್ಪನನಿರುದ್ಧ ||

ಆ ಸುಪರ್ಣಾಂಸಗನು ಸೂಪದಿ
ಪಾಸಪಾನುಜ ಶಾಕದೊಳು ಮೂ -
ಲೇಶ ನಾರಾಯಣನು ಸರ್ವತ್ರದಲಿ ನೆಲಿಸಿಹನು || ೧೦ ||

ಅಗಣಿತಾತ್ಮ ಸುಭೋಜನ ಪದಾ -
ರ್ಥಗಳೊಳಗೆ ಅಖಂಡ ಒಂದೊಂ
ದಗಳಿನೊಳನಂತಾಂಶದಿಂದಲಿ ಖಂಡನೆಂದೆನಿಸಿ ||
ಜಗದಿ ಜೀವರ ತೃಪ್ತಿಪಡಿಸುವ
ಸ್ವಗತ ಭೇದ ವಿವರ್ಜಿತನ ಇ -
ರ್ಬಗೆಯ ರೂಪವ ನರಿತು ಭುಂಜಿಸಿ ಅರ್ಪಿಸವನಡಿಗೆ || ೧೧ ||

ಈ ಪರಿಯಲರಿತುಂಬ ನರ ನಿ -
ತ್ಯೋಪಾಸಿ ನಿರಾಮಯನು ನಿ -
ಷ್ಪಾಪಿ ನಿತ್ಯಮಹತ್ಸುಯಜ್ಞಗಳಾಚರಿಸಿದವನು ||
ಪೋಪದಿಪ್ಪದು ಬಪ್ಪುದೆಲ್ಲ ರ
ಮಾಪತಿಗಧಿಷ್ಠಾನವೆನ್ನು ಕೃ
ಪಾಪಯೋನಿಧಿ ಮಾತಾನಾಲಿಸುವನು ಜನನಿಯಂತೆ || ೧೨ ||

ಆರೆರಡು ಸಾವಿರದ ಮೇಲೆ
ನೂರ ಐವತ್ತೊಂದು ರೂಪದಿ
ಸಾರ ಭೋಕ್ತನಿರುದ್ಧ ದೇವನು ಅನ್ನಮಯನೆನಿಪ ||
ಮೂರೆರಡುವರೆ ಸಾವಿರದ ಮೇಲೆ
ಮೂರಧಿಕ ನಾಲ್ವತ್ತು ರೂಪದಿ
ತೋರುತಿಹ ಪ್ರದ್ಯುಮ್ನ ಜಗದೊಳು ಪ್ರಾಣಮಯನಾಗಿ || ೧೩ ||

ಎರಡು ಕೋಶದ ಪಳಹೊರಗೆ ಸಂ
ಕರುಷಣೈದು ಸುಲಕ್ಷದರವ -
ತ್ತೆರಡು ಸಾವಿರದೇಳಧಿಕ ಶತ ರೂಪಗಳ ಧರಿಸಿ ||
ಕರೆಸಿಕೊಂಬ ಮನೋಮಯನು ಯಂ -
ದರವಿದೂರನು ಈರೆರಡು ಸಾ
ವಿರದ ಮೂನ್ನೂರಾದ ಮೇಲ್ ನಾಲ್ಕಧಿಕ ಯಪ್ಪತ್ತು || ೧೪ ||

ರೂಪದಿಂ ವಿಜ್ಞಾನ ಮಯನೆಂ
ಬೀ ಪೆಸರಿನಿಂ ವಾಸುದೇವನು
ವ್ಯಾಪಿಸಿಹ ಮಹದಾದಿ ತತ್ತ್ವ ತತ್ವತಿಗಳೊಳಗೆ ||
ಈ ಪುರುಷ ನಾಮಕನ ಶುಭ ಸ್ವೇ
ದಾಪಳೆನಿಸಿ ರಮಾಂಬ ತಾ ಬ್ರ -
ಹ್ಮಾಪರೋಕ್ಷಿಗಳಾದವರ ಲಿಂಗಾಂಗ ಕೆಡಿಸುವಳು || ೧೫ ||

ಐದು ಸಾವಿರ ನೂರಿಪ್ಪ -
ತ್ತೈದು ನಾರಾಯಣನ ರೂಪವ -
ತಾ ಧರಿಸಿಕೊಂಡನುದಿನದಲಾನಂದಮಯನೆನಿಸಿ ||
ಐದು ಲಕ್ಷದ ಮೇಲೆ ಯಂಭ -
ತ್ತೈದು ಸಾವಿರ ನಾಲ್ಕು ಶತಗಳ
ಐದು ಕೋಶಾತ್ಮಕ ವಿರಿಂಚಾಂಡದೊಳು ತುಂಬಿಹನು || ೧೬ ||

ನೂರವೊಂದು ಸುರೂಪದಿಂ ಶಾಂ -
ತೀರಮಣ ತಾನನ್ನ ನೆನಿಪ್ಪೆ -
ನೂರು ಮೇಲೆ ಮೂರಧಿಕ ದಶ ಪ್ರಾಣಾಖ್ಯ ಪ್ರದ್ಯುಮ್ನ ||
ತೋರುತಿಹನ್ನೈವತ್ತು ಐದು ವಿ -
ಕಾರ ಮನದೊಳು ಸಂಕರ್ಷಣ್ಣೆ -
ನೂರು ಚತುರಾಶೀತಿ ವಿಜ್ಞಾನಾತ್ಮ ವಿಶ್ವಾಖ್ಯ || ೧೭ ||

ಮೂರುಸಾವಿರದರ್ದಶತ ಮೇ -
ಲೀರಧಿಕ ರೂಪಗಳ ಧರಿಸಿ ಶ -
ರೀರದೊಳಗಾನಂದಮಯ ನಾರಾಯಣಾಹ್ವಯನು ||
ಈರೆರಡು ಸಾವಿರದ ಮೇಲೆ ಮೂ
ನ್ನೂರು ಐದು ಸುರೂಪದಿಂದಲಿ
ಭಾರತೀಶನೊಳಿಪ್ಪ ನವನೀತಸ್ಥ ಘೃತದಂತೆ || ೧೮ ||

ಮೂರಧಿಕ ಐವತ್ತು ಪ್ರಾಣ ಶ -
ರೀರ ದೊಳಗನಿರುದ್ಧನಿಪ್ಪೆ -
ನೂರು ಹನ್ನೊಂದಧಿಕಪಾಸನೊಳಿಪ್ಪ ಪ್ರದ್ಯುಮ್ನ ||

ಮೂರನೇ ವ್ಯಾನನೊಳಗೈದರೆ -
ನೂರು ರೂಪದಿ ಸಂಕರ್ಷಣಾಖ್ಯೆ -
ನೂರು ಮೂವತ್ತೈದುದಾನನೊಳಿಪ್ಪ ಮಾಯೇಶ || ೧೯ ||

ಮೂಲ ನಾರಾಯಣಾಸು ಐವ -
ತ್ತೇಳಧಿಕ ಐನೂರು ರೂಪವ
ತಾಳಿಸರ್ವತ್ರಧಿ ಸಮಾನ ನೊಳಿಪ್ಪ ಸರ್ವೇಶ ||
ಲೀಲೆಗೈವನು ಸಾವಿರದ ಮೇ -
ಲೇಳುನೂರ್ಹನ್ನೊಂದು ರೂಪವ
ತಾಳಿ ಪಂಚ ಪ್ರಾಣರೊಳು ಲೋಕಗಳ ಸಲಹುವನು || ೨೦ ||

ತ್ರಿನವತಿ ಸುರೂಪಾತ್ಮಕನಿರು -
ದ್ಧನು ಸದಾ ಯಜಮಾನನಾಗಿ -
ರ್ದನಲ ಯಮ ಸೋಮಾದಿ ಪಿತೃ ದೇವತೆಗಳಿಗೆ ಅನ್ನ ||
ನೆನಿಪನಾ ಪ್ರದ್ಯುಮ್ನ ಸಂಕರು -
ಷಣ ವಿಭಾಗವ ಮಾಡಿ ಕೊಂ -
ಡುಣಿಪ ನಿತ್ಯಾನಂದ ಭೋಜನದಾಯಿ ತುರ್ಯಾಹ್ವಾ || ೨೧ ||

ಷಣ್ಣಾವತಿ ನಾಮಕನು ವಸೂ ಮೂ
ಗಣ್ಣ ಭಾಸ್ಕರರೊಳಗೆ ನಿಂತು ಪ್ರ -
ಪನ್ನರನುದಿನದಿ ನಿಷ್ಕಪಟ ಸದ್ಭಕ್ತಿಯಲಿ ಮಾಳ್ಪ ||
ಪುಣ್ಯ ಕರ್ಮವ ಸ್ವೀಕರಿಸಿ ಕಾ -
ರುಣ್ಯಸಾಗರನಾ ಪಿತೃಗಳಿಗ -
ಗಣ್ಯಸುಖವಿತ್ತವರ ಪೊರೆವನು ಎಲ್ಲ ಕಾಲದಲಿ || ೨೨ ||

ಸುತಪ ಏಕೋತ್ತರ ಸುಪಂಚಾ
ಶತ ವರಣ ಕರಣದಿ ಚತುರ್ವಿಂ
ಶತಿ ಸುತತ್ವದಿ ಧಾತುಗಳೊಳಗಿದ್ದವಿರತಾನಿರುದ್ಧ ||
ಜತನ ಮಾಳ್ಪನು ಜಗದಿ ಜೀವ
ಪ್ರತಿತಿಗಳ ಷಣ್ಣಾವತಿನಾಮಕ
ಚತುರ ಮೂರ್ತಿಗಳರ್ಚಿಸುವದರಿಂದ ಬಲ್ಲವರು || ೨೩ ||

ಅಬುಜಜಾಂಡೋದರನು ವಿಪಿನದಿ
ಶಬರಿಯೆಂಜಲನುಂಡು ಗೋಕುಲ -
ದಬಲೆಯರನೊಲಿಸಿದನು ಋಷಿ ಪತ್ನಿಯರು ಕೊಟ್ಟನ್ನ ॥
ಸುಭುಜ ತಾ ಭುಂಜಿಸಿದ ಸ್ವರಮಣ
ಕುಬುಜೆ ಗಂಧಕೆ ಒಲಿದು ಮುನಿಗಣ
ವಿಭುಧ ಸೇವಿತ ಬಿಡುವನೇ ನಾವಿತ್ತ ಕರ್ಮಫಲ ॥ ೨೪ ॥

ಗಣನೆ ಇಲ್ಲದ ಪರಮ ಸುಖ ಸದ್
ಗುಣಂಗಳ ಲೇಶ ಲೇಶಕೆ
ಎಣೆಯನಿಸದು ರಮಾಬ್ಜಭವ ಶಕ್ರಾದಿಗಳ ಸುಖವು ॥
ಉಣುತುಣುತ ಮೈಮರೆದು ಕೃಷ್ಣಾ -
ರ್ಪಣವೆನಲು ಕೈಕೊಂಬನರ್ಭಕ
ಜನನಿ ಭೋಜನ ಸಮಯದಲಿ ಕೈವಡ್ಡುವಂದದಲಿ ॥ ೨೫ ॥

ಜೀವ ಕೃತ ಕರ್ಮಗಳ ಬಿಡದೆ ರ -
ಮಾವರನು ಸ್ವೀಕರಿಸಿ ಫಲಗಳ -
ನೀವನಧಿಕಾರಾನುಸಾರದಲವರಿಗನವರತಾ ॥
ಪಾವಕನು ಸರ್ವಸ್ವ ಭುಂಜಿಸಿ
ತಾ ವಿಕಾರವನೈದನೊಮ್ಮೆಗೆ
ಪಾವನಕೆ ಪಾವನನೆನಿಪ ಹರಿ ಉಂಬುದೇನರಿದು ॥ ೨೬ ॥

ಕಲುಷ ಜಿಹ್ವೆಗೆ ಸುಷ್ಟು ಭೋಜನ
ಜಲ ಮೊದಲು ವಿಷದೋರುವದು ನಿ -
ಷ್ಕಲುಷ ಜಿಹ್ವೆಗೆ ಸುರಸ ತೋರುವದೆಲ್ಲ ಕಾಲದಲಿ ॥
ಸುಲಲಿತಾಂಗಗೆ ಸಕಲರಸ ಮಂ -
ಗಳವೆನಿಸುತಿಹದನ್ನಮಯ ಕೈ
ಕೊಳದೆ ಬಿಡುವನೆ ಪೂತನಿಯ ವಿಷ ಮೊಲೆಯ ನುಂಡವನು ॥ ೨೭ ॥

ಪೇಳಲೇನು ಸಮೀರ ದೇವನು
ಕಾಲಕೂಟವನುಂಡು ಲೋಕವ
ಪಾಲಿಸಿದ ತದ್ದಾಸನೋರ್ವನು ಅಮೃತನೆನಿಸಿದನು ॥

ಶ್ರೀ ಲಕುಮಿ ವಲ್ಲಭ ಶುಭಾಶುಭ
ಜಾಲ ಕರ್ಮಗಳುಂಬನುಪಚಯ
ದೇಳಿಗೆಗಳಪಗಿಲ್ಲವೆಂದಿಗು ಸ್ವರಸಗಳ ಬಿಟ್ಟು || ೨೮ ||

ಈ ಪರಿಯಲಚ್ಚುತನ ತತ್ತ್
ದ್ರೂಪ ತನ್ನಾಮಗಳ ಸಲೆ ನಾ -
ನಾ ಪದಾರ್ಥದಿ ನೆನೆ ನೆನೆದು ಭುಂಜಿಸುತಲಿರು ವಿಷಯ ||
ಪ್ರಾಪಕ ಸ್ಥಾಪಕ ನಿಯಾಮಕ
ವ್ಯಾಪಕನು ಎಂದರಿದು ನೀ ನಿ -
ರ್ಲೇಪನಾಗಿರು ಪುಣ್ಯ ಪಾಪಗಳರ್ಪಿಸವನಡಿಗೆ || ೨೯ ||

ಐದು ಲಕ್ಷೆಂಭತ್ತರೊಂಭ -
ತ್ತಾದ ಸಾವಿರದೇಳನೂರರ
ಐದು ರೂಪವ ಧರಿಸಿ ಭೋಕ್ತೃಗ ಭೋಜ್ಯನೆಂದೆನಿಸಿ ||
ಶ್ರೀಧರಾ ದುರ್ಗಾ ರಮಣ ಪಾ -
ದಾದಿ ಶಿರಪರ್ಯಂತ ವ್ಯಾಪಿಸಿ
ಕಾದು ಕೊಂಡಿಹ ಸಂತತ ಜಗನ್ನಾಥ ವಿಠ್ಠಲನು || ೩೦ ||

# ೫ ವಿಭೂತಿ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು || ಪಲ್ಲ ||

ಶ್ರೀ ತರುಣಿ ವಲ್ಲಭನ ಪರಮ ವಿ -
ಭೂತಿ ರೂಪವ ಕಂಡ ಕಂಡ -
ಲ್ಲೀತೆರದಿ ಚಿಂತಿಸುತ ಮನದಲಿ ನೋಡು ಸಂಭ್ರಮದಿ ||
ನೀತ ಸಾಧಾರಣ ವಿಶೇಷ ಸ -
ಜಾತಿ ನೈಜಾಹಿತವು ಸಹಜ ವಿ
ಜಾತಿ ಖಂಡಾಖಂಡ ಬಗೆಗಳನರಿತು ಬುಧರಿಂದ || ೧ ||

ಜಲಧರಾಗಸದೊಳಗೆ ಚರಿಸುವ
ಹಲವು ಜೀವರ ನಿರ್ಮಿಸಿಹನದ -
ರೊಳು ಸಜಾತಿ ವಿಜಾತಿ ಸಾಧಾರಣ ವಿಶೇಷಗಳ ||
ತಿಳಿದು ತತ್ತ ಸ್ಥಾನದೊಳು ವೆ -
ಗ್ಗಳಿಸಿ ಹಬ್ಬಿದ ಮನದಿ ಪೂಜಿಸು -
ತಲವ ವ್ಯಾಪ್ತನ ರೂಪಗಳ ನೋಡುತಲಿ ಹಿಗ್ಗುವದು || ೨ ||

ಪ್ರತಿಮ ಸಾಲಿಗ್ರಾಮ ಗೋಭ್ಯಾ -
ಗತ ಅಥಿತಿ ಶ್ರೀ ತುಳಸಿ ಪಿಪ್ಪಲ
ಯತಿ ವನಸ್ಥ ಗ್ರಹಸ್ಥ ವಟು ಯಜಮಾನ ಸ್ವಪರಜನ ||
ಪೃಥಿವಿ ಜಲ ಶಿಖಿ ಪವನ ತಾರೆ
ಪಥ ನವಗ್ರಹ ಯೋಗ ಕರ್ಣ ಭ
ತಿಥಿ ಸಿತಾಸಿತಪಕ್ಷ ಸಂಕ್ರಮಣಾವನಧಿಷ್ಠಾನ || ೩ ||

ಕಾದ ಕಾಂಚನದೊಳಗೆ ಶೋಭಿಪ
ಆದಿತೇಯಾಸ್ಯನ ತೆರದಿ ಲಕು -
ಮೀಧವನು ಪ್ರತಿದಿನದಿ ಸಾಲಿಗ್ರಾಮದೊಳಗಿಪ್ಪ ||
ಐದು ಸಾವಿರ ಮೇಲೆ ಮೂವ -
ತ್ತೈದಧಿಕ ಐನೂರು ರೂಪದಿ
ಭೂಧರಗಳಭಿಮಾನಿ ದಿವಿಜರೊಳಿಪ್ಪನನವರತ || ೪ ||

ಶ್ರೀ ರಮಣ ಪ್ರತಿಮೆಗಳೊಳಗೆ ಹದಿ
ಮೂರಧಿಕವಾಗಿಪ್ಪ ಮೇಲ್ಮೈ -
ನೂರು ರೂಪವ ಧರಿಸಿ ಇಪ್ಪನು ಅಹಿಂತಾಚಲದಿ ||
ದಾರು ಮಥನವಗ್ನಿಯೆ ಪಾವಕ
ತೋರುವಂತೆ ಪ್ರತೀಕ ಸುರರೊಳು
ತೋರುತಿಪ್ಪನು ತತ್ತದಾಕಾರದಲಿ ನೋಳ್ಪರಿಗೆ || ೫ ||

ಕರಣನಿಯಾಮಕನು ತಾನುಪ -
ಕರಣದೊಳಗೈವತ್ತೆರಡು ಸಾ -
ವಿರದ ಪದಿನಾಲ್ಕಧಿಕ ಶತರೂಪಗಳನೆ ಧರಿಸಿ ||

ಇರುತಿಹನು ತದ್ರೂಪ ನಾಮಗ -
ಳರಿತು ಪೂಜಿಸುತಿಹರ ಪೂಜೆಯ
ನಿರುತ ಕೈಗೊಂಬನು ತೃಷಾರ್ತನು ಜಲವ ಕೊಂಬಂತೆ || ೬ ||

ಬಿಂಬರೂಪನು ಈ ತೆರದಿ ಜಡ
ಪೊಂಬಸುರ ಮೊದಲಾದ ಸುರರೊಳ
ಗಿಂಬಗೊಂಡಿಹನೆಂದರಿದು ಧರ್ಮಾರ್ಥ ಕಾಮಗಳ ||
ಹಂಬಲಿಸದನುದಿನದಿ ವಿಶ್ವಕು -
ಟುಂಬಿ ಕೊಟ್ಟ ಕಣಾನ್ನ ಕುತ್ಸಿತ -
ಕಂಬಳಿಯ ಸೌಭಾಗ್ಯವೆಂದವನಂಘ್ರಿಗಳ ಭಜಿಸು || ೭ ||

ವಾರಿಯೊಳಗಿಪ್ಪತ್ತನಾಲ್ಕು
ಮೂರೆರಡು ಸಾವಿರದ ಮೇಲೆ ಮು -
ನ್ನೂರು ಹದಿನೇಳೆನಿಪ ರೂಪನು ಶ್ರೀ ತುಳಸಿ ದಳದಿ ||
ನೂರರವತ್ತೊಂದು ಪುಷ್ಪದಿ
ಮೂರಧಿಕ ದಶದೀಪದೊಳು ನಾ -
ನೂರು ಮೂರು ಸುಮೂರ್ತಿಗಳು ಗಂಧದೊಳಗಿರುತಿಹವು || ೮ ||

ಅಷ್ಟದಳ ಸದ್ಹೃದಯ ಕಮಲಾ -
ಧಿಷ್ಟತನು ತಾನಾಗಿ ಸರ್ವೋ -
ತ್ಕೃಷ್ಟ ಮಹಿಮನು ದಳಗಳಲಿ ಸಂಚರಿಸುತೊಳಗಿರ್ದು ||
ದುಷ್ಟರಿಗೆ ದುರ್ಬುದ್ಧಿ ಕರ್ಮ ವಿ -
ಶಿಷ್ಟರಿಗೆ ಸುಜ್ಞಾನ ಧರ್ಮ ಸಂ
ಪುಷ್ಟಿಗೈಸುತ ಸಂತಯಿಪ ನಿರ್ದುಷ್ಟ ಸುಖ ಪೂರ್ಣ || ೯ ||

ವಿತ್ತದೇಹಾಗಾರ ದಾರಾ
ಪತ್ಯ ಮಿತ್ರಾದಿಗಳೊಳಗೆ ಗುಣ
ಚಿತ್ತ ಬುಧ್ಯಾದಿಂದ್ರಿಯಗಳೊಳು ಜ್ಞಾನ ಕರ್ಮದೊಳು ||
ತತ್ತದಾಹ್ವಯನಾಗಿ ಕರೆಸುತ
ಸತ್ಯ ಸಂಕಲ್ಪಾನುಸಾರದಿ
ನಿತ್ಯದಲಿ ತಾ ಮಾಡಿ ಮಾಡಿಪನೆಂದು ಸ್ಮರಿಸುವುದು || ೧೦ ||

ಭಾವದ್ರವ್ಯ ಕ್ರಿಯಗಳೆನಿಸುವ
ಈ ವಿಧಾದ್ವೈತ ತ್ರಯಂಗಳ
ಭಾವಿಸುತ ಸದ್ಭಕ್ತಿಯಲಿ ಸರ್ವತ್ರ ಮರೆಯದಲೆ ||
ತಾವಕನು ತಾನೆಂದು ಪ್ರತಿದಿನ
ಸೇವಿಸುವ ಭಕ್ತರಿಗೆ ತನ್ನನು
ಈವ ಕಾವ ಕೃಪಾಳು ಕರಿವರಗೊಲಿದ ತೆರದಂತೆ || ೧೧ ||

ಬಾಂದಳವೆ ಮೊದಲಾದರೊಳೊಂ
ದೊಂದರಲಿ ಪೂಜಾಸುಸಾಧನ -
ವೆಂದೆನಿಸುವ ಪದಾರ್ಥಗಳು ಬಗೆಬಗೆಯ ನೂತನದಿ ||
ಸಂದಣಿಸಿಕೊಂಡಿಹವು ಧ್ಯಾನಕೆ
ತಂದಿನಿತು ಚಿಂತಿಸಿ ಸದಾ ಗೋ
ವಿಂದನರ್ಚಿಸಿ ನೋಡುತಲಿ ನಲಿನಲಿದಾಡು ಕೊಂಡಾಡು || ೧೨

ಜಲಜನಾಭನ ಮೂರ್ತಿ ಮನದಲ್ಲಿ
ನೆಲೆಗೊಳಿಸಿ ನಿಶ್ಚಲ ಸುಭಕುತಿಯಲಿ
ಛಳಿ ಬಿಸಲು ಮಳೆಗಾಳಿಗಳ ನಿಂದಿಸದೆ ನಿತ್ಯದಲಿ ||
ನೆಲದಲಿಹ ಗಂಧವೆ ಸುಗಂಧವು
ಜಲವೆ ರಸ ರೂಪವೆ ಸುದೀಪವು
ಯಲರು ಚಾಮರ ಶಬ್ದ ವಾದ್ಯಗಳರ್ಪಿಸಲು ಒಲಿವ || ೧೩ ||

ಗೋಳಕಗಳು ರಮಾರಮಣನ ನಿ
ಜಾಲಯಗಳನು ದಿನದಿ ಸಂಪ್ರ
ಕ್ಷಾಲನೆಯೆ ಸಂಮಾರ್ಜನವು ಕರಣಗಳೆ ದೀಪಗಳ ||
ಸಾಲು ತತ್ತ್ವದ್ವಿಷಯಗಳ ಸಂ -
ಮೇಳನವೇ ಪರಿಯಂಕ ತತ್ಸುಖ
ದೇಳಿಗೆಯೆ ಸುಷ್ಪುತ್ತಿಗಾತ್ಮ ನಿವೇದನವೆ ವಸನ || ೧೪ ||

ಪಾಪ ಕರ್ಮವು ಪಾದುಕೆಗಳನು
ಲೇಪನವು ಸತ್ಪುಣ್ಯ ಶಾಸ್ತ್ರಾ
ಲಾಪನವೆ ಶ್ರೀ ತುಳಸಿ ಸುಮನೋವೃತ್ತಿಗಳು ಸುಮನಾ ||

ಕೋಪ ಧೂಪವು ಭಕ್ತಿ ಭೂಷಣ
ವ್ಯಾಪಿಸಿದ ಸುದ್ಬುದ್ಧಿ ಛತ್ರವು
ದೀಪವೇ ಸುಜ್ಞಾನ ವಾರಾರ್ತಿಗಳೆ ಗುಣ ಕಥನ || ೧೫ ||

ಮನವಚನ ಕಾಯಿಕ ಪ್ರದಕ್ಷಿಣೆ -
ಯನುದಿನದಿ ಸರ್ವತ್ರ ವ್ಯಾಪಕ
ವನರುಹೇಕ್ಷಣಾರ್ಗರ್ಪಿಸುತ ಮೋದಿಸುತಲಿರು ಸತತ ||
ಅನುಭವಕೆ ತಂದುಕೊ ಸಕಲ ಸಾ
ಧನಗಳೊಳಗಿದು ಮುಖ್ಯ ಪಾಮರ
ಮನುಜರಿಗೆ ಪೇಳಿದರೆ ತಿಳಿಯದು ಬುಧರಿಗಲ್ಲದಲೆ || ೧೬ ||

ಚತುರವಿಧ ಪುರುಷಾರ್ಥ ಪಡೆವರೆ
ಚತುರದಶ ಲೋಕಗಳ ಮಧ್ಯದೊ
ಳಿತರುಪಾಯಗಳಿಲ್ಲ ನೋಡಲು ಸಕಲ ಶಾಸ್ತ್ರದಲಿ ||
ಸತತ ವಿಷಯೇಂದ್ರಿಯಗಳಲಿ ಪ್ರವಿ
ತತನೆನಿಸಿ ರಾಜಿಸುವ ಲಕುಮೀ
ಪತಿಗೆ ಸರ್ವ ಸಮರ್ಪಣೆಯು ಮಹಪೂಜೆ ಸದುಪಾಯಾ || ೧೭ ||

ಗೋಳಕವೆ ಕುಂಡಾಗ್ನಿ ಕರಣವು
ಮೇಲೊದಗಿಬಹ ವಿಷಯ ಸಮಿಧೆಯು
ಗಾಳಿ ಯತ್ನವು ಕಾಮ ಧೂಮವು ಸನ್ನಿಧಾನಾರ್ಚೀ ||
ಮೇಲನವೆ ಪ್ರಜ್ವಾಲೆ ಕಿಡಿಗಳು
ತೂಳಿದಾನಂದಗಳು ತತ್ತ
ತ್ಕಾಲ ಮಾತುಗಳೆಲ್ಲ ಮಂತ್ರಾಧ್ಯಾತ್ಮಯಜ್ಞವಿದು || ೧೮ ||

ಮಧು ವಿರೋಧಿಯ ಪಟ್ಟಣಕೆ ಪೂ
ರ್ವದ ಕವಾಟಗಳಕ್ಷಿನಾಸಿಕ
ವದನ ಶ್ರೋತ್ರಗಳೆರಡು ದಕ್ಷಿಣ ಉತ್ತರ ದ್ವಾರ ||
ಗುದ ಉಪಸ್ಥಗಳೆರಡು ಪಶ್ಚಿಮ
ಕದಗಳೆನಿಪವು ಷಟ್ ಸರೋಜವೆ
ಸದನ ಹೃದಯವೇ ಮಂಟಪಗಳು ತ್ರಿಗುಣಗಳೆ ಕಲಶ || ೧೯ ||

ಧಾತುಗಳು ಸಪ್ತಾವರಣ ಉಪ -
ವೀಥಿಗಳು ನಾಡಿಗಳು ಮದಗಳು
ಯೂಥಪಗಳು ಸುಷುಮ್ನ ನಾಡಿಯೆ ರಾಜ ಪಂಥಾನ ||
ಈ ತನೂರುಹುಗಳೆ ವನಂಗಳು
ಮಾತರಿಶ್ವನು ಪಂಚರೂಪದಿ
ಪಾತಕಗಳೆಂಬರಿಗಳನು ಸಂಹರಿಪ ತಳವಾರ || ೨೦ ||

ಇನಶಶಾಂಕಾದಿಗಳೇ ಲಕ್ಷ್ಮೀ
ವನಿತೆಯರಸನ ದ್ವಾರಪಾಲಕ -
ರೆನಿಸುತಿಹರು ಮನದ ವೃತ್ತಿಗಳೆ ಪದಾತಿಗಳು ||
ಅನುಭವಿಪ ವಿಷಯಂಗಳೆ ಪ
ಟ್ಟಣಕೆ ಬಪ್ಪ ಪಸಾರಗಳು ಜೀ -
ವನು ಸುವರ್ತಕ ಕಪ್ಪಗಳ ಕೈಕೊಂಬ ಹರಿತಾನು || ೨೧ ||

ಉರುಪರಾಕ್ರಮನರಮನೆಗೆ ದಶ
ಕರಣಗಳು ಕನ್ನಡಿಯ ಸಾಲುಗ -
ಳರ ವಿದೂರನ ಸದ್ವಿಹಾರಕೆ ಚಿತ್ತ ಮಂಟಪವು
ಮರಳಿ ಬಿಡುವ ಶ್ವಾಸಗಳು ಚಾ -
ಮರ ವಿಲಾಸಿನಿ ಬುದ್ಧಿ ದಾಮೋ -
ದರಗೆ ಸಾಷ್ಟಾಂಗ ಪ್ರಣಾಮಗಳೆ ಸುಶಯನಗಳು || ೨೨ ||

ಮಾರಮಣಸರಮನೆಗೆ ಸುಮಹಾ
ದ್ವಾರನೆನಿಸುಪ ವದನಕೊಪ್ಪುವ
ತೋರಣ ಶ್ಮಶ್ರುಗಳು ಕೇಶಗಳೆ ಪತಾಕಿಗಳು ||
ಊರಿನಡೆವಂಘ್ರಿಗಳು ಜಂಘಗ -
ಳೂರು ಮಧ್ಯೋದರ ಶಿರಗಳಾ
ಗಾರದುಪ್ಪರಿಗೆಗಳು ಕೋಶಗಳೈದು ಕೋಣೆಗಳು || ೨೩ ||

ಈ ಶರೀರವೆ ರಥ ಪತಾಕ ಸು
ವಾಸಗಳೆ ಪುಂಡ್ರಗಳು ಧ್ವಜ ಸಿಂ -
ಹಾಸನವೇ ಚಿತ್ತವು ಬುದ್ಧಿಯೇ ಕಲಶ ಸನ್ಮನವೆ ||

ಪಾಶ ಗುಣ ದಂಡತ್ರಯಗಳು ಶು
ಭಾಶುಭದ್ವಯ ಕರ್ಮ ಚಕ್ರ ಮ -
ಹಾಸುಮರ್ಥಾಶ್ವಗಳು ದಶಕರಣಂಗಳೆನಿಸುವುವು || ೨೪ ||

ಮಾತರಿಶ್ವನು ದೇಹ ರಥದೊಳು
ಸೂತನಾಗಿಹ ಸರ್ವಕಾಲದಲಿ
ಶ್ರೀ ತರುಣಿ ವಲ್ಲಭ ರಥಿಕನೆಂದರಿದು ನಿತ್ಯದಲಿ ||
ಪ್ರೀತಿಯಿಂದಲಿ ಪೋಷಿಸು ವಾ -
ತಾತಪಾದಿಗಳಿಂದಲವಿರತ
ಈ ತನುವಿನೊಳು ಮಮತೆ ಬಿಟ್ಟಿಹನವನೆ ಮಹಯೋಗಿ || ೨೫ ||

ಭವವೆನಿಪ ವನಧಿಯೊಳು ಕರ್ಮ
ಪ್ರವಹದೊಳು ಸಂಚರಿಸುತಿಹ ದೇ -
ಹವ ಸುನಾವೆಯಮಾಡಿ ತಮ್ಮವರಿಂದಲೊಡಗೂಡಿ ||
ದಿವಸ ದಿವಸಗಳಲ್ಲಿ ಲಕುಮಿ
ಧವನು ಕ್ರೀಡಿಪನೆಂದು ಚಿಂತಿಸೆ
ಪವನನೈಯ ಭವಾಬ್ಧಿ ದಾಟಿಸಿ ಪರಮ ಸುಖವೀವ || ೨೬ ||

ಆಪಣಾಲಯ ಗತ ಪದಾರ್ಥವು
ಸ್ತ್ರೀ ಪುರುಷರಗಳಿಂದ್ರಿಯಗಳಲಿ
ದೀಪಪಾವಕರೊಳಿಡುವ ತೈಲಾದಿ ದ್ರವ್ಯಗಳ ||
ಆ ಪರಮಗವದಾನವೆಂದು
ಪದೇಪದೇ ಮರಿಯದಲೆ ಸ್ಮರಿಸುತ
ಭೂಪನಂದದಿ ಸಂಚರಿಸು ನಿರ್ಭಯದಿ ಸರ್ವತ್ರ || ೨೭ ||

ವಾರಿಜಭವಾಂಡವೆ ಸುಮಂಟಪ
ಮೇರುಗಿರಿ ಸಿಂಹಾಸನವು ಭಾ
ಗೀರಥಿಯೆ ಮಜ್ಜನವು ದಿಗ್ವಸ್ತ್ರಗಳು ನುಡಿ ಮಂತ್ರ ||
ಭೂರುಹಜ ಫಲ ಪುಷ್ಪ ಗಂಧ ಸ -
ಮೀರ ಶಶಿ ರವಿ ದೀಪ ಭೂಷಣ
ತಾರಕಗಳೆಂದರ್ಪಿಸಲು ಕೈಕೊಂಡು ಮನ್ನಿಸುವ || ೨೮ ||

ಭೂಸುರರೊಳಿಪ್ಪಬ್ಜ ಭವನೊಳು
ವಾಸುದೇವನು ವಾಯುಖಗಪ
ಸದಾಶಿವಹಿಪೇಂದ್ರನು ವಿವಸ್ವಾನ್ಸಾಮಕ ಸೂರ್ಯ ||
ಭೇಶಕಾಮಮರಾಖ್ಯ ವರುಣಾ
ದೀಸುರ ಕ್ಷತ್ರಿಯರೊಳಿಪ್ಪರು
ವಾಸವಾಗಿಹ ಸಂಕರುಷಣನ ನೋಡಿ ಮೋದಿಪರು || ೨೯ ||

ಮೀನಕೇತನ ತನಯ ಪ್ರಾಣೋ -
ಪಾನ ವ್ಯಾನೋದಾನ ಮುಖ್ಯೆ -
ಕೋನಪಂಚಾಶನ್ಮರುದ್ಗಣ ರುದ್ರವಸುಗಣರು ||
ಮೇನಕಾತ್ಮಜ ಕುವರ ವಿಶ್ವಕ್ -
ಸೇನ ಧನಪಾದ್ಯನಿಮಿಷರನು ಸ -
ದಾಸುರಾಗದಿ ಧೇನಿಪುದು ವೈಶ್ಯರೊಳು ಪ್ರದ್ಯುಮ್ನ || ೩೦ ||

ಇರುತಿಹರು ನಾಸತ್ಯದಸ್ರರು
ನಿಋುತಿಯು ಯಮಧರ್ಮ ಯಮಕಿಂ -
ಕರರು ಮೇದಿನಿ ಕಾಲಮೃತ್ಯು ಶನ್ಯೈಶ್ಚರಾದಿಗಳು ||
ಕರೆಸಿಕೊಂಬರು ಶೂದ್ರರೆಂದನ -
ವರತ ಶೂದ್ರರೊಳಿಪ್ಪರಿವರೊಳ -
ಗರವಿದೂರನಿರುದ್ಧನಿಹನೆಂದರಿತು ಮನ್ನಿಪುದು || ೩೧ ||

ವೀತಭಯ ನಾರಾಯಣ ಚತುಷ್ -
ಪಾತು ತಾನೆಂದಿನಿಸಿ ತತ್ತ -
ಜ್ಞಾತಿ ಧರ್ಮ ಸುಕರ್ಮಂಗಳ ತಾ ಮಾಡಿ ಮಾಡಿಸುವ ||
ಚೇತನರ ಒಳ ಹೊರಗೆ ವ್ಯೋತ
ಪ್ರೇತನಾಗಿದ್ದೆಲ್ಲರಿಗೆ ಸಂ -
ಪ್ರೀತಿಯಲಿ ಧರ್ಮಾರ್ಥ ಕಾಮಾದಿಗಳ ಕೊಡುತಿಹನು || ೩೨ ||

ನಿಧನ ಧನದ ವಿಧಾತ ವಿಗತಾ -
ಬ್ಯಧಿಕಸಮ ಸಮವರ್ತಿ ಸಾಮಗ
ತ್ರಿದಶಗಣ ಸಂಪೂಜ್ಯ ತ್ರಿಕಕುದ್ಧಾಮ ಶುಭನಾಮ ||

ಮಧು ಮಥನ ಭೃಗುರಾಮ ಘೋಟಕ
ವದನ ಸರ್ವ ಪದಾರ್ಥದೊಳು ತುದಿ
ಮೊದಲು ತುಂಬಿಹನೆಂದು ಚಿಂತಿಸು ಬಿಂಬ ರೂಪದಲಿ || ೩೩ ||

ಕಣ್ಣಡಿಯ ಕೈವಿಡಿದು ನೋಡಲು
ತನ್ನಿರವು ಸವ್ಯಾಪಸವ್ಯದಿ
ಕಣ್ಣೆಗೊಪ್ಪುವ ತೆರದಲನಿರುದ್ಧನಿಗೆ ಈ ಜಗವು ||
ಭಿನ್ನ ಭಿನ್ನವೆ ತೋರುತ್ತಿಪ್ಪದು
ಜನ್ಯವಾದುದರಿಂದ ಪ್ರತಿಬಿಂ -
ಬನ್ನಮಯ ತಾನೆಂದರಿತು ಪೂಜಿಸಲು ಕೈಗೊಂಬಾ || ೩೪ ||

ಬಿಂಬರೆನಿಪರು ಸೋತ್ತಮರು ಪ್ರತಿ
ಬಿಂಬರೆನಿಪರು ಸ್ವಾವರರು ಪ್ರತಿ
ಬಿಂಬ ಬಿಂಬರೊಳಗೆ ಕೇವಲ ಬಿಂಬ ಹರಿಯಂದೂ ||
ಸಂಭ್ರಮದಿ ಪಾಡುತಲಿ ನೋಡುತ
ಉಂಬುಡುವದಿಡುವದು ಕೊಡುವದೆ -
ಲ್ಲಾಂಬುಜಾಕ್ಷಕನಂಘ್ರಿ ಪೂಜೆಗಳೆಂದು ನಲಿದಾಡು || ೩೫ ||

ನದಿಯ ಜಲ ನದಿಗೆರೆವ ತೆರದಂ -
ದದಲಿ ಭಗವದತ್ತ ಧರ್ಮಗ
ಳುದಧಿಶಯನನಿಗರ್ಪಿಸುತ ವ್ಯಾವೃತ್ತ ನೀನಾಗಿ ||
ವಿಧಿನಿಷೇಧಾದಿಗಳಿಗೊಳಗಾ
ಗದಲೆ ಮಾಡುತ ದರ್ಪಿಯಂದದಿ
ಪದುಮನಾಭನ ಸಕಲ ಕರ್ಮಗಳಲ್ಲಿ ನೆನೆಯುತಿರು || ೩೬ ||

ಅರಿಯದಿರ್ದರು ಯಮ್ಮೊಳಿದ್ದನ -
ವರತ ವಿಷಯಗಳುಂಬ ಜ್ಞಾನೋ -
ತ್ತರದಿ ತನಗರ್ಪಿಸಲು ಚಿತ್ಸುಖವಿತ್ತು ಸಂತೈಪ ||
ಸರಿತು ಕಾಲ ಪ್ರವಹಗಳು ಕಂ
ಡರೆಯು ಸರಿ ಕಾಣದಿರೆ ಪರಿವವು
ಮುರಳಿ ಮಜ್ಜನ ಪಾನ ಕರ್ಮಗಳಿಂದ ಸುಖವಿಹವು || ೩೭ ||

ಏನು ಮಾಡುವ ಕರ್ಮಗಳು ಲಕು
ಮೀ ನಿವಾಸನಿಗರ್ಪಿಸನುಸಂ -
ಧಾನ ಪೂರ್ವಕದಿಂದ ಸಂದೇಹಿಸದೆ ದಿನದಿನದಿ ||
ಮಾನನಿಧಿ ಕೈಕೊಂಡು ಸುಖ ವಿ
ತ್ತಾನಂತರ ಸಂತೈಪ ತೃಣ ಜಲ
ಧೇನು ತಾಸುಂಡನವರತ ಪಾಲ್ಗರೆವ ತೆರದಂತೆ || ೩೮ ||

ಪೂರ್ವ ದಕ್ಷಿಣ ಪಶ್ಚಿಮೋತ್ತರ
ಪಾರ್ವತೀಪತಿಯಗ್ನಿ ವಾಯು ಸು -
ಶಾರ್ವರೀಚರ ದಿಗ್ವಲಯದೊಳು ಹಂಸನಾಮಕನು ||
ಸರ್ವಕಾಲದಿ ಸರ್ವರೊಳು ಸುರ
ಸಾರ್ವಭೌಮನು ಸ್ವೇಚ್ಛೆಯಲಿ ಮ
ತ್ತೋರ್ವರಿಗೆ ಗೋಚರಿಸದ ವ್ಯಕ್ತಾತ್ಮನೆಂದೆನಿಸಿ || ೩೯ ||

ಪರಿ ಇಡಾವತ್ಸರನು ಸಂವ
ತ್ಸರದೊಳನಿರುದ್ಧಾದಿರೂಪವ
ಧರಿಸಿ ಬಾರ್ಹಸ್ಪತ್ಯ ಸೌರ ಭ ಚಾಂದ್ರಮನು ಎನಿಸಿ ||
ಇರುತಿಹ ಜಗನ್ನಾಥ ವಿಠಲ
ಸ್ಮರಿಸುವರನು ಸಂತಯಿಪನೆಂ -
ದುರುಪರಾಕ್ರಮನುಚಿತ ಸಾಧನ ಯೋಗ್ಯತೆಯನರಿತು || ೪೦ ||

# ೬ ಪಂಚ ಮಹಾ ಯಜ್ಞ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು || ಪ ||

ಜನನಿ ಪಿತ ಭೂ ವಾರಿದಾಂಬರ -
ವೆನಿಪ ಪಂಚಾಗ್ನಿಯಲಿ ನಾರಾ
ಯಣನ ತ್ರಿಶಂತಿ ಮೂರ್ತಿಗಳ ವ್ಯಾಪಾರ ವ್ಯಾಪ್ತಿಗಳ ||

ನೆನೆದು ದಿವಸಗಳೆಂಬ ಸಮಿಧೆಗ -
ಳನು ನಿರಂತರದಿ ಹೋಮಿಸುತ ಪಾ
ವನಕೆ ಪಾವನ ನೆನಿಪ ಪರಮನ ಬೇಡು ಪರಮಸುಖ || ೧ ||

ಗಗನ ಪಾವಕ ಸಮಿಧೆ ರವಿ ರ -
ಶ್ಮಿಗಳೆ ಧೂಮವು ಅರ್ಚಿಯನಿಪುದೇ
ಹಗಲು ನಕ್ಷತ್ರಗಳೆ ಕಿಡಿಗಳು ಚಂದ್ರಮಾಂಗಾರ ||
ಮೃಗವರೋದರನೊಳಗೆ ಐದೂ
ರೂಪಗಳ ಚಿಂತಿಸಿ ಭಕ್ತಿರಸ ಮಾ -
ತುಗಳೆ ಮಂತ್ರವು ಮಾಡಿ ಹೋಮಿಸುವರು ವಿಪಶ್ಚಿತರು || ೨ ||

ಪಾವಕನು ಪರ್ಜನ್ಯ ಸಮಿಧೆಯು
ಪ್ರಾವಹೀಪತಿ ಧೂಮಗಳೆ ಮೇ -
ಘಾವಳಿಗಳರ್ಚಿಕ್ಷಣ ಪ್ರಭೆ ಗರ್ಜನವೆ ಕಿಡಿಯು ||
ಭಾವಿಸುವದಂಗಾರ ಸಿಡಿಲೆಂ -
ದೀವಿಧಾಗ್ನಿಯೊಳಬ್ಧಿಜಾತನ
ಕೋವಿದರು ಹೋಮಿಸುವರನು ದಿನ ಪರಮ ಭಕುತಿಯಲಿ || ೩ ||

ಧರಣಿಯುಂಬುದೆ ಅಗ್ನಿ ಸಂವ
ತ್ಸರವು ಸಮಿಧೆ ವಿಹಾಯಸವೆ ಪೊಗೆ
ಇರುಳುರಿ ದಿಶಾಂಗಾರವಾಂತರ ದಿಗ್ಗಲಯ ಕಿಡಿಯೂ ||
ವರುಷವೆಂಬಾಹುತಿಗಳಿಂದ
ಹರಿಯ ಮೆಚ್ಚಿಸಿ ಸಕಲರೊಳಗೆ
ಧ್ವರಿಯನಾಗಿರು ಸರ್ವ ರೂಪಾತ್ಮಕನ ಚಿಂತಿಸುತ || ೪ ||

ಪುರುಷಶಿಖಿ ವಾಕ್ ಸಮಿಧೆ ಧೂಮವು
ಕರಣವರ್ಚಿಯು ಜಿಹ್ವೆಶ್ರೋತ್ರಗ -
ಳೆರಡು ಕಿಡಿಗಳು ಲೋಚನಗಳಂಗಾರವೆನಿಸುವವು ||
ನಿರುತ ಭುಂಜಿಸುವನ್ನ ಯದುಕುಲ
ವರನಿಗವದಾನಗಳೆಂದೀ -
ಪರಿಸಮರ್ಪಣೆಗೈಯೆ ಕೈಕೊಂಡನುದಿನದಿ ಪೊರೆವ || ೫ ||

ಮತ್ತೆ ಯೋಷಾಗ್ನಿಯೊಳು ತಿಳಿವದು -
ಪಸ್ಥ ತತ್ವವೇ ಸಮಿಧೆ ಕಾಮೋ -
ತ್ಪತ್ತಿ ಪರಮಾತುಗಳೇ ಧೂಮವು ಯೋನಿ ಮಹದರ್ಚಿ ||
ತತ್ತ್ವವೇಶಾಂಗಾರ ಕಿಡಿಗಳು
ಉತ್ಸಹಗಳುತ್ಸರ್ಜನವು ಪುರು
ಷೋತ್ತಮನಿಗವದಾನವೆನೆ ಕೈಕೊಂಡು ಮನ್ನಿಸುವ || ೬ ||

ಐದು ಅಗ್ನಿಗಳಲ್ಲಿ ಮರಿಯದ
ಲೈದು ರೂಪಾತ್ಮಕನ ಇಪ್ಪ
ತ್ತೈದು ರೂಪಗಳನುದಿನದಿ ನೆನೆವರಿಗೆ ಜನುಮಗಳ ||
ಐದಿಸನು ನಳಿನಾಕ್ಷ ರಣದೊಳು
ಮೈದುನನ ಕಾಯದಂತೆ ಸಲುಹುವ
ಬೈದವಗೆ ಗತಿಯಿತ್ತ ಭಯಹರ ಭಕ್ತವತ್ಸಲನು || ೭ ||

ಪಂಚನಾರೀ ತುರಗವಂದದಿ
ಪಂಚರೂಪಾತ್ಮಕನು ತಾ ಷಟ್
ಪಂಚ ರೂಪವ ಧರಿಸಿ ತತ್ತನ್ನಾಮದಿಂ ಕರೆಸಿ ||
ಪಂಚಪಾವಕ ಮುಖದಿ ಗುಣಮಯ
ಪಂಚಭೂತಾತ್ಮಕ ಶರೀರವ
ಪಂಚವಿಧ ಜೀವರಿಗೆ ಕೊಟ್ಟಲ್ಲಲ್ಲೆ ರಮಿಸುವನು || ೮ ||

ವಿಧಿಭವಾದಿ ಸಮಸ್ತ ಜೀವರ
ಹೃದಯದೊಳಗೇಕಾತ್ಮನೆನಿಸುವ
ಪದುಮನಾಭನು ಅಚ್ಯುತಾದಿ ಅನಂತರೂಪದಲಿ ||
ಅಧಿಸುಭೂತಾಧ್ಯಾತ್ಮವಧಿದೈ -
ವದೊಳು ಕರೆಸುವ ಪ್ರಾಣನಾಗಾ -
ಭಿದನು ದಶರೂಪದಲಿ ದಶ ವಿಧ ಪ್ರಾಣರೊಳಗಿದ್ದು || ೯ ||

ಈರೈದು ಸಾವಿರದ ಇಪ್ಪ
ತ್ತಾರಧಿಕ ಮುನ್ನೂರು ರೂಪಗೆ
ಳೀರೆರಡು ಸ್ಥಾನದಲಿ ಚಿಂತಿಪುದನುದಿನದಿ ಬುಧರು ||

ನೂರು ಇಪ್ಪತ್ತೇಳಧಿಕ ಮೂ
ರಾರು ಸಾವಿರ ರೂಪದಿಂ ದಶ
ಮಾರುತರೊಳಿದ್ದ ಪರವರ ಪೆಸರಿಂದ ಕರೆಸುವನು || ೧೦ ||

ಚಿತ್ತಯಿಸುವುದು ಎಂಟಧಿಕ ಇ -
ಪ್ಪತ್ತು ಸಾವಿರ ನಾಲ್ಕು ಶತ
ಐವತ್ತು ಮೂರು ಸುಮೂರ್ತಿಗಳು ಇಹವಿಲ್ಲಿ ಪರಿಯಂತಾ ||
ಹತ್ತು ನಾಲಕು ರೂಪಗಳ ನೆರೆ
ವಿಸ್ತರವನೀಪರಿ ತಿಳಿದು ಪುರು -
ಷೋತ್ತಮನ ಸರ್ವತ್ರ ಪೂಜೆಯ ಮಾಡು ಕೊಂಡಾಡು || ೧೧ ||

ಈರೆರಡು ಶತದ್ವ್ಯಷ್ಟಾಧಿಕ ಹದಿ -
ನಾರು ಸಾವಿರ ರೂಪ ಸರ್ವ ಶ -
ರೀರದೊಳು ಶಬ್ದಾದಿಗಳಧಿಷ್ಠಾನದೊಳಗಿಪ್ಪ ||
ಮಾರುತನು ನಾಗಾದಿ ರೂಪದಿ
ಮೂರೆನೆ ಗುಣಮಾನಿ ಶ್ರೀ ದು -
ರ್ಗಾರಮಣ ವಿದ್ಯಾಕುಮೋಹವ ಕೊಡುವ ಕರಣಕ್ಕೆ || ೧೨ ||

ಐದು ವಿದ್ಯೆಗಳೊಳಗೆ ಇಹ ನಾ
ಗಾದಿಗಳಧಿಷ್ಠಾನದಲಿ ಲಕು
ಮೀಧವನು ಕೃದ್ಧೋಲ್ಕ ಮೊದಲಾದ್ಯೆದು ರೂಪಗಳ ||
ತಾ ಧರಿಸಿ ಸಜ್ಜನರ ವಿದ್ಯವ
ಛೇದಿಸುವ ತಾಮಸರಿಗಜ್ಞಾ -
ನಾದಿಗಳ ಕೊಟ್ಟಪರವರ ಸಾಧನವ ಮಾಡಿಸುವ || ೧೩ ||

ಗೋಪುಗಳೊಳುದ್ಗೀಥನಿಹ ಪ್ರ -

ಯುಗಚತುಷ್ಟಯಗಳಲಿ ತಾನಿ -
ದ್ಯುಗ ಪ್ರವರ್ತಕ ಧರ್ಮಕರ್ಮಗ -
ಳಿಗೆ ಪ್ರವರ್ತಕ ವಾಸುದೇವಾದೀರೆರಡು ರೂಪಾ ||
ತೆಗೆದುಕೊಂಡು ಯುಗಾದಿ ಕೃತು ತಾ
ಯುಗ ಪ್ರವರ್ತಕನೆನಿಸಿ ಧರ್ಮ
ಪ್ರಘಟಕನು ತಾನಾಗಿ ಭಕುತರಿಗೀವ ಸಂಪದವ || ೧೫ ||

ತಲೆಯೊಳಿಹ ನಾರಾಯಣನು ಗಂ -
ಟಲೆಡೆ ಒಡಲೊಳು ವಾಸುದೇವನು
ಬಲದಲಿಹ ಪ್ರದ್ಯುಮ್ನನ ಯಡಭಾಗದಲಿ ಅನಿರುದ್ಧ ||
ಕೆಳಗಿನಂಗದಿ ಸಂಕರಷಣ
ತಿಳಿದು ಈ ಪರಿ ಸಕಲ ದೇಹಗ -
ಳೊಳಗೆ ಪಂಚಾತ್ಮಕನ ರೂಪವ ನೋಡು ಕೊಂಡಾಡು || ೧೬ ||

ತನು ವಿಶಿಷ್ಟದಿ ಇಪ್ಪ ನಾರಾ -
ಯಣನು ಕಟಿ ಪದಾಂತ ಸಂಕರು -
ಷಣನು ಶಿರ ಜಘನಾಂತವಾಗಿಹವಾಸುದೇವಾಖ್ಯ ||
ಅನಿಮಿಶೇಷನಿರುದ್ಧ ಪ್ರದ್ಯು
ಮ್ನನು ಎಡದಿ ಬಲಭಾಗದಲಿ ಚಿಂ -
ತನೆಯ ಮಾಳ್ಪರಿಗುಂಟೆ ಮೈಲಿಗೆಯ ವಿಧಿ ನಿಷೇಧಗಳು || ೧೭ ||

ಪದುಮನಾಭನು ಪಾಣೆಯೊಳಗಿಹ
ವದನದಲಿ ಹೃಷಿಕೇಶ ನಾಸಿಕ
ಸದನದಲಿ ಶ್ರೀಧರನು ಜಿಹ್ವದೊಳಿಪ್ಪ ವಾಮನನು ||
ಮೃದುಳ ತ್ವಗ್ದೇಶದಿ ತ್ರಿವಿಕ್ರಮ
ಮಧುವಿರೋಧಿಯು ಲೋಚನದಿ ಕರ -
ಣದಲಿ ಇಪ್ಪನು ವಿಷ್ಣುನಾಮಕ ಶ್ರವಣನೆಂದೆನಿಸಿ || ೧೮ ||

ಮನದಲಿಹ ಗೋವಿಂದ ಮಾಧವ
ಧನಪಸಖ ತತ್ತ್ವದಲಿ ನಾರಾ -
ಯಣ ಮಹತ್ತತ್ತ್ವದಲಿ ಅವ್ಯಕ್ತದಲಿ ಕೇಶವನು ||

ಇನಿತು ರೂಪವ ದೇಹದೊಳು ಚಿಂ -
ತನೆಯಗೈವ ಮಹಾತ್ಮರಿಳಿಯೊಳು
ಮನುಜರವರಲ್ಲಮರರೇಸರಿ ಹರಿಕೃಪಾಬಲದಿ || ೧೯ ||

ಜಲದೊಳಿಪ್ಪನು ಹರಿಯೆನಿಸಿ ಶಿಖಿ -
ಒಳಗೆ ಇಪ್ಪನು ಪರಶುರಾಮನುಪೇಂದ್ರನೆಂದೆನಿಸಿ ||
ಯಲರೊಳಿಪ್ಪ ಜನಾರ್ದನನು ಬಾಂ
ದಳದೊಳಚ್ಯುತ ಗಂಧ ನರಹರಿ
ಪೊಳೆವಧೋಕ್ಷಜ ರಸಗಳೊಳು ರಸರೂಪ ತಾನಾಗಿ || ೨೦ ||

ರೂಪ ಪುರುಷೋತ್ತಮನು ಸ್ಪರ್ಶ
ವ್ಯಾಪಕನು ಅನಿರುದ್ಧ ಶಬ್ದಾದಿ
ವ್ಯಾಪಿಸಿಹ ಪ್ರದ್ಯುಮ್ನುಪಸ್ಥದಿ ವಾಸುದೇವನಿಹ ||
ತಾ ಪೊಳೆವ ಪಾಯುಸ್ಥನಾಗಿ ಜ -
ಯಾಪತಿಯು ಸಂಕರ್ಷಣನು ಸು -
ಸ್ಥಾಪಕನು ಅಹ ಪಾದದೊಳು ದಾಮೋದರನು ಪೊಳೆವ || ೨೧ ||

ಚತುರವಿಂಶತಿ ತತ್ವದೊಳು ಶ್ರೀ
ಪತಿಯು ಅನಿರುದ್ಧಾದಿರೂಪದಿ
ವಿತತನಾಗಿದ್ದಖಿಳಜೀವರ ಸಂಹನನದೊಳಗೆ ||
ಪ್ರತತಿಯಿಂದದಿ ಸುತ್ತಿಸುತ್ತುತ
ಪಿತೃಗಳಿಗೆ ತರ್ಪಕನೆನಿಸಿ ಕೊಂ -
ದತುಳ ಮಹಿಮನು ಷಣ್ಣಾವತಿ ನಾಮದಲಿ ನೆಲಿಸಿಹನು || ೨೨ ||

ಚತುರವಿಂಶತಿ ತತ್ವದೊಳು ತ -
ತ್ಪತಿಗಳೆನಿಸುವ ಬ್ರಹ್ಮಮುಖ ದೇ -
ವತೆಗಳೊಳು ಹನ್ನೊಂದು ನೂರೈವತ್ತೆರಡು ರೂಪ ||
ವಿತತನಾಗಿದ್ದೆಲ್ಲ ಜೀವರ
ಜತನ ಮಾಡುವಗೋಸುಗ ಜಗ -
ತ್ಪತಿಗೆ ಏನಾದರು ಪ್ರಯೋಜನವಿಲ್ಲವಿದರಿಂದ || ೨೩ ||

ಇಂದಿರಾಧವ ಶಕ್ತಿ ಮೊದಲಾ
ದೊಂದಧಿಕದಶರೂಪದಿಂದಲಿ
ಪೊಂದಿಪನು ಸಕಲೇಂದ್ರಿಯಗಳಲಿ ಪುರುಷನಾಮಕನು ||
ಸುಂದರಪ್ರದ ಪೂರ್ಣಜ್ಞಾನಾ
ನಂದಮಯ ಚಿದ್ದೇಹ ದೊಳು ತಾ
ಪಂದರೆಕ್ಷಣವಗಲದಲೆ ಪರಮಾಪ್ತನಾಗಿಪ್ಪ || ೨೪ ||

ಆರಧಿಕ ದಶ ರೂಪದಿಂದಲಿ
ತೋರುತಿಪ್ಪನು ವಿಶ್ವ ಲಿಂಗ ಶ -
ರೀರದೊಳು ತೈಜಸನು ಪ್ರಾಜ್ಞನು ತುರ್ಯನಾಮಕನು ||
ಮೂರೈದು ರೂಪಗಳಿಂದಲಿ
ಈರೈದು ಕರಣದೊಳು ಮಾತ್ರಾದಿ
ಖೇರ ಶಿಖಿ ಜಲ ಭೂಮಿಯೊಳಗಿಹನಾತ್ಮನಾಮದಲಿ || ೨೫ ||

ಮನದೊಳಹಂಕಾರದಲಿ ಚಿಂ -
ತನಯ ಮಾಳ್ಪುದು ಅಂತರಾತ್ಮನ -
ಘನ ಸುತತ್ವದಿ ಪರಮನ ವ್ಯಕ್ತದಲಿ ಜ್ಞಾನಾತ್ಮ||
ಇನಿತು ಪಂಚಾಶದ್ವರಣ ವೇ
ದ್ಯನ ಅಜಾದ್ಯೈವತ್ತು ಮೂರ್ತಿ ಗ -
ಳನು ಸದಾ ಸರ್ವತ್ರ ದೇಹಗಳಲ್ಲಿ ಪೂಜಿಪುದು || ೨೬ ||

ಚತುರವಿಂಶತಿ ತತ್ವದೊಳು ತ -
ತ್ಪತಿಗಳೆನಿಸುವ ಬ್ರಹ್ಮಮುಖ ದೇ -
ವತೆಗಳೊಳು ಹದಿಮೂರು ಸಾವಿರದೆಂಟನೂರಧಿಕ ||
ಚತುರವಿಂಶತಿ ರೂಪದಿಂದಲಿ
ವಿತತನಾಗಿದ್ದೆಲ್ಲರೊಳು ಪ್ರಾ -
ಕೃತ ಪುರುಷನಂದದಲಿ ಪಂಚಾತ್ಮಕನು ರಮಿಸುವನು || ೨೭ ||

ಕೇಶವಾದಿ ಸುಮೂರ್ತಿ ದ್ವಾದಶ
ಮಾಸ ಪುಂಡ್ರಗಳಲ್ಲಿ ವೇದ -
ವ್ಯಾಸ ಅನಿರುದ್ಧಾದಿ ರೂಪಗಳಾರು ಋತುಗಳಲಿ ||

ವಾಸವಾಗಿಹವೆಂದು ತ್ರಿಂಶತಿ
ವಾಸರದಿ ಸತ್ಕರ್ಮ ಧರ್ಮ ನಿ -
ರಾಶೆಯಿಂದಲಿ ಮಾಡು ಕರುಣಾವ ಬೇಡು ಕೊಂಡಾಡು || ೨೮ ||

ಲೋಷ್ಟ ಕಾಂಚನ ಲೋಹ ಶೈಲಜ
ಕಾಷ್ಟ ಮುಂತಾದಖಿಳ ಜಡ ಪರ -
ಮೇಷ್ಟಿ ಮೊದಲಾದೆಲ್ಲ ಚೇತನರೊಳಗೆ ಅನುದಿನವು ||
ಚೇಷ್ಟೆಗಳ ಮಾಡಿಸುತ ತಿಳಿಸದೆ
ಪ್ರೇಷ್ಟನಾಗಿದ್ದೆಲ್ಲರಿಗೆ ಸ -
ರ್ವೇಷ್ಟದಾಯಕ ಸಂತಯಿಸುವನು ಸರ್ವಜೀವರನು || ೨೯ ||

ವಾಸುದೇವಾನಿರುದ್ದ ರೂಪದಿ
ಪುಂಶರೀರದೊಳಿಹನು ಸರ್ವದ
ಸ್ತ್ರೀ ಶರೀರದೊಳಿಹನು ಸಂಕರ್ಷಣ ಪ್ರದ್ಯುಮ್ನ||
'ದ್ವಾಸುಪರ್ಣ' ಶ್ರುತಿವಿನುತ ಸ -
ರ್ವಾಸು ನಿಲಯ ನಾರಾಯಣ ಸದು
ಪಾಸನೆಯ ಗೈದವರು ಜೀವನ್ಮುಕ್ತರೆನಿಸುವರು || ೩೦ ||

ತನ್ನನಂತಾನಂತ ರೂಪವ ಹಿ -
ರಣ್ಯಗರ್ಭಾದಿಗಳೊಳಗೆ ಕಾ -
ರುಣ್ಯಸಾಗರ ಹರಹಿ ಅವರವರಖಿಳ ವ್ಯಾಪಾರ ||
ಬನ್ನಬಡದಲೆ ಮಾಡಿ ಮಾಡಿಸಿ
ಧನ್ಯರೆನಿಸಿ ಸಮಸ್ತ ದಿವಿಜರ
ಪುಣ್ಯ ಕರ್ಮವ ಸ್ವೀಕರಿಸಿ ಫಲವಿತ್ತು ಪಾಲಿಸುವ || ೩೧ ||

ಸಾಗರದೊಳಗಿಹ ನದಿಯ ಜಲ ಭೇ -
ದಾಗಸದೊಳಿಪ್ಪಬ್ದ ಬಲ್ಲವು
ಕಾಗಿ ಗುಬ್ಬಿಗಳರಿಯ ಬಲ್ಲವೆ ನದಿಯ ಜಲಸ್ಥಿತಿಯ ||
ಭೋಗಿವರ ಪರ್ಯಂಕಶಯನನೊ -
ಳೀ ಗುಣತ್ರಯ ಬದ್ಧ ಜಗವಿಹ -
ದಾಗಮಜ್ಞರು ತಿಳಿವರಜ್ಞಾನಿಗಳಿಗಳವಡದು || ೩೨ ||

ಕರಣಗುಣ ಭೂತಗಳೊಳಗೆ ತ -
ದ್ವರರೆನಿಪ ಬ್ರಹ್ಮಾದಿ ದಿವಿಜರೊ -
ಳರಿತು ರೂಪ ಚತುಷ್ಟಯಗಳನು ದಿನದಿನದಿ ಸರ್ವತ್ರ ||
ಸ್ಮರಿಸುತನುಮೋದಿಸುತ ಹಿಗ್ಗುತ
ಪರವಶದಿ ಪಾಡುವವರಿಗೆ ತನ್ನಿ -
ರವ ತೋರಿಸಿ ಭವ ಮುಕ್ತರ ಮಾಡಿ ಪೋಷಿಸುವ || ೩೩ ||

ಮೂಲರೂಪನು ಮನದೊಳಿಹ ಶ್ರವ -
ಣಾಲಿಯೊಳಗಿಹ ಮತ್ಸ್ಯ ಕೂರ್ಮನು
ಕೋಲರೂಪನು ತ್ವಗ್ರಸನದೊಳಿಪ್ಪ ನರಸಿಂಹ ||
ಬಾಲವಟು ವಾಮನನು ನಾಸಿಕ
ನಾಳದೊಳ ವದನದಲಿ ಭಾರ್ಗವ
ವಾಲಿಭಂಜನ ಹಸ್ತದಲಿ ಪಾದದಲಿ ಶ್ರೀಕೃಷ್ಣ || ೩೪ ||

ಜಿನವಿಮೋಹಕ ಬುದ್ಧ ಪಾಯುಗ
ದನುಜ ಮರ್ದನ ಕಲ್ಕಿ ಮೇಢ್ರದಿ
ಇನಿತು ದಶರೂಪಗಳ ದಶ ಕರಣಂಗಳಲಿ ತಿಳಿದು ||
ಅನುಭವಿಪ ವಿಷಯಗಳೇ ಕೃಷ್ಣಾ
ರ್ಪಣವೆನಲು ಕೈಗೊಂಬ ವೃಜನಾ -
ರ್ದನ ವರ ಜಗನ್ನಾಥ ವಿಠಲ ವಿಶ್ವ ವ್ಯಾಪಕನು || ೩೫ ||

# ೭ ಪಂಚತನ್ಮಾತ್ರ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು || ಪ ||

ಭೂ ಸಲಿಲ ಶಿಖಿ ಪವನ ಭೂತಾ -
ಕಾಶದೊಳಗೈದೈದು ತನ್ಮಾ -
ತ್ರಾ ಸಹಿತ ಒಂದಧಿಕ ಪಂಚಾಶದ್ವರ್ಣವೇದ್ಯ ||

ಈ ಶರೀರದಿ ವ್ಯಾಪಿಸಿದ್ದುರ್ವ
ಸುರಾಸುರರಿಗೆ ನಿರಂತರದಲಿ ಸು
ಖಾಸುಖ ಪ್ರದನಾಗಿ ಆಡುವ ದ್ವೇಷಿಪರ ಬಡಿವ || ೧ ||

ಪ್ರಣವಪ್ರತಿಪಾದ್ಯ ತ್ರಿನಾಮದಿ
ತನುವಿನೊಳು ತ್ರಿಸ್ಥಾನಗನಿರು -
ದ್ಧನು ತ್ರಿಪಂಚಕ ಏಕವಿಂಶತಿ ಚತುರ ವಿಂಶತಿಗ ||
ಎನಿಸಿ ಎಪ್ಪತೆರಡು ಸಾವಿರ
ಇನಿತು ನಾಡಿಗಳೊಳು ನಿಯಾಮಿಸು
ತಿನಗಭಸ್ತಿಗ ಲೋಕದೊಳು ಸರ್ವತ್ರ ಬೆಳಗುವನು || ೨ ||

ಜೀವಲಿಂಗನಿರುದ್ಧ ಸ್ಥೂಲಕ
ಳೇವರಗಳೊಳು ವಿಶ್ವ ತುರಗ
ಗ್ರೀವ ಮೂಲೇಶಾಚ್ಯುತತ್ರಯ ಹಂಸ ಮೂರ್ತಿಗಳು ||
ಈ ವಿಧ ಚತುಸ್ಥಾನದಲಿ ಶಾಂ
ತಿವರನ ಈರೆರಡು ರೂಪದಿ
ಭಾವಿಸುವುದೇಕೋನವಿಂಶತಿ ಮೂರ್ತಿ ಸರ್ವತ್ರ || ೩ ||

ಕಲುಷವಿಲ್ಲದ ದರ್ಪಣಾದಿ ಪ್ರತಿ -
ಫಲಿಸಿ ಸರ್ವಪದಾರ್ಥಗಳು ಕಂ
ಗೊಳಿಸುವಂದದಿ ಬಿಂಬ ಜಡ ಚೇತನಗಳೊಳಗಿದ್ದು ||
ಪೊಳೆವ ಬಹುರೂಪದಲಿ ಸಜ್ಜನ -
ರೊಳಗೆ ಮನದರ್ಪಣದಿ ತಾ ನಿ -
ಶ್ಚಲ ನಿರಾಮಯ ನಿರ್ವಿಕಾರ ನಿರಾಶ್ರಯಾನಂತ || ೪ ||

ಈ ಶರೀರ ಚತುಷ್ಟಯಗಳೊಳು
ಕೋಶಧಾತುಗ ಭಾರತಿಪತಿ ಪ್ರಾ -
ಣೇಶನಿಪ್ಪತ್ತೊಂದು ಸಾವಿರದಾರನೂರೆನಿಪ ||
ಶ್ವಾಸರೂಪಕ ಹಂಸ ಭಾಸ್ಕರ
ಭೇಶರೊಳಗಿರ್ದವರ ಕೈವಿಡಿ -
ದೀ ಸರೋಜ ಭವಾಂಡದೊಳು ಸರ್ವತ್ರ ತುಂಬಿಹನು || ೫ ||

ಶಿರಗಳೈದೈದೆರಡು ಬಾಹುಗ
ಳೆರಡು ಪಾದಗಳೊಂದು ಮಧ್ಯೋ
ದರದಿ ಶೋಭಿಪವಾಂಙ್ಮನೋಮಯನೆನಿಪನಿತ್ಯದಲಿ ||
ಕರಣ ಧಾತುಗಳಲ್ಲಿಎಪ್ಪ -
ತ್ತೆರಡು ಸಾವಿರನಾಡಿಗಳಲಿ -
ಪ್ಪುರವಿದೂರನು ಭಾರತ ಪ್ರತಿಪಾದ್ಯಾನೆಂದೆನಿಸಿ || ೬ ||

ಈರೆರಡು ದೇಹೋರ್ಮಿಭೂತಗ -
ಳಾರಧಿಕದಶಯುಗ್ಮಿಸುತ ಲ -
ಕ್ಷ್ಮೀರಮಣ ವಿಷ್ವಾಖ್ಯರೂಪದಿ ಚತುಃಷಷ್ಟಿಕಲಾ ||
ಧಾರಕನು ತಾನಾಗಿ ಬ್ರಹ್ಮ ಪು -
ರಾರಿ ಮುಖ್ಯ ರೊಳಿದ್ದು ಸತತ ವಿ -
ಹಾರ ಮಾಳ್ಪನು ಚತುಷ್ಪಾದಾಹ್ವಯದಿ ಲೋಕದೊಳು || ೭ ||

ತೃಣ ಮೊದಲು ಬ್ರಹ್ಮಾಂತ ಜೀವರ
ತನು ಚತುಷ್ಟಯಗಳಲಿ ನಾರಾ -
ಯಣನ ಸಾವಿರದೈದು ನೂರಿಪ್ಪತ್ತು ಮೇಲಾರು ||
ಗಣನೆ ಮಾಳ್ಪದು ಬುಧರು ರೂಪವ
ಘೃಣಿಃ ಸೂರ್ಯಾದಿತ್ಯನಾಮಗ -
ಳನುದಿನದಿ ಜಪಿಸುವರಿಗೀವಾರೊಗ್ಯ ಸಂಪದವಾ || ೮ ||

ಐದು ನೂರೆಪ್ಪತ್ತನಾಲ್ಕು
ಅಧಿಭೌತಿಕದಲ್ಲಿ ತಿಳಿಯುದು
ಐದೆರಡು ಶತ ಏಕವಿಂಶತಿ ರೂಪವಧ್ಯಾತ್ಮ ||
ಭೇದಗಳಲಿನ್ನೂರು ಮೂವ -
ತ್ತಾದ ಮೇಲೊಂದಧಿಕ ಮೂರ್ತಿಗ -
ಳಾದರದಲಾಧಿದೈವದೊಬಳು ಚಿಂತಿಪುದು ಭೂಸುರರು || ೯ ||

ಸುರಚಿ ಶಾರ್ವರೀಕರನೆನಿಸಿ ಸಂ -
ಕರುಷಣ ಪ್ರದ್ಯುಮ್ನ ಶಶಿ ಭಾ -
ಸ್ಕರರೊಳಗೆ ಅರವತ್ತಧಿಕ ಮೂನ್ನೂರು ರೂಪದಲಿ ||

ಕರಸಿಕೊಂಬನು ಅಹಸ್ಸಂಪ
ತ್ಸರನೆನಿಪನು ವಿಶಿಷ್ಟನಾಮದ
ಲರಿತವರಿಗಾರೋಗ್ಯ ಭಾಗ್ಯವನೀವಾನಂದಮಯ || ೧೦ ||

ಏಕ ಪಂಚಾಶದ್ವರ್ಣಗತ
ಮಾಕಳತ್ರನು ಸರ್ವರೊಳಗ -
ವ್ಯಾಕೃತಾಕಾಶಾಂತ ವ್ಯಾಪಿಸಿ ನಿಗಮ ತತಿಗಳನು ||
ವ್ಯಾಕರಣ ಭಾರತ ಮುಖಾದ್ಯ
ನೇಕ ಶಾಸ್ತ್ರ ಪುರಾಣ ಭಾಷ್ಯಾ
ನೀಕಗಳ ಕಲ್ಪಿಸಿ ಮನೋವಾಙ್ಮಯ ನೆನಿಸಿಕೊಂಬ || ೧೧ ||

ಭಾರಭೃನ್ನಾಮಕನ ಸಾವಿರ
ದಾರು ನೂರಿಪ್ಪತ್ತು ನಾಲ್ಕು
ಮೂರುತಿಗಳ ಚರಾಚರದಿ ಸರ್ವತ್ರ ತುಂಬಿಹವು ||
ಆರು ನಾಲ್ಕು ಜಡಗಳಲಿ ಹದಿ -
ನಾರು ಚೇತನಗಳಲಿ ಚಿಂತಿಸೆ
ತೋರಿಕೊಂಬನು ತನ್ನ ರೂಪವ ಸರ್ವತಾವಿನಲಿ || ೧೨ ||

ಮಿಸುನಿಮೇಲಣ ಮಣಿಯವೋಲ್ ರಾ -
ರಾಜಿಸುವ ಬ್ರಹ್ಮಾದಿಗಳ ಮನದಲಿ
ಬಿಸಜ ಜಾಂಡಾಧಾರಕನು ಆಧೇಯನೆಂದೆನಿಸಿ ||
ದ್ವಿಶತ ನಾಲ್ವತ್ತೆರಡು ರೂಪದಿ
ಶಶಿಯೊಳಿಪ್ಪನು ಶಶಿಯೊಳಗೆ ಶೋ
ಭಿಸುವ ನಾಲ್ವತ್ತೆರಡಧಿಕ ಶತರೂಪದಲಿ ಬಿಡದೆ || ೧೩ ||

ಎರಡು ಸಾವಿರದೆಂಟು ರೂಪವ -
ನರಿತು ಸರ್ವ ಪದಾರ್ಥದಲಿ ಸಿರಿ
ವರನ ಪೂಜೆಯ ಮಾಡು ವರಗಳಬೇಡು ಕೊಂಡಾಡು ||
ಬರಿದೆ ಜಲದಲಿ ಮುಣಗಿ ಬಿಸಲೊಳು
ಬೆರಳೆಣಿಸಿದರೇನು ಸದ್ಗುರು
ಹಿರಿಯರನುಸರಿಸಿದರ ಮರ್ಮವನರಿಯದಿಹ ನರನು || ೧೪ ||

ಮತ್ತೆ ಚಿದ್ದೇಹದೊಳಗೆಂ -
ಭತ್ತು ಸಾವಿರದೇಳು ನೂರಿ -
ಪ್ಪತ್ತೈದುನರಸಿಂಹ ರೂಪದಲ್ಲಿದ್ದು ಜೀವರಿಗೆ ||
ನಿತ್ಯದಲ್ಲಿ ಹಗಲಿರುಳು ಬಪ್ಪ ಪ
ಮೃತ್ಯುವಿಗೆ ತಾ ಮೃತ್ಯುವೆನಿಸುವ
ಭೃತ್ಯವತ್ಸಲ ಭಯವಿನಾಶನ ಭಾಗ್ಯ ಸಂಪನ್ನ || ೧೫ ||

ಜ್ವರನೊಳಿಪ್ಪತ್ತೇಳು ಹರನೊಳ
ಗಿರುವ ಇಪ್ಪತ್ತೆಂಟು ರೂಪದಿ
ಎರಡು ಸಾವಿರದೆಂಟನೂರಿಪ್ಪತ್ತರೇಳೆನಿಪ ||
ಜ್ವರಹರಾ ಹ್ವಯ ನಾರಸಿಂಹನ
ಸ್ಮರಣೆ ಮಾತ್ರದಿ ದುರಿತ ರಾಶಿ ಗ -
ಳಿರದೆ ಪೋಪವು ತರಣಿ ಬಿಂಬವ ಕಂಡ ಹಿಮದಂತೆ || ೧೬ ||

ಮಾಸ ಪರಿಯಂತರವು ಬಿಡದೆ ನೃ
ಕೇಸರಿಯ ಶುಭನಾಮ ಮಂತ್ರ ಜಿ
ತಾನಸುದಲೇಕಾಗ್ರ ಚಿತ್ತದಿ ನಿಷ್ಕಪಟದಿಂದ ||
ಬೇಸರದೆ ಜಪಿಸಲು ವೃಜಿನಗಳ
ನಾಶಗೈಸಿ ಮನೋರಥಗಳ ಪ -
ರೇಶ ಪೂರ್ತಿಯಮಾಡಿ ಕೊಡುವನು ಕಡೆಗೆ ಪರಗತಿಯ || ೧೭ ||

ಚತುರ ಮೂರ್ತ್ಯಾತ್ಮಕ ಹರಿಯು ತ್ರಿಂ -
ಶತಿ ಸುರೂಪದಿ ಬ್ರಹ್ಮನೊಳು ಮಾ -
ರುತನೊಳಿಪ್ಪತ್ತೇಳು ರೂಪದೊಳಿಪ್ಪ ಪ್ರದ್ಯುಮ್ನ ||
ಸುತರೊಳಿಪ್ಪತ್ತೈದು ಹದಿನೆಂ -
ಟತುಳರೂಪಗಳರಿತು ವತ್ಸರ
ಶತಗಳಲಿ ಪೂಜಿಸುತಲಿರು ಚತುರಾತ್ಮಕನ ಪದವಾ || ೧೮ ||

ನೂರು ವರ್ಷಕೆ ದಿವಸ ಮೂವ
ತ್ತಾರು ಸಾವಿರ ಪಹವು ನಾಡಿಶ
ರೀರ ದೊಳಗಿನಿತಿಹವು ಸ್ತ್ರೀ ಪುಂಭೇದದಲಿ ಹರಿಯ ||

ಈರಧಿಕ ಎಪ್ಪತ್ತು ಸಾವಿರ
ಮೂರುತಿಗಳ ನೆನೆದು ಸರ್ವಾ -
ಧಾರಕನ ಸರ್ವತ್ರ ಪೂಜಿಸು ಪೂರ್ಣನೆಂದರಿತು || ೧೯ ||

ಕಾಲ ಕರ್ಮಗುಣ ಸ್ವಭಾವಗ
ಳಾಲಯನು ತಾನಾಗಿ ಲಕುಮೀ
ಲೋಲ ತತ್ತದ್ರೂಪ ನಾಮದಿ ಕರೆಸುತೊಳಗಿದ್ದು ||
ಲೀಲೆಯಿಂದಲಿ ಸರ್ವ ಜೀವರ
ಪಾಲಿಸುವ ಸಂಹರಿಸಿ ಸೃಷ್ಟಿಪ
ಮೂಲಕಾರಣ ಪ್ರಕೃತಿಗುಣ ಕಾರ್ಯಗಳ ಮನೆಮಾಡಿ || ೨೦ ||

ತಿಲಜವರ್ತಿಗಳನುಸರಿಸಿ ಪ್ರ
ಜ್ವಲಿಸಿ ದೀಪಗಳಾಲಯದ ಕ -
ತ್ತಲೆಯ ಭಂಗಿಸಿ ತದ್ಗತಾರ್ಥವ ತೋರುವಂದದಲಿ ||
ಜಲರುಹೇಕ್ಷಣ ತನ್ನವರ ಮನ
ದೊಳಗೆ ಭಕ್ತಿಜ್ಞಾನ ಕರ್ಮಕೆ
ಒಲಿದು ಪೊಳೆವುತ ತೋರುವನು ಗುಣರೂಪಕ್ರಿಯೆಗಳ || ೨೧ ||

ಆವದೇಹವ ಕೊಡಲಿ ಹರಿ ಮ -
ತ್ತಾವ ಲೋಕದೊಳಿಡಲಿ ತಾ ಮ -
ತ್ತಾವ ದೇಶದೊಳಿಡಲಿ ಆವಾವಸ್ಥೆಗಳು ಬರಲಿ
ಈ ವಿಧದಿ ಜಡ ಚೇತನದೊಳು ಪ -
ರಾವರೇಶನ ರೂಪಗುಣಗಳ
ಭಾವಿಸುತ ಸುಜ್ಞಾನ ಭಕುತಿಯ ಬೇಡು ಕೊಂಡಾಡು || ೨೨ ||

ಒಂದರೊಳಗೊಂದೊಂದು ಬೆರದಿಹ -
ದಿಂದಿರೇಶನ ರೂಪಗಳ ಮನ
ಬಂದ ತೆರದಲಿ ಚಿಂತಿಸಿದಕನುಮಾನವಿನಿತಿಲ್ಲ ||
ಸಿಂಧುರಾಜನೊಳಂಬರಾಲಯ
ಬಂಧಿಸಲು ಪ್ರತಿ ತಂತುಗಳೊಳುದ -
ಬಿಂದು ವ್ಯಾಪಿಸಿದಂತೆ ಇರುತಿಪ್ಪನು ಚರಾಚರದಿ || ೨೩ ||

ಒಂದು ರೂಪದೊಳೊಂದವಯವ ದೊ
ಳೊಂದು ರೋಮದೊಳೊಂದು ದೇಶದಿ
ಪೊಂದಿಯಿಪ್ಪವಜಾಂಡನಂತಾನಂತ ಕೋಟಿಗಳು ||
ಹಿಂದೆ ಮಾರ್ಕಂಡೇಯ ಕಾಣನೆ
ಒಂದು ರೂಪದಿ ಸೃಷ್ಟಿ ಪ್ರಳಯವ
ಇಂದಿರೇಶನೊಳೇನಿದಚ್ಚರಿ ಅಪ್ರಮೇಯಸದಾ || ೨೪ ||

ಒಂದನಂತಾನಂತ ರೂಪಗ -
ಳೊಂದು ರೂಪದಿ ಇಹವು ಲೋಕಗ -
ಳೊಂದೆ ರೂಪದಿ ಸೃಷ್ಟಿಸ್ಥಿತಿ ಮೊದಲಾದ ವ್ಯಾಪಾರ ||
ಒಂದೆ ಕಾಲದಿ ಮಾಡಿ ತಿಳಿಸದೆ
ಸಂದಣಿಸಿಕೊಂಡಿಪ್ಪ ಜಗದೊಳು
ನಂದನಂದನ ರಣದೊಳಿಂದ್ರಾತ್ಮಜಗೆ ತೋರಿಸನೆ || ೨೫ ||

ಶ್ರೀ ರಮೇಶನ ಮೂರ್ತಿಗಳು ನವ
ನಾರಿ ಕುಂಜರದಂತೆ ಏಕಾ -
ಕಾರ ತೋರ್ಪವು ಅವಯವಾಹ್ವಯ ಅವಯವಗಳಲಿ ||
ಬೇರೆ ಬೇರೆ ಕಂಗೊಳಿಸುವ ಶ -
ರೀರದೊಳು ನಾನಾ ಪ್ರಕಾರ ವಿ -
ಕಾರ ಶೂನ್ಯ ವಿರಾಟನೆನಿಸುವ ಪದುಮಜಾಂಡದೊಳು || ೨೬ ||

ವಾರಿಜಭವಾಂಡದೊಳು ಲಕುಮೀ
ನಾರಸಿಂಹನ ರೂಪಗುಣಗಳು
ವಾರಿಧಿಯೊಳಿಹ ತೆರೆಗಳಂದದಿ ಸಂದಣಿಸಿ ಇಹವು ||
ಕಾರಣಾಂಶಾವೇಶ ವ್ಯಾಪ್ತವ -
ತಾರಕಾರ್ಯ ವ್ಯಕ್ತ ವ್ಯಕ್ತವು
ಆರು ನಾಲ್ಕು ವಿಭೂತಿಯಂತರ್ಯಾಮಿ ರೂಪಗಳು || ೨೭ ||

ಮಣಿಗಳೊಳಗಿನ ಸೂತ್ರದಂದದಿ
ಪ್ರಣವ ಪಾದ್ಯನು ಚೇತನಾಚೇ -
ತನ ಜಗತ್ತಿನೊಳನುದಿನದೊಳಾಡುವನು ಸುಖ ಪೂರ್ಣ ||

ದಣುವಿಕೆಯು ಇವಗಿಲ್ಲ ಬಹು ಕಾ -
ರ್ಣಿಕನಂತಾನಂತ ಜೀವರ
ಗಣದೊಳೇಕಾಂಶಾಂಶ ರೂಪದಿ ನಿಂತು ನೇಮಿಸುವ || ೨೮ ||

ಜೀವಜೀವರ ಭೇದ ಜಡ ಜಡ
ಜೀವ ಜಡ ಜಡ ಜೀವರಿಂದಲಿ
ಶ್ರೀವರನು ಅತ್ಯಂತ ಭಿನ್ನ ವಿಲಕ್ಷಣನು ಲಕ್ಷ್ಮೀ ||
ಮೂವರಿಂದಲಿ ಪದುಮಜಾಂಡದಿ
ತಾ ವಿಲಕ್ಷಣಗಳೆನಿಸುತಿಪ್ಪಳು
ಸಾವಧಿಕಸಮಸೂನ್ಯಳೆಂದರಿತೀರ್ವರನು ಭಜಿಸು || ೨೯ ||

ಆದಿತೇಯರು ತಿಳಿಯದಿಹ ಗುಣ
ವೇದ ಮಾನಿಗಳೆಂದನಿಪ ವಾ
ಣ್ಯಾದಿಗಳು ಬಲ್ಲವರರಿಯದ ಗುಣಗಣಂಗಳನು ||
ವೇಧ ಬಲ್ಲನು ಬೊಮ್ಮನರಿಯದ -
ಗಾಧಗುಣಗಳು ಲಕುಮಿ ಬಲ್ಲಳು
ಶ್ರೀಧರೊಬ್ಬನುಪಾಸ್ಯ ಸದ್ಗುಣ ಪೂರ್ಣ ಹರಿಯೆಂದು || ೩೦ ||

ಇಂತನಂತಾನಂತ ಗುಣಗಳ
ಪ್ರಾಂತಗಾಣದೆ ಮಹಲಕುಮಿ ಭಗ -
ವಂತಗಾಭರಣಾಯುಧಾಂಬರ ವಾಲಯಗಳಾಗಿ ||
ಸ್ವಾಂತದಲಿ ನೆಲೆಗೊಳಿಸಿ ಪರಮ ದು -
ರಂತ ಮಹಿಮನ ದೌತ್ಯ ಕರ್ಮ ನಿ -
ರಂತರದಿ ಮಾಡುತಲಿ ತದಧೀನತ್ವ ಯೈದಿಹಳು || ೩೧ ||

ಪ್ರಳಯ ಜಲಧಿಯೊಳುಳ್ಳ ನಾವೆಯು
ಹೊಲಬು ಕಾಣದೆ ಸುತ್ತುವಂದದಿ
ಜಲರುಹೇಕ್ಷಣನಮಲ ಗುಣ ರೂಪಗಳ ಚಿಂತಿಸುತ ||
ನೆಲೆಯಗಾಣದೆ ಮಹಾಲಕುಮಿ ಚಂ -
ಚಲವನೈದಿಹಳಲ್ಪ ಜೀವರಿ
ಗಳವಡುವದೇನಿವನ ಮಹಿಮೆಗಳೀ ಜಗತ್ರಯದಿ || ೩೨ ||

ಶ್ರೀನಿಕೇತನ ಸಾತ್ವತಾಂಪತಿ
ಜ್ಞಾನಗಮ್ಯ ಗಯಾಸುರಾರ್ದನ
ಮೌನಿಕುಲ ಸನ್ಮಾನ್ಯ ಮಾನದ ಮಾತುಳಧ್ವಂಸೀ ||
ದೀನ ಜನ ಮಂದಾರ ಮಧುರಿಪು
ಪ್ರಾಣದ ಜಗನ್ನಾಥ ವಿಠ್ಠಲ
ತಾನೆ ಗತಿಯೆಂದನುದಿನದಿ ನಂಬಿದವರನು ಪೊರೆವ || ೩೩ ||

# ೮ ಮಾತೃಕಾ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವುದು ||

ಪಾದಮಾನಿ ಜಯಂತನೊಳಗೆ ಸು -
ಮೇಧನಾಮಕನಿಪ್ಪ ದಕ್ಷಿಣ
ಪಾದದುಂಗುಟದಲ್ಲಿ ಪವನನು ಭಾರಭೃದ್ರೂಪ ||
ಕಾದುಕೊಂಡಿಹ ಟಂಕಿ ತರ ಮೊದ
ಲಾದ ನಾಮದಿ ಸಂಧಿಗಳಲೀ -
ರೈದು ರೂಪದಲಿದ್ದು ಸಂತತ ನಡೆದು ನಡಿಸುತಲೀ || ೧ ||

ಕಪಿಲ ಚಾರ್ವಾಂಗಾದಿ ರೂಪದಿ
ವಪುಗಳೊಳು ಹಸ್ತಗಳ ಸಂದಿಯೊ -
ಳಪರಿಮಿತ ಕರ್ಮಗಳ ಮಾಡುತಲಿಪ್ಪ ದಿನದಿನದಿ ||
ಕೃಪಣವತ್ಸಲ ಪಾರ್ಶ್ವದೊಳು ಪರ
ಸುಫಲಿಯೆನಿಸುವ ಗುದ ಉಪಸ್ಥದಿ
ವಿಪುಳ ಬಲಿ ಭಗ ಮನುವೆನಿಸಿ ತುಂದಿಯೊಳಗಿರುತಿಹನು || ೨ ||

ಐದು ಮೇಲೊಂದಧಿಕ ದಳವು -
ಳ್ಳೈದು ಪದ್ಮವು ನಾಭಿ ಮೂಲದಿ
ಐದು ಮೂರ್ತಿಗಳಿಹವು ಅನಿರುದ್ಧಾದಿ ನಾಮದಲಿ ||

ಐದಿಸುತ ಗರ್ಭವನು ಜೀವರ -
ನಾದಿ ಕರ್ಮ ಪ್ರಕೃತಿ ಗುಣಗಳ
ಹಾದಿ ತಪ್ಪಲಿಗೊಡದೆ ವ್ಯಾಪಾರ ಮಾಡುತಿಹ || ೩ ||

ನಾಭಿಯಲ್ಲಿ ಷಟ್ಕೋಣ ಮಂಡಲ -
ದೀ ಭವಿಷ್ಯದ್ಬ್ರಹ್ಮನೊಳು ಮು -
ಕ್ತಾಭ ಶ್ರೀ ಪ್ರದ್ಯುಮ್ನ ನಿಪ್ಪನು ವಿಬುಧಗಣಸೇವ್ಯ ||
ಶೋಭಿಸುತ ಕೌಸ್ತುಭವೆ ಮೊದಲಾ
ದಾಭರಣವಾಯುಧಗಳಿಂದ ಮ -
ಹಾ ಭಯಂಕರ ಪಾಪ ಪುರುಷನ ಶೋಷಿಸುತ ನಿತ್ಯ || ೪ ||

ದ್ವಾದಶಾರ್ಕರ ಮಂಡಲವು ಮ
ಧ್ಯೋದರದೊಳು ಸುಷುಮ್ನದೊಳಗಿಹು -
ದ್ವೈದು ರೂಪಾತ್ಮಕನು ಅರವತ್ತಧಿಕ ಮೂನ್ನೂರು ||
ಈ ದಿವಾರಾತ್ರಿಗಳ ಮಾನಿಗ -
ಳಾದ ದಿವಿಜರ ಸಂತಯಿಸುತ ನಿ -
ಷಾದರೂಪಕ ದೈತ್ಯರನು ಸಂಹರಿಪ ನಿತ್ಯದಲಿ || ೫ ||

ಹೃದಯದೊಳಗಿಹ ಅಷ್ಟದಳ ಕಮ -
ಲದರೊಳಗೆ ಪ್ರಾದೇಶ ನಾಮಕ
ಉದಿತ ಭಾಸ್ಕರನಂತೆ ತೋರ್ಪನು ಬಿಂಬನೆಂದೆನಿಸಿ ||
ಪದುಮ ಚಕ್ರ ಸುಶಂಖ ಸುಗದಾಂ
ಗದ ಕಟಕ ಮುಕುಟಾಂಗುಲೀಯಕ
ಪದಕ ಕೌಸ್ತುಭ ಹಾರ ಗ್ರೈವೇಯಾದಿ ಭೂಷಿತನು || ೬ ||

ದ್ವಿದಳ ಪದ್ಮವು ಶೋಭಿಪುದು ಕಂ -
ಠದಲಿ ಮುಖ್ಯಪ್ರಾಣ ತನ್ನಯ
ಸುದತಿಯಿಂದೊಡಗೂಡಿ ಹಂಸೋಪಾಸನೆಯ ಮಾಳ್ಪ ||
ಉದಕವನ್ನಾದಿಗಳಿಗವಕಾ
ಶದನು ತಾನಾಗಿದ್ದುದಾನಾ
ಭಿದನು ನುಡಿದು ನುಡಿಸುವ ಸರ್ವಜೀವರೊಳು || ೭ ||

ನಾಸಿಕದಿ ನಾಸತ್ಯದಸ್ರರು
ಶ್ವಾಸಮಾನಿ ಪ್ರಾಣ ಭಾರತಿ
ಹಂಸ ಧನ್ವಂತರಿಗಳಲ್ಲಲ್ಲಿಪ್ಪರವರೊಳಗೆ ||
ಭೇಶ ಭಾಸ್ಕರರಕ್ಷಿಯುಗಳಕ -
ಧೀಶರೆನಿಪರು ಅವರೊಳಗೆ ಲ
ಕ್ಷ್ಮೀಶ ದಧಿವಾಮನರು ನಿಯಾಮಿಸುತ ಇರುತಿಹರು || ೮ ||

ಸ್ತಂಭರೂಪದಲಿಪ್ಪ ದಕ್ಷಿಣ -
ದಂಬಕದಿ ಪ್ರದ್ಯುಮ್ನ ಗುಣರೂ -
ಪಾಂಭ್ರಣಿಯು ತಾನಾಗಿ ಇಪ್ಪಳು ವತ್ಸರೂಪದಲಿ ||
ಪೊಂಬಸರ ಪದಯೋಗ್ಯ ಪವನ ತ್ರಿ
ಯಂಬಕಾದಿ ಸಮಸ್ತ ದಿವಿಜ ಕ
ದಂಬ ಸೇವಿತರಾಗಿ ಸರ್ವ ಪದಾರ್ಥಗಳ ತೋರ್ಪ || ೯ ||

ನೇತ್ರಗಳಲ್ಲಿ ವಸಿಷ್ಠ ವಿಶ್ವಾ
ಮಿತ್ರ ಭಾರದ್ವಾಜ ಗೌತಮ
ಅತ್ರಿಯಾ ಜಮದಗ್ನಿ ನಾಮಗಳಿಂದ ಕರೆಸುತಲೀ ||
ಪತ್ರತಾಪಕ ಶಕ್ರ ಸೂರ್ಯ ಧ -
ರಿತ್ರಿ ಪರ್ಜನ್ಯಾದಿ ಸುರರು ಜ -
ಗತ್ರಯೇಶನ ಭಜಿಪರನುದಿನ ಪರಮ ಭಕುತಿಯಲಿ || ೧೦ ||

ಜ್ಯೋತಿಯೊಳಗಿಪ್ಪನು ಕಪಿಲ ಪುರು
ಹೂತ ಮುಖ ದಿಕ್ಪತಿಗಳಿಂದ ಸ -
ಮೇತನಾಗಿಹ ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ ||
ಶ್ವೇತವರ್ಣ ಚತುರ್ಭುಜನು ಸಂ
ಪ್ರೀತಿಯಿಂದಲಿ ಸ್ಥೂಲ ವಿಷಯವ
ಚೇತನರಿಗುಂಡುಣಿಪ ಜಾಗ್ರತಿ ಇತ್ತು ನೃಗಜಾಸ್ಯ || ೧೧ ||

ನೆಲಸಿಪರು ದಿಗ್ದೇವತೆಗಳಿ -
ಕ್ಕೆಲದಿ ಕರ್ಣಂಗಳಲಿ ತೀರ್ಥಂ
ಗಳಿಗೆ ಮಾನಿಗಳಾದ ಸುರನದಿಮುಖ್ಯನಿರ್ಜರರು ||

ಬಲದ ಕಿವಿಯಲ್ಲಿರುತಿಹರು ಬಾಂ
ಬೊಳೆಯ ಜನಕ ತಿವಿಕ್ರಮನು ನಿ -
ರ್ಮಲರನು ಮಾಡುವನೀಪರಿ ಚಿಂತಿಸುವ ಜನರ || ೧೨ ||

ಚಿತ್ತಜೇಂದ್ರರು ಮನದೊಳಿಪ್ಪರು
ಕೃತ್ತಿವಾಸನು ಅಹಂಕಾರದಿ
ಚಿತ್ತ ಚೇತನ ಮಾನಿಗಳು ವಿಹಗೇಂದ್ರ ಫಣಿಪರೊಳು ||
ನಿತ್ಯದಲಿ ನೆಲೆಗೊಂಡು ಹತ್ತೊಂ
ಭತ್ತು ಮೊಗ ತೈಜಸನು ಸ್ವಪ್ನಾ
ವಸ್ಥೆಯೈದಿಸಿ ಜೀವರನ ಪ್ರವಿವಿಕ್ತ ಭುಕುವೆನಿಪ || ೧೩ ||

ಜ್ಞಾನಮಯ ತೈಜಸನು ಹೃದಯ
ಸ್ಥಾನ ಯೈದಿಸಿ ಪ್ರಾಜ್ಞನೆಂಬಭಿ
ಧಾನದಿಂ ಕರೆಸುತ್ತ ಚಿತ್ ಸುಖ ವ್ಯಕ್ತಿಯನೆ ಕೊಡುತ ||
ಅನತೇಷ್ಟಪ್ರದನು ಅನು
ಸಂಧಾನವೀಯದೆ ಸುಪ್ತಿಯೈದಿಸಿ
ತಾನೆ ಪುನರಪಿ ಸ್ವಪ್ನ ಜಾಗ್ರತಿ ಈವ ಚೇತನಕೆ || ೧೪ ||

ನಾಲಿಗೆಯೊಳಿಹ ವರುಣ ಮತ್ಸ್ಯನು
ನಾಲಿಗೆಯೊಳುಪೇಂದ್ರ ಇಂದ್ರನು
ತಾಳು ಪರ್ಜನ್ಯಾಖ್ಯ ಸೂರ್ಯನು ಅರ್ಧ ಗರ್ಭನಿಹ ||
ಆಲಿಯೊಳು ವಾಮನ ಸುಭಾಮನ
ಫಾಲದೊಳು ಶಿವ ಕೇಶವನು ಸುಕ -
ಪೋಲದೊಳಗೆ ರತೀಶ ಕಾಮನು ಅಲ್ಲೆ ಪ್ರದ್ಯುಮ್ನ || ೧೫ ||

ರೋಮಗಳಲಿ ವಸಂತ ತ್ರಿಕಕು -
ಧಾಮ ಮುಖದೊಳಗಗ್ನಿ ಭಾರ್ಗವ
ತಾಮರಸಭವ ವಾಸುದೇವರು ಮಸ್ತಕದೊಳಿಹರು ||
ಈ ಮನದೊಳಿಹ ವಿಷ್ಣು ಶಿಖಿದೊಳು -
ಮಾ ಮಹೇಶ್ವರ ನಾರಸಿಂಹ
ಸ್ವಾಮಿ ತನ್ನನುದಿನ ದಿನ ನೆನೆವರಪಮೃತ್ಯು ಪರಿಹರಿಪ || ೧೬ ||

ಮೌಳಿಯಲ್ಲಿಹ ವಾಸುದೇವನು
ಏಳಧಿಕ ನವಜಾದಿ ರೂಪವ
ತಾಳಿ ಮುಖದೊಳು ನಯನ ಶ್ರವಣಾದ್ಯವಯವಗಳಲ್ಲಿ ||
ಆಳರಸು ತಾನಾಗಿ ಸತತ ಸು -
ಲೀಲೆ ಗೈಯುತಲಿಪ್ಪ ಸುಖಮಯ
ಕೇಳಿ ಕೇಳಿಸಿ ನೋಡಿ ನೋಡಿಸಿ ನುಡಿದು ನುಡಿಸುವವನು || ೧೭ |

ಎರಡಧಿಕ ಎಪ್ಪತ್ತೆನಿಪ ಸಾ
ವಿರದ ನಾಡಿಗೆ ಮುಖ್ಯ ಏಕೋ
ತ್ತರ ಶತಗಳಲ್ಲಿಹವು ನೂರಾ ಒಂದು ಮೂರ್ತಿಗಳು ||
ಅರಿತು ದೇಹದಿ ಕಲಶನಾಮಕ'
ಹರಿಗೆ ಕಳೆಗಳಿವೆಂದು ನಿರಂ -
ತರದಿ ಪೂಜಿಸುತಿಹರು ಪರಮಾದರದಿ ಭೂಸುರರು || ೧೮ ||

ಇದಕೆ ಕಾರಣ ವೆನಿಸುವವು ಎರ
ಡಧಿಕ ದಶನಾಡಿಗಳೊಳಗೆ ಸುರ
ನದಿಯು ಮೊದಲಾದಮಲತೀರ್ಥಗಳಿಹವು ಕರಣದಲಿ ||
ಪದುಮನಾಭನು ಕೇಶವಾದಿ
ದ್ವಿದಶ ರೂಪದಲಿಪ್ಪ ನಲ್ಲತಿ -
ಮೃದುಳವಾದ ಸುಷುಮ್ನದೊಳಗೇಕಾತ್ಮನೆನಿಸುವನು || ೧೯ ||

ಆಮ್ನಯ ಪ್ರತಿಪಾದ್ಯ ಶ್ರೀ ಪ್ರ -
ದ್ಯುಮ್ನ ದೇವನು ದೇಹದೊಳಗೆ ಸು -
ಷುಮ್ನ ಇಡಾ ಪಿಂಗಳದಿ ಶ್ರೀ ವಿಶ್ವಾದಿ ರೂಪದಲಿ ||
ನಿರ್ಮಲಾತ್ಮನು ವಾಣಿ ವಾಯು ಚ
ತುರ್ಮುಖ ರೊಳಗಿದ್ದಖಿಲಜೀವರ
ಕರ್ಮಗುಣವನನುಸರಿಸಿ ನಡೆವನು ವಿಶ್ವವ್ಯಾಪಕನು || ೨೦ ||

ಅಬ್ದಯನ ಋತು ಮಾಸ ಪಕ್ಷ ಸು -
ಶಬ್ದದಿಂದಲಿ ಕರೆಸುತಲಿ ನೀ -
ಲಾಬ್ಧವರ್ಣಾನಿರುದ್ಧ ಮೊದಲಾದ್ಯೆದು ರೂಪದಲಿ ||

ಹಬ್ಬಿಹನು ಸರ್ವತ್ರದಲಿ ಕರು
ಣಾಬ್ಧಿ ನಾಲ್ವತ್ತೈದು ರೂಪದಿ
ಲಭ್ಯನಾಗುವನೀಪರಿಯು ಧೇನಿಸುವ ಭಕುತರಿಗೆ || ೨೧ ||

ಐದು ರೂಪಾತ್ಮಕನು ಇಪ್ಪ -
ತ್ತೈದು ರೂಪದಲಿಪ್ಪ ಮತ್ತ್ಯೆದಿ -
ನ್ನೈದು ತಿಥಿ ಇಪ್ಪತ್ತು ನಾಲ್ಕರಿಂದ ಪೆಚ್ಚಿಸಲು ||
ಐದುವದು ಅರವತ್ತಧಿಕ ಮುನ್ನೂ
ರಾದ ದಿವಸಾಖ್ಯಯನೊಳಗೆ ಮನ
ತೊಯ್ದುವಗೆ ತಾಪತ್ರಯ ಮಹದೋಷವೆಲ್ಲಿಹವೋ || ೨೨ ||

ದಿವಸ ಯಾಮ ಮುಹೂರ್ತ ಘಟಿಕಾ
ದ್ಯವಯವಗಳೊಳಿದ್ದು ಗಂಗಾ
ಪ್ರವಹದಂದದಿ ಕಾಲನಾಮಕ ಪ್ರವಹಿಸುತಲಿಪ್ಪ ||
ಇವನ ಗುಣ ರೂಪಕ್ರಿಯಂಗಳ
ನಿವಹದೊಳು ಮುಳಿಗ್ಯಾಡುತಲಿ ಭಾ
ರ್ಗವಿ ಸದಾನಂದಾತ್ಮಳಾಗಿಹಳೆಲ್ಲ ಕಾಲದಲಿ || ೨೩ ||

ವೇದತತಿಗಳ ಮಾನಿ ಲಕ್ಷ್ಮೀ ಧ -
ರಾಧರನ ಗುಣ ರೂಪ ಕ್ರಿಯ ಗ
ಳಾದಿ ಮಧ್ಯಾಂತವನು ಕಾಣದೆ ಮನದಿ ಯೋಚಿಸುತ ||
ಆದಪನೆ ಈತನಿಗೆ ಪತ್ನಿ ಕೃ -
ಪೋದಧಿಯ ಸ್ವೀಕರಿಸಿದನು ಲೋ
ಕಾಧಿಪನು ಭಿಕ್ಷುಕನ ಮನೆ ಔತನವ ಕೊಂಬಂತೆ || ೨೪ ||

ಕೋವಿದರು ಚಿತ್ತೈಸುವದು ಶ್ರೀ
ದೇವಿಯೊಳಗಿಹ ನಿಖಿಳ ಗುಣ ತೃಣ
ಜೀವರಲಿ ಕಲ್ಪಿಸಿ ಯುಕುತಿಯಲಿ ಮತ್ತು ಕ್ರಮದಿಂದ ||
ದೇವಿ ದೇವಿಯು ಇಪ್ಪಳೆಂದರಿ
ದಾ ವಿರಂಚಿಯ ಜನನಿ ಈತನ
ಯಾವ ಕಾಲದಲರಿಯಳಂತೆನೆ ನರರ ಪಾಡೇನು || ೨೫ ||

ಕ್ಷೀರ ದಧಿ ನವನೀತ ಘೃತದೊಳು
ಸೌರಭರಸಾಹ್ವಯನೆನಿಸಿ ಶಾಂ -
ತೀರಮಣ ಜ್ಞಾನ ಕ್ರಿಯೇಚ್ಛಾ ಶಕ್ತಿಯೆಂದೆಂಬ ||
ಈರೆರಡು ನಾಮದಲಿ ಕರೆಸುವ
ಭಾರತೀ ವಾಗ್ದೇವಿ ವಾಯು ಸ
ರೋರುಹಾಸನರಲ್ಲಿ ನೆಲಸಿಹನೆಲ್ಲ ಕಾಲದಲಿ || ೨೬ ||

ವಸುಗಳೆಂಟು ನವ ಪ್ರಜೇಶರು
ಶ್ವಸನಗಣರೈವತ್ತು ಏಕಾ
ದಶ ದಿವಾಕರರನಿತು ರುದ್ರರು ಅಶ್ವಿನಿಗಳೆರಡು ||
ದಶವಿಹೀನ ಶತಾಖ್ಯ ಈ ಸುಮ -
ನಸರೊಳಗೆ ಚತುರಾತ್ಮನಿಯಾ
ಮಿಸುವ ಬ್ರಹ್ಮ ಸಮೀರ ಖಗಪ ಫಣೀಂದ್ರರೊಳಗಿದ್ದು || ೨೭ ||

ತೋರುತಿಪ್ಪನು ಚಕ್ರದಲಿ ಹಿಂ -
ಕಾರನಾಮಕ ಶಂಖದಲಿ ಪ್ರತಿ
ಹಾರ ಗದೆಯಲಿ ನಿಧನ ಪದ್ಮದಲಿಪ್ಪ ಪ್ರಸ್ತಾವ ||
ಕರುಣಿಕನುದ್ಗೀಥ ನಾಮದಿ
ಮಾರಮಣನೈರೂಪಗಳ ಶಂ -
ಖಾದಿ ಮೊದಲಾದಾಯುಧಗಳೊಳು ಸ್ಮರಿಸಿ ಧರಿಸುತಿರು || ೨೮ ||

ತನುವೆ ರಥ ವಾಗಾಬಿ ಮಾನಿಯೆ
ಗುಣವೆನಿಸುವಳು ಶ್ರೋತ್ರದೊಳು ರೋ -
ಹಿಣಿ ಶಶಾಂಕರು ಪಾಶಪಾಣಿಗಳಶ್ವವೆಂದೆನಿಸಿ ||
ಇವರು ಸಂಜ್ಞಾದೇವಿಯರು ಇಹ
ರನಲ ಲೋಚನ ಸೂತನೆನಿಸುವ
ಪ್ರಣವಪಾದ್ಯ ಪ್ರಾಣನಾಮಕ ರಥಿಕನೆನಿಸುವನು || ೨೯ ||

ಅಮಿತ ಮಹಿಮನಪಾರಗುಣಗಳ
ಸಮಿತ ವರ್ಣಾತ್ಮಕ ಶ್ರುತಿ ಸ್ಮೃತಿ
ಗಮಿಸಲಾಪವೆ ತದಭಿಮಾನಿಗಳೆಂದೆನಿಸಿ ಕೊಂಬ ||

ಕಮಲಸಂಭವ ಭವ ಸುರೇಂದ್ರಾ
ದ್ಯಮರರನುದಿನ ತಿಳಿಯಲರಿಯರು
ಸ್ವಮಹಿಮೆಗಳಾದ್ಯಂತ ಮಧ್ಯಗಳರಿವ ಸರ್ವಜ್ಞ|| ೩೦ ||

ವಿತ್ತದೇಹಾಗಾರ ದಾರಾ -
ಪತ್ಯ ಮಿತ್ರಾದಿಗಳೊಳಗೆ ಹರಿ
ಪ್ರತ್ಯಗಾತ್ಮನು ಎಂದೆನಿಸಿ ನೆಲಸಿಪ್ಪನೆಂದರಿದು ||
ನಿತ್ಯದಲಿ ಸಂತೃಪ್ತಿ ಬಡಿಸುತ್ತ
ಉತ್ತಮಾಧಮ ಮಧ್ಯಮರ ಕೃತ
ಕೃತ್ಯನಾಗುನ್ಮತ್ತನಾಗದೆ ಭೃತ್ಯನಾನೆಂದು || ೩೧ ||

ದೇವ ದೇವೇಶನ ಸುಮೂರ್ತಿ ಕ -
ಳೇವರಗಳೊಳಗನವರತ ಸಂ -
ಭಾವಿಸುತ ಪೂಜಿಸುತ ನೋಡುತ ಸುಖಿಸುತಿರು ಬಿಡದೆ ||
ಶ್ರೀವರ ಜಗನ್ನಾಥವಿಠ್ಠಲನು
ತಾ ಒಲಿದು ಕಾರುಣ್ಯದಲಿ ಭವ
ನೋವು ಪರಿಹರಿಸುವನು ಪ್ರವಿತತ ಪತಿತಪಾವನನು || ೩೨ ||

# ೬ ಜೀವಪ್ರಕರಣ ಸಂಧಿ
## (ಉದಾತ್ತಾನುದಾತ್ತ ಸಂಧಿ )

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಹರಿಯ ಪಂಚಾಶದ್ವರಣ ಸು -
ಸ್ವರ ಉದಾತ್ತಾನುದಾತ್ತ ಪ್ರಚಯ
ಸ್ವರಿತ ಸಂಧಿ ವಿಸರ್ಗ ಬಿಂದುಗಳೊಳಗೆ ತದ್ವಾಚ್ಯ ||
ಇರುವ ತತ್ತನ್ನಾಮ ರೂಪಗ -
ಳರಿತುಪಾಸನೆ ಗೈವರಿಳೆಯೊಳು
ಸುರರೆ ಸರಿ ನರರಲ್ಲವರಾದುವದೆ ವೇದಾರ್ಥ || ೧ ||

ಈಶನಲಿ ವಿಜ್ಞಾನ ಭಗವ -
ದ್ದಾಸರಲಿ ಸದ್ಭಕ್ತಿ ವಿಷಯ ನಿ -
ರಾಶೆ ಮಿಥ್ಯಾವಾದಿಯಲಿ ಪ್ರದ್ವೇಷ ನಿತ್ಯದಲಿ ||
ಈ ಸಮಸ್ತ ಪ್ರಾಣಿಗಳಲಿ ರ -
ಮೇಶನಿಹನೆಂದರಿದವರಭಿ -
ಲಾಷೆ ಪೂರೈಸುವುದೆ ಮಹಯಜ್ಞ ಹರಿಪೂಜೆ || ೨ ||

ತ್ರಿದಶ ಏಕಾತ್ಮನೆನಿಸಿ ಭೂ
ಉದಕ ಶಿಖಿಯೊಳು ಹತ್ತು ಕರಣಾದಿ
ಅಧಿಪರೆನಿಸುವ ಪ್ರಾಣ ಮುಖ್ಯಾದಿತ್ಯರೊಳು ನೆಲಸಿ ||
ವಿದಿತನಾಗಿದ್ದನವರತ ನಿರ
ವಧಿಕ ಮಹಿಮನು ಸಕಲ ವಿಷಯವ
ನಿಧನ ನಾಮಕ ಸಂಕರುಷಣಾಹ್ವಯನು ಸ್ವೀಕರಿಪ || ೩ ||

ದಹಿಕ ದೈಶಿಕ ಕಾಲಿಕತ್ರಯ
ಗಹನ ಕರ್ಮಗಳುಂಟು ಇದರೊಳು
ವಿಹಿತ ಕರ್ಮಗಳರಿತು ನಿಷ್ಕಾಮಕನು ನೀನಾಗಿ ||
ಬೃಹತಿ ನಾಮಕ ಭಾರತೀಶನ
ಮಹಿತ ರೂಪವ ನೆನೆದು ಮನದಲ್ಯಹ
ರಹರ್ಭಗವಂತಗರ್ಪಿಸು ಪರಮ ಭಕುತಿಯಲಿ || ೪ ||

ಮೂರು ವಿಧ ಕರ್ಮಗಳೊಳಗೆ ಕಂ -
ಸಾರಿ ಭಾರ್ಗವ ಹಯವದನ ಸಂ -
ಪ್ರೇರಕನು ತಾನಾಗಿ ನವರೂಪಗಳನೆ ಧರಿಸಿ ||
ಸೂರಿ ಮಾನವ ದಾನವರೊಳು
ವಿಕಾರ ಶೂನ್ಯನು ಮಾಡಿ ಮಾಡಿಸಿ
ಸಾರ ಭೋಕ್ತನು ಸ್ವೀಕರಿಸಿ ಕೊಡುತಿಪ್ಪ ಜೀವರಿಗೆ || ೫ ||

ಅನಲ ಪಕ್ವಗೈಸಿದನ್ನವ
ಅನಲನೊಳು ಹೋಮಿಸುವ ತೆರದಂ -
ತನಿಮಿಷೇಶನು ಮಾಡಿ ಮಾಡಿಸಿದಖಿಳ ಕರ್ಮಗಳ ||

ಮನ ವಚನ ಕಾಯದಲಿ ತಿಳಿದನು -
ದಿನದಿ ಕೊಡೆ ಶಂಕಿಸದೆ ವೃಜನಾ -
ರ್ದನಾ ಸದಾ ಕೈಕೊಂಡು ಸಂತೈಸುವನು ತನ್ನವರ || ೬ ||

ಕುದುರೆ ಬಾಲದ ಕೊನೆಯ ಕೂದಲು
ತುದಿ ವಿಭಾಗವ ಮಾಡಿ ಶತ ವಿಧ -
ವದರೊಳೊಂದನು ನೂರು ಭಾಗವ ಮಾಡಲೆಂತಿಹದೊ ||
ವಿಧಿ ಭವಾದಿ ಸಮಸ್ತ ಜೀವರ
ಮೊದಲು ಮಾಡಿ ತೃಣಾಂತ ಜೀವರೊ
ಳಧಿಕ ನ್ಯೂನತೆ ಇಲ್ಲವೆಂದಿಗೂ ಜೀವಪರಿಮಾಣ || ೭ ||

ಜೀವನಂಗುಷ್ಠಾಗ್ರ ಮೂರುತಿ
ಜೀವನಂಗುಟ ಮಾತ್ರ ಮೂರುತಿ
ಜೀವನ ಪ್ರಾದೇಶ ಜೀವಾಕಾರ ಮೂರ್ತಿಗಳು ||
ಏವಮಾದಿ ಅನಂತರೂಪದಿ
ಯಾವದವಯವಗಳೊಳು ವ್ಯಾಪಿಸಿ
ಕಾವ ಕರುಣಾಳಾದ ದೇವನು ಈ ಜಗತ್ರಯವ || ೮ ||

ಬಿಂಬ ಜೀವಾಂಗುಷ್ಠ ಮಾತ್ರದಿ
ಯಿಂಬು ಕೊಂಡಿಹ ಸರ್ವರೊಳು ಸೂ -
ಕ್ಷ್ಮಾಂಬರದಿ ಹೃತ್ಕಮಲ ಮಧ್ಯನಿವಾಸಿಯೆಂದೆನಿಸಿ ||
ಎಂಬರೀತಗೆ ಕೋವಿದರು ವಿ -
ಶ್ವಂಭರಾತ್ಮ ಪ್ರಾಜ್ಞಭಕ್ತರು -
ಟುಂಬಿ ಸಂತೈಸುವನು ಈ ಪರಿ ಬಲ್ಲ ಭಜಕರನು || ೯ ||

ಪುರುಷನಾಮಕ ಸರ್ವ ಜೀವರೊ -
ಳಿರುವ ದೇಹಾಕಾರ ರೂಪದಿ
ಕರಣ ನಿಯಾಮಕ ಹೃಷೀಕಪ ಇಂದ್ರಿಯಂಗಳಲಿ ||
ತುರಿಯನಾಮಕ ವಿಶ್ವತಾಹ -
ನ್ನೆರಡು ಬೆರಳುಳಿದುತ್ತಮಾಂಗದಿ
ಎರಡಧಿಕ ಎಪ್ಪತ್ತು ಸಾವಿರ ನಾಡಿಯೊಳಗಿಪ್ಪ || ೧೦ ||

ವ್ಯಾಪಕನು ತಾನಾಗಿ ಜೀವ ಸ್ವ -
ರೂಪ ದೇಹದ ಒಳಹೊರಗೆ ನಿ -
ರ್ಲೇಪನಾಗಿಹ ಜೀವಕೃತ ಕರ್ಮಗಳನಾಚರಿಸಿ ||
ಶ್ರೀ ಪಯೋಜಭವೇರರಿಂದ ಪ್ರ
ದೀಪವರ್ಣ ಸ್ವಮೂರ್ತಿ ಮಧ್ಯಗ
ತಾ ಪೊಳೆವ ವಿಶ್ವಾದಿ ರೂಪದಿ ಸೇವೆ ಕೈಕೊಳುತ || ೧೧ ||

ಗರುಡ ಶೇಷ ಭವಾದಿ ನಾಮವ
ಧರಿಸಿ ಪವನ ಸ್ವರೂಪ ದೇಹದಿ
ಕರಣ ನಿಯಾಮಕ ತಾನಾಗಿಪ್ಪ ಹರಿಯಂತೆ ||
ಸರಸಿಜಾಸನ ವಾಣಿ ಭಾರತಿ
ಭರತನಿಂದೊಡಗೂಡಿ ಲಿಂಗದ -
ಲಿರುತಿಹರು ಮಿಕ್ಕಾದಿತೆಯರಿಗಿಲ್ಲವಾ ಸ್ಥಾನ || ೧೨ ||

ಜೀವನಕೆ ತುಷದಂತೆ ಲಿಂಗವು
ಸಾವಕಾಶದಿ ಪೊಂದಿ ಸುತ್ತಲು
ಪ್ರಾವರಣ ರೂಪದಲಿ ಇಪ್ಪದು ಭಗವದಿಚ್ಛೆಯಲಿ ||
ಕೇವಲ ಜಡಪ್ರಕೃತಿ ಯಿದಕಧಿ -
ದೇವತೆಯು ಮಹಲಕುಮಿಯನಿಪಳು
ಆ ವಿರಜಯ ಸ್ನಾನಪರಿಯಂತರದಿ ಹತ್ತಿಹದು || ೧೩ ||

ಆರಧಿಕ ದಶಕಳೆಗಳುಳ್ಳ ಶ -
ರೀರವನಿರುದ್ಧಗಳ ಮಧ್ಯದಿ
ಸೇರಿ ಇಪ್ಪವು ಜೀವ ಪರಮಾಚ್ಛಾದಿಕ ದ್ವಯವು ||
ಬಾರದಂದದಿ ದಾನವರ ನತಿ
ದೂರ ಗೈಸುತ ಶ್ರೀಜನಾರ್ದನ
ಮೂರು ಗುಣ ದೊಳಗಿಪ್ಪನೆಂದಿಗೂ ತ್ರಿವತ್ ಎಂದೆನಿಸಿ || ೧೪ ||

ರುದ್ರ ಮೊದಲಾದಮರರಿಗನಿ -
ರುದ್ಧದೇಹವೆ ಮನೆಯೆನಿಸುವುದು
ಇದ್ದು ಕೆಲಸವ ಮಾಡರಲ್ಲಿಂದಿತ್ತ ಸ್ಥೂಲದಲಿ ||

ಕ್ರುದ್ಧ ಖಳ ದಿವಿಜರು ಪರಸ್ಪರ
ಸ್ಪರ್ಧೆಯಿಂದಲಿ ದ್ವಂದ್ವ ಕರ್ಮ ಪ -
ಪ್ರವೃದ್ಧಿಗಳನಾಚರಿಸುವರು ಪ್ರಾಣೇಶನಾಜ್ಞೆಯಲಿ || ೧೫ ||

ಮಹಿಯೊಳಗೆ ಸುಕ್ಷೇತ್ರ ತೀರ್ಥಾದಿ
ತುಹಿನ ವರುಷ ವಸಂತಕಾಲದಿ
ದೈಹಿಕ ದೇಶಿಕ ಕಾಲಿಕತ್ರಯ ಧರ್ಮಕರ್ಮಗಳ ||
ದ್ರುಹಿಣ ಮೊದಲಾದಮರರೆಲ್ಲರು
ವಹಿಸಿ ಗುಣಗಳನನುಸರಿಸಿ ಸ
ನ್ನಿಹಿತರಾಗಿದ್ದೆಲ್ಲರೊಳು ಮಾಡುವರು ವ್ಯಾಪಾರ || ೧೬ ||

ಕೇಶ ಸಾಸಿರವಿಧ ವಿಭಾಗವ
ಗೈಸಲೆನಿತನಿತಿಹ ಸುಷುಮ್ನವು
ಆಶಿರಾಂತದಿ ವ್ಯಾಪಿಸಿಹುದೀದೇಹ ಮಧ್ಯದಲಿ ||
ಆ ಸುಷುಮ್ನಕೆ ವಜ್ರಕಾರ್ಯ ಪ್ರ -
ಕಾಶಿನಿ ವೈದ್ಯುತಿಗಳಿಹವು ಪ್ರ -
ದೇಶದಲಿ ಪಶ್ಚಿಮಕೆ ಉತ್ತರ ಪೂರ್ವ ದಕ್ಷಿಣಕೆ || ೧೭ ||

ಆ ನಳಿನಭವ ನಾಡಿಯೊಳಗೆ ತ್ರಿ -
ಕೋಣಚಕ್ರವು ಇಪ್ಪದಲ್ಲಿ ಕೃ -
ಶಾನು ಮಂಡಲ ಮಧ್ಯಗನು ಸಂಕರ್ಷಣಾಹ್ವಯನು ||
ಹೀನ ಪಾಪಾತ್ಮಕ ಪುರುಷನ
ಹಾನಿ ಗೈಸುತ ದಿನದಿನದಿ ವಿ -
ಜ್ಞಾನಮಯ ಶ್ರೀ ವಾಸುದೇವನು ಯ್ಯೆದಿಸುವ ಕರುಣೀ || ೧೮ ||

ಮಧ್ಯ ನಾಡಿಯ ಮಧ್ಯದಲಿ ಹೃ -
ತ್ಪದ್ಮ ಮೂಲದಿ ಮೂಲಪತಿ ಪದ
ಪದ್ಮ ಮೂಲದಲಿಪ್ಪ ಪವನನ ಪಾದ ಮೂಲದಲಿ ||
ಪೊಂದಿಕೊಂಡಿಹ ಜೀವಲಿಂಗನಿ -
ರುದ್ಧದೇಹ ವಿಶಿಷ್ಟನಾಗಿ ಕ
ಪರ್ದಿ ಮೊದಲಾದಮರರೆಲ್ಲರು ಕಾಯ್ದು ಕೊಂಡಿಹರು || ೧೯ ||

ನಾಳಮಧ್ಯದಲಿಪ್ಪ ಹೃತ್ಕೀ -
ಲಾಲಜದೊಳಿಪ್ಪಷ್ಟದಳದಿ ಕು -
ಲಾಲ ಚಕ್ರದ ತೆರದಿ ಚರಿಸುತ ಹಂಸನಾಮಕನೂ ||
ಕಾಲಕಾಲಗಳಲ್ಲಿ ಯೇಣ್ದಿಶೆ
ಪಾಲಕರ ಕೈಸೇವೆ ಕೊಳ್ಳುತ ಕೃ -
ಪಾಳು ಅವರಭಿಲಾಷೆಗಳ ಪೂರೈಸಿ ಕೊಡುತ್ತಿಪ್ಪ || ೨೦ ||

ವಾಸವಾನುಜ ರೇಣುಕಾತ್ಮಜ
ದಾಶರಥಿ ವೃಜಿನಾರ್ದನಮಲಜ
ಲಾಶಯಾಲಯ ಹಯವದನ ಶ್ರೀ ಕಪಿಲ ನರಸಿಂಹ ||
ಈ ಸುರೂಪದಲವರವರ ಸಂ -
ತೋಷ ಬಡಿಸುತ ನಿತ್ಯಸುಖಮಯ
ವಾಸವಾಗಿಹ ಹೃತ್ಕಮಲದೊಳು ಬಿಂಬನೆಂದೆನಿಸಿ || ೨೧ ||

ಸುರಪನಾಲಯಕೈದಿದರೆ ಮನ -
ವೆರಗುವದು ಸತ್ಪುಣ್ಯ ಮಾರ್ಗದಿ
ಬರಲು ವನ್ಹಿಯ ಮನೆಗೆ ನಿದ್ರಾಲಸ್ಯ ಹಸಿತೃಷೆಯು ||
ತರಣಿ ತನಯ ನಿಕೇತನದಿ ಸಂ -
ಭರಿತ ಕೋಪಾಟೋಪ ತೋರುವ -
ದರವಿದೂರನು ನಿಋುತಿಯಲ್ಲಿರೆ ಪಾಪಗಳ ಮಾಳ್ಪ || ೨೨ ||

ವರಣನಲ್ಲಿ ವಿನೋದ ಹಾಸ್ಯವು
ಮರುತನೊಳು ಗಮನಾ ಗಮನ ಹಿಮ -
ಕರ ಧನಾಧಿಪರಲ್ಲಿ ಧರ್ಮದ ಬುದ್ಧಿ ಜನಿಸುವದು ||
ಹರನ ಮಂದಿರದಲ್ಲಿ ಗೋಧನ
ಧರಣಿ ಕನ್ಯಾದಾನಗಳು ಬಂ -
ದರ ಘಳಿಗೆ ತಡಿಯದಲೆ ಕೊಡುತಿಹ ಚಿತ್ತಪುಟ್ಟುವದು || ೨೩ ||

ಹೃದಯದೊಳಗೆ ವಿರಕ್ತಿ ಕೇಸರ -
ಕೊದಗೆ ಸ್ವಪ್ನ ಸುಷುಪ್ತಿ ಲಿಂಗದಿ
ಮಧುಹ ಕಣಿಕೆಯಲ್ಲಿ ಬರೆ ಜಾಗ್ರತೆಯು ಪುಟ್ಟುವದು ||

ಸುದರಶನ ಮೊದಲಾದ ಅಷ್ಟಾ -
ಯುಧವ ಪಿಡಿದಾಶಾಧಿಪತಿಗಳ
ಸದನದಲಿ ಸಂಚರಿಸುತೀಪರಿ ಬುದ್ಧಿಗಳ ಕೊಡುವ || ೨೪ ||

ಸೂತ್ರನಾಮಕ ಪ್ರಾಣಪತಿ ಗಾ -
ಯತ್ರಿ ಸಂಪ್ರತಿಪಾದ್ಯನಾಗಿ
ಗಾತ್ರದೊಳು ನೆಲಿಸಿದ್ದು ತಿಳಿಯದೆ ಕಂಡ ಕಂಡಲ್ಲಿ ||
ಧಾತ್ರಿಯೊಳು ಸಂಚರಿಸಿ ಪುತ್ರ ಕ -
ಳತ್ರ ಸಹಿತನು ದಿನದಿ ತೀರ್ಥ
ಕ್ಷೇತ್ರಯಾತ್ರೆಯ ಮಾಡಿದೆವು ಎಂದೆನುತ ಹಿಗ್ಗುವರು || ೨೫ ||

ನಾರಸಿಂಹ ಸ್ವರೂಪದೊಳಗೆ ಶ -
ರೀರ ನಾಮದಿ ಕರೆಸುವನು ಹದಿ -
ನಾರು ಕಳೆಗಳು ಉಳ್ಳ ಲಿಂಗದಿ ಪುರುಷನಾಮಕನು ||
ತೋರುವನು ಅನಿರುದ್ಧದೊಳು ಶಾಂ -
ತೀರಮಣನನಿರುದ್ಧ ರೂಪದಿ
ಪ್ರೇರಿಸುವ ಪ್ರದ್ಯುಮ್ನ ಸ್ಥೂಲಕಳೆವರದೊಳಿದ್ದು || ೨೬ ||

ಮೊದಲು ತ್ವಕ್‌ಚರ್ಮಗಳು ಮಾಂಸ
ರುಧಿರ ಮೇದೋ ಮಜ್ಜಾಸ್ಥಿಗ -
ಳಿದರೊಳಗೆ ಏಕೋನ ಪಂಚಾಶನ್ಮರುದ್ಗಣವೂ ||
ನಿಧನ ಹಿಂಕಾರಾದಿ ಸಾಮಗ -
ನದರ ನಾಮದಿ ಕರೆಸುತೊಂಭ -
ತ್ತಧಿಕನಾಲ್ವತ್ತೆ ನಿಜ ರೂಪದಿ ಧಾತುಗಳೊಳಿಪ್ಪ || ೨೭ ||

ಸಪ್ತಧಾತುಗಳೊಳ ಹೊರಗೆ ಸಂ -
ತಪ್ತಲೋಹಗತಾಗ್ನಿಯಂದದಿ
ಸಪ್ತಸಾಮಗನಿಪ್ಪನನ್ನ ಮಯಾದಿ ಕೋಶದೊಳು ||
ಲಿಪ್ತನಾಗದೆ ತತ್ತದಾಹ್ವಯ
ಕ್ಲೃಪ್ತ ಭೋಗವ ಕೊಡುತ ಸ್ವಪ್ನ ಸು -
ಷುಪ್ತಿ ಜಾಗ್ರತಿಯೀವ ತೈಜಸ ಪ್ರಾಜ್ಞ ವಿಶ್ವಾಖ್ಯ || ೨೮ ||

ತೀವಿಕೊಂಡಿಹವಲ್ಲಿ ಮಜ್ಜ ಕ
ಳೇವರದ ಅಂಗುಲಿಯ ಪರ್ವದ
ಠಾವಿನಲಿ ಮುನ್ನೂರ ಅರವತ್ತೆನಿಪ ತ್ರಿಸ್ಥಳದಿ ||
ಸಾವಿರದ ಎಂಬತ್ತು ರೂಪವ
ಕೋವಿದರು ಪೇಳುವರು ದೇಹದಿ
ದೇವತೆಗಳೊಡಗೂಡಿ ಕ್ರೀಡಿಸುವನು ರಮಾರಮಣ || ೨೯ ||

ಕೀಟಪೇಶ ಸ್ಕಾರಿ ನೆನವಲಿ
ಕೀಟ ಭಾವವ ತೊರೆದು ತದ್ವತ್
ಖೇಟರೂಪವನ್ನೈದಿಯಾಮಪ ತೆರದಿ ಭಕುತಿಯಲಿ ||
ಕೈಟಭಾರಿಯ ಧ್ಯಾನದಿಂದ ಭ -
ವಾಟವಿಯನತಿಶೀಘ್ರದಿಂದಲಿ
ದಾಟಿ ಸಾರೂಪ್ಯವನು ಯೈದುವರಲ್ಪಜೀವಿಗಳು || ೩೦ ||

ಈ ಪರಿಯ ದೇಹಮೊಳ ಭಗವ -
ದ್ರೂಪಗಳ ಮರಿಯದಲೆ ಮನದಿ ಪ -
ದೇಪದೇ ಭಕುತಿಯಲಿ ಸ್ಮರಿಸುತಲಿಪ್ಪ ಭಕುತರನು ||
ಗೋಪತಿ ಜಗನ್ನಾಥ ವಿಠ್ಠಲ ಸ
ಮೀಪಗನು ತಾನಾಗಿ ಸಂತತ
ಸಾಪರೋಕ್ಷ್ಯಯ ಮಾಡಿ ಪೊರೆವನು ಎಲ್ಲಕಾಲದಲಿ || ೩೧ ||

# ೧೦ ಸರ್ವ ಪ್ರತೀಕ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಆವ ಪರಬೊಮ್ಮನತಿ ವಿಮಲಾಂ -
ಗಾವ ಬದ್ಧರು ಯೆಂದೆನಿಪ ರಾ -
ಜೀವಭವ ಮೊದಲಾದಮರರನುದಿನದಿ ಹರಿಪದವ ||

ಸೇವಿಪರಿಗನುಕೂಲರಲ್ಲದೆ
ತಾವು ಇವರನು ಕೆಡಿಸಬಲ್ಲರೆ
ಶ್ರೀ ವಿಲಾಸಾಸ್ಪದನ ದಾಸರಿಗುಂಟೆ ಅಪಜಯವು || ೧ ||

ಶ್ರೀದನಂಘ್ರಿ ಸರೋಜಯುಗಳೇ -
ಕಾದಶಸ್ಥಾನಾತ್ಮದೊಳಗಿ -
ಟ್ಟಾದರದಿ ಸಂತುತಿಸುವವರಿಗೆ ಈ ನವಗ್ರಹವು ||
ಆದಿತೇಯರು ಸಂತತಾಧಿ
ವ್ಯಾಧಿಗಳ ಪರಿಹರಿಸುತವರನು
ಕಾದುಕೊಂಡಿಹರೆಲ್ಲರೊಂದಾಗೀಶನಾಜ್ಞೆಯಲಿ || ೨ ||

ಮೇದಿನಿಯ ಮೇಲುಳ್ಳಗೋಷ್ಪಾ
ದೋದಕಗಳೆಲ್ಲಮಲತೀರ್ಥವು
ಪಾದಪಾದ್ರಿ ಧರಾತಳವೇ ಸುಕ್ಷೇತ್ರ ಜೀವಗಣಾ ||
ಶ್ರೀದನ ಪ್ರತಿಮೆಗಳವರುಂ
ಬೋದನವೇ ನೈವೇದ್ಯ ನಿತ್ಯದಿ
ದಾರಿ ನಡವರೇ ನರ್ತನಗಳೆಂದರಿತವನೆ ಯೋಗಿ || ೩ ||

ಸರ್ವದೇಶವು ಪುಣ್ಯದೇಶವು
ಸರ್ವಕಾಲವು ಪರ್ವಕಾಲವು
ಸರ್ವಜೀವರು ದಾನ ಪಾತ್ರರು ಮೂರು ಲೋಕದೊಳು ||
ಸರ್ವ ಮಾತುಗಳೆಲ್ಲ ಮಂತ್ರವು
ಸರ್ವ ಕೆಲಸಗಳೆಲ್ಲ ಪೂಜೆಯು
ಶರ್ವ ವಂದ್ಯನ ವಿಮಲ ಮೂರ್ತಿ ಧ್ಯಾನ ಉಳ್ಳವಗೆ || ೪ ||

ದೇವಖಾತ ತಟಾಕ ವಾಪಿ ಸ -
ರೋವರಗಳಭಿಮಾನಿ ಸುರರು ಕ -
ಳೆವರದೊಳಗಿಹ ರೋಮಕೂಪಗಳೊಳಗೆ ತುಂಬಿಹರು ||
ಆವಿಯದ್ಗಂಗಾದಿ ನದಿಗಳು
ಭಾವಿಸುವರೆಪ್ಪತ್ತೆರಡೆನಿಪ
ಸಾವಿರ ಸುನಾಡಿಗಳೊಳಗೆ ಪ್ರವಹಿಸುತಲಿಹವೆಂದು || ೫ ||

ಮೂರು ಕೋಟಿಯ ಮೇಲೆ ಶೋಭಿಪ
ಈರಧಿಕ ಎಪ್ಪತ್ತು ಸಾವಿರ
ಮಾರುತಾಂತರ್ಯಾಮಿ ಮಾಧವ ಪ್ರತಿದಿವಸದಲ್ಲಿ ||
ತಾರಮಿಸುತಿಹನೆಂದು ತಿಳಿದಿಹ
ಸೂರಿಗಳಿ ದೇವತೆಗಳವರ
ಶರೀರಗಳೇ ಸುಕ್ಷೇತ್ರಪವರರ್ಚನೆಯು ಹರಿಪೂಜೆ || ೭ ||

ಶ್ರೀವರನಿಗಭಿಷೇಕ ವೆಂದರಿ -
ದೀ ವಸುಂಧರೆಯೊಳಗೆ ಬಲ್ಲವ -
ರಾವ ಜಲದಲಿ ಮಿಂದರೆಯು ಗಂಗಾದಿ ತೀರ್ಥಗಳು ||
ತಾ ವಲಿದು ಬಂದಲ್ಲೆ ನೆಲೆಗೊಂ -
ಡೀವರಖಿಲಾರ್ಥಗಳನರಿಯದೆ
ಜೀವರಮರತರಂಗಿಣಿಯು ನೈದಿದರೆ ಫಲವೇನು || ೭ ||

ನದನದಿಗಳಿಳಿಯೊಳಗೆ ಪರಿವವು
ಉದಧಿ ಪರಿಯಂತರದಿ ತರುವಾ -
ಯದಲಿ ರಮಿಸುವವಲ್ಲಿ ತನ್ಮಯವಾಗಿ ತೋರದಲೆ ||
ವಿಧಿನಿಷೇಧಗಳಾಚರಿಸುವರು
ಬುಧರು ಭಗವದ್ರೂಪ ಸರ್ವ
ತ್ರದಲಿ ಚಿಂತನೆ ಬರಲು ತ್ಯಜಿಸುವರಖಿಳ ಕರ್ಮಗಳ || ೮ ||

ಕಲಿಯೆ ಮೊದಲಾದಖಿಳದಾನವ -
ರೊಳಗೆ ಬ್ರಹ್ಮ ಭವಾದಿ ದೇವ
ರ್ಕಳು ನಿಯಾಮಕರಾಗಿ ಹರಿಯಾಜ್ಞೆಯಲಿ ಅವರವರ ||
ಕಲುಷ ಕರ್ಮವ ಮಾಡಿ ಮಾಡಿಸಿ
ಜಲರುಹೇಕ್ಷಣಗರ್ಪಿಸುತ ನಿ -
ಶ್ಚಲ ಸುಭಕ್ತಿಜ್ಞಾನ ಪೂರ್ಣರು ಸುಖಿಪರವರೊಳಗೆ || ೯ ||

ಆವ ಜೀವರೊಳಗಿದ್ದರೇನಿ -
ನ್ನಾವ ಕರ್ಮವ ಮಾಡಲೇನಿ -
ನ್ನಾವ ಗುಣರೂಪಗಳುಪಾಸನೆ ಮಾಡಲೇನವರು ||

ಭಾವಜ್ಞೆಯನ ಪರಮಸತ್ಕರು -
ಣಾವಲೋಕನ ಬಲದಿ ಚರಿಸುವ
ದೇವತೆಗಳನು ಮುಟ್ಟಲಾಪವೆ ಪಾಪಕರ್ಮಗಳು || ೧೦ ||

ಪತಿಯೊಡನೆ ಮನಬಂದ ತೆರದಲಿ
ಪ್ರತಿದಿವಸ ಸತಿ ರಮಿಸಿ ಮೋದಿಸಿ
ಸುತರ ಪಡೆದಿಳಿಯೊಳು ಜಿತೇಂದ್ರಿಯಳೆಂದು ಕರೆಸುವಳು ||
ಕೃತಿಪತಿ ಕಥಾಮೃತ ಸುಭೋಜನ
ರತ ಮಹಾತ್ಮರಿಗಿತರ ಮೋಷ
ಪ್ರತತಿಗಳು ಸಂಬಂಧಿಸುವುವೆ ಅಚ್ಯುತನ ದಾಸರಿಗೆ || ೧೧ ||

ಸೂಸಿಬಹ ನದಿಯೊಳಗೆ ತನ್ನ ಸಾ -
ಹಸ ತೋರುವೆನೆಂದು ಜಲಕೆದು
ರೀಸಿದರೆ ಕೈಸೋತು ಮುಣುಗುವ ಹರಿಯ ಬಿಟ್ಟವನು ||
ಕ್ಲೇಶ ಐದುವನಾದಿಯಲಿ ಸ -
ರ್ವೇಶ ಕ್ಲುಪ್ತಿಯ ಮಾಡಿದುದು ಬಿ
ಟ್ಟಾಶೆಯಿಂದಲಿ ಅನ್ಯರಾರಾಧಿಸುವ ಮಾನವನು || ೧೨ ||

ನಾನು ನನ್ನದು ಎಂಬ ಜಡಮತಿ
ಮಾನವನು ದಿನದಿನದಿ ಮಾಡುವ
ಸ್ನಾನ ಜಪ ದೇವಾರ್ಚನೆಯು ಮೊದಲಾದ ಕರ್ಮಗಳು ||
ದಾನವರು ಶಳದೈವರಲ್ಲದೆ
ಶ್ರೀನಿವಾಸನು ಸ್ವೀಕರಿಸ ಮ
ದ್ದಾನೆ ಪಕ್ವಕಪಿತ್ಥಫಲ ಭಕ್ಷಿಸಿದ ಪೋಲಹುದು || ೧೩ ||

ಧಾತ್ರಿಯೊಳಗುಳ್ಳಖಿಳ ತೀರ್ಥ
ಕ್ಷೇತ್ರ ಚರಿಸಿದರೇನು ಪಾತ್ರಾ -
ಪಾತ್ರವರಿತನ್ನಾದಿ ದಾನವ ಮಾಡಿ ಫಲವೇನು ||
ಗಾತ್ರನಿರ್ಮಲನಾಗಿ ಮಂತ್ರ
ಸ್ತೋತ್ರ ಪಠಿಸಿದರೇನು ಹರಿ ಸ -
ರ್ವತ್ರಗತನೆಂದರಿಯದಲೆ ತಾ ಕರ್ತೃಎಂಬುವನು || ೧೪ ||

ಕಂಡನೀರೊಳು ಮುಣುಗಿ ದೇಹವ
ದಂಡಿಸಲು ಫಲವೇನು ದಂಡ ಕ -
ಮುಂಡಲಗಳ ಧರಿಸಿ ಯತಿಯೆಂದೆನಿಸಿ ಫಲವೇನು ||
ಅಂಡಜಾಧಿಪಸಂಸ್ಥಗನ ಪದ
ಪುಂಡರೀಕದಿ ಮನವ ಹರ್ನಿಶಿ
ಬಂಡುಣಿಯವೋಲಿರಿಸಿ ಸುಖಪಡದಿಪ್ಪ ಮಾನವನು || ೧೫ ||

ವೇದಶಾಸ್ತ್ರ ಪುರಾಣ ಕಥೆಗಳ
ಓದಿ ಪೇಳಿದರೇನು ಸಕಲ ನಿ -
ಷೇಧ ಕರ್ಮವ ತೊರೆದು ಸತ್ಕರ್ಮಗಳ ಮಾಡೇನು ||
ಓದನಂಗಳ ಜರಿದು ಶ್ವಾಸನಿ
ರೋಧ ಗೈಸಿದರೇನು ಕಾಮ
ಕ್ರೋಧವಳಿಯದೆ ನಾನು ನನ್ನದು ಎಂಬ ಮಾನವನು || ೧೬ ||

ಏನು ಕೇಳಿದರೇನು ನೋಡಿದ -
ರೇನು ಓದಿದರೇನು ಪೇಳಿದ -
ರೇನು ಪಾಡಿದರೇನು ಮಾಡಿದರೇನು ದಿನದಿನದಿ ||
ಶ್ರೀನಿವಾಸನ ಜನ್ಮ ಕರ್ಮ ಸ -
ದಾನುರಾಗದಿ ನೆನದು ತತ್ತ -
ಸ್ಥಾನದಲಿ ತದ್ರೂಪ ತಾನ್ನಾಮಕನ ಸ್ಮರಿಸದವ || ೧೭ ||

ಬುದ್ದಿ ವಿದ್ಯಾ ಬಲದಿ ಪೇಳಿದ
ಶುದ್ಧ ಕಾವ್ಯವಿದಲ್ಲ ತತ್ವ ಸು -
ಪದ್ಧತಿಗಳನು ತಿಳಿದ ಮಾನವನಲ್ಲ ಬುಧರಿಂದ ||
ಮಧ್ವವಲ್ಲಭ ತಾನೆ ಹೃದಯದೊ -
ಳಿದ್ದು ನುಡಿದಂದದಲಿ ನುಡಿದೆನ -
ಪದ್ಧಗಳ ನೋಡದಲೆ ಕಿವಿಕೊಟ್ಟಾಲಿಪುದು ಬುಧರು || ೧೮ ||

ಕಬ್ಬಿನೊಳಗಿಹ ರಸ ವಿದಂತನಿ -
ಗಬ್ಬಬಲ್ಲದೆ ಭಾಗ್ಯ ಯೌವನ
ಮಬ್ಬಿನಲಿ ಮೈಮರದವಗೆ ಹರಿ ಸುಚರಿತಾಮೃತವು ||

ಲಭ್ಯವಾಗದು ಹರಿಪದಾಬ್ಜದಿ
ಹಬ್ಬಿದತಿ ಸದ್ಭಕ್ತಿ ರಸವುಂ -
ಡುಬ್ಬಿಕೊಬ್ಬಿ ಸುಖಾಬ್ಧಿಯೊಳಗಾಡುವವಗಲ್ಲದಲೆ || ೧೯ ||

ಖಗವರ ಧ್ವಜಸಂಘ್ರಿ ಭಕುತಿಯ
ಬಗೆಯನರಿಯದ ಮಾನವರಿಗಿದು
ವಗಟನಂದದಿ ತೋರುತಿಪ್ಪದು ಎಲ್ಲ ಕಾಲದಲಿ ||
ತ್ರಿಗುಣ ವರ್ಜಿತನಮಲ ಗುಣಗಳ
ಪೊಗಳಿ ಹಿಗ್ಗುವ ಭಾಗವತರಿಗೆ
ಮಿಗೆ ಭಕುತಿ ಸುಜ್ಞಾನ ಸುಖವಿತ್ತವರ ರಕ್ಷಿಪುದು || ೨೦ ||

ಪರಮ ತತ್ವ ರಹಸ್ಯವಿದು ಭೂ -
ಸುರರು ಕೇಳ್ವದು ಸಾದರದಿ ನಿ -
ಷ್ಠುರಿಗಳಿಗೆ ಮೂಢರಿಗೆ ಪಂಡಿತಮಾನಿ ಪಿಶುನರಿಗೆ ||
ಅರಸಿಕರಿಗಿದು ಪೇಳ್ವದಲ್ಲನ -
ವರತ ಭಗವತ್ಪಾದಯುಗಳಾಂ -
ಬುರುಹ ಮಧುಕರರೆನಿಸುವವರಿಗಿದನರಪು ಮೋದದಲಿ || ೨೧ ||

ಲೋಕವಾರ್ತೆಯಿದಲ್ಲ ಪರ
ಲೋಕೈಕನಾಥನ ವಾರ್ತೆ ಕೇಳ್ವರೆ
ಕಾಕು ಮನುಜರಿಗಿದು ಸಮರ್ಪಕವಾಗಿ ಸೊಗಸುವುದೇ ||
ಕೋಕನದ ಪರಿಮಳವು ಷಟ್ಪದ
ಸ್ವೀಕರಿಸುವಂದದಲಿ ಜಲಚರ
ಭೇಕ ಬಲ್ಲದೆ ಇದರ ರಸ ಹರಿ ಭಕ್ತಗಲ್ಲದಲೆ || ೨೨ ||

ಸ್ವಪ್ರಯೋಜನರಹಿತ ಸಕಲೇ -
ಷ್ಟ ಪ್ರದಾಯಕ ಸರ್ವಗುಣ ಪೂ -
ರ್ಣಾಪ್ರಮೇಯ ಜರಾಮರಣ ವರ್ಜಿತ ವಿಗತ ಕ್ಲೇಶ ||
ವಿಪ್ರತಮ ವಿಶ್ವಾತ್ಮ ಘೃಣಿ ಸೂ -
ರ್ಯ ಪ್ರಕಾಶಾನಂತ ಮಹಿಮ ಘ್ನ -
ತ ಪ್ರತೀಕಾರಾಧಿತಾಂಘ್ರಿ ಸರೋಜ ಸುರರಾಜ || ೨೩ ||

ವನಚರಾದ್ರಿ ಧರಾಧರನೆ ಜಯ
ಮನುಜ ಮೃಗವರ ವೇಷವಾ ಜಯ
ಮನ ತ್ರಿವಿಕ್ರಮ ದೇವಜಯ ಭೃಗುರಾಮ ಭೂಪ ಜಯ ||
ಜನಕಜಾವಲ್ಲಭನೆ ಜಯ ರು -
ಗ್ಮಿಣೀ ಮನೋರಥ ಸಿದ್ಧಿದಾಯಕ
ಜಿನವಿಮೋಹಕ ಕಲಿವಿದಾರಣ ಜಯಜಯಾರಮಣ || ೨೪ ||

ಸಚ್ಚಿದಾನಂದಾತ್ಮ ಬ್ರಹ್ಮ ಕ -
ರಾರ್ಚಿತಾಂಘ್ರಿ ಸರೋಜ ಸುಮನಸ
ಪ್ರೋಚ್ಚ ಸನ್ಮಂಗಳದ ಮಧ್ವಾಂತಃಕರಣ ರೂಢ ||
ಅಚ್ಯುತ ಜಗನ್ನಾಥ ವಿಠ್ಠಲ
ನಿಚ್ಚ ಮೆಚ್ಚಿದ ಜನರ ಬಿಡಕಾಡ್
ಗಿಚ್ಚನುಂಡಾರಣ್ಯದೊಳು ಗೋ ಗೋಪರನ ಕಾಯ್ದ || ೨೫ ||

# ೧೧ ಧ್ಯಾನಪ್ರಕ್ರಿಯಾ ಸಂಧಿ
## (ಸ್ಥಾವರ ಜಂಗಮ ಸಂಧಿ)

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಪಾದುಕೆಯು ಕಂಟಕ ಶಿಕತ
ಮೊದಲಾದವನುದಿನ ಬಾಧಿಸುವವೇ -
ಕಾದಶೇಂದ್ರಿಯಗಳಲಿ ಬಿಡದೆ ಹೃಷೀಕಪನ ಮೂರ್ತಿ ||
ಸಾದರದಿ ನೆನೆವವನು ವಿಪಪ -
ರಾಧಗಳು ಮಾಡಿದರು ಪರಿಯೆ ನಿ -
ರೋಧಗೈಸವು ಮೋಕ್ಷಮಾರ್ಗಕೆ ದುರಿತರಾಶಿಗಳು || ೧ ||

ಹಗಲು ಸಂಧ್ಯಾದೀಪದಂಪದಿ
ನಿಗಮವೇದ್ಯನ ಪೂಜಿಸುತ ಕೈ
ಮುಗಿದು ನಾಲ್ಕರೊಳೊಂದು ಪುರುಷಾರ್ಥವನು ಬೇಡದಲೆ ||

ಜಗದುದರ ಕೊಟ್ಟದನು ಭುಂಜಿಸಿ
ಮಗ ಮುದದಿ ಪ್ರಾಣೇಂದ್ರಿಯಾತ್ಮಾ -
ದಿಗಳು ಭಗವದಧೀನವೆಂದಡಿಗಡಿಗೆ ನೆನೆವುತಿರು || ೨ ||

ಅಸ್ವತಂತ್ರನು ಜೀವ ಹರಿ ಸ -
ರ್ವಸ್ವತಂತ್ರನು ನಿತ್ಯ ಸುಖಮಯ
ನಿಃಸ್ವ ಬದ್ಧಾಲ್ಪಜ್ಞಶಕ್ತ ಸುದುಃಖಿ ನಿರ್ವಿಣ್ಣ ||
ಹ್ರಸ್ವ ದೇಹಿ ಸನಾಥ ಜೀವನು
ವಿಶ್ವವ್ಯಾಪಕ ಕರ್ತೃ ಬ್ರಹ್ಮ ಸ -
ರಸ್ವತೀಶಾದ್ಯಮರನುತ ಹರಿಯೆಂದು ಕೊಂಡಾಡು || ೩||

ಮತ್ತೆ ವಿಶ್ವಾದ್ಯೆಂಟು ರೂಪ್ಪೊಂ -
ಭತ್ತರಿಂದಲಿ ಪೆಚ್ಚಿಸಲು ಯು
ಪ್ಪತ್ತರದು ರೂಪಗಳಹವು ಒಂದೊಂದು ಸಾಹಸ್ರ ||
ಪೃಥಕ್ ಪೃಥಕ್ ನಾಡಿಗಳೊಳಗೆ ಸ -
ರ್ವೋತ್ತಮನ ತಿಳಿಯೆಂದು ಭಿಷ್ಮನು
ಬಿತ್ತರಿಸಿದನು ಧರ್ಮ ತನಯಗೆ ಶಾಂತಿ ಪರ್ವದಲಿ || ೪ ||

ಎಂಟು ಪ್ರಕೃತಿಗಳೊಳಗೆ ವಿಶ್ವಾ -
ದ್ಯೆಂಟು ರೂಪದಲ್ಲಿದ್ದು ಭಕುತರ
ಕಂಟಕವ ಪರಿಹರಿಸುತಲಿ ಪಾಲಿಸುವ ಪ್ರತಿದಿನದಿ ||
ನಂಟನಂದದಿ ಎಡ ಬಿಡದೆ ವೈ -
ಕುಂಠರಮಣ ತನ್ನವರ ನಿ -
ಷ್ಕಂಟಕ ಸುಮಾರ್ಗದಲಿ ನಡಿಸುವ ದುರ್ಜನರ ಬಿಡುವ || ೫ ||

ಸ್ವರಮಣನು ಶಕ್ತ್ಯಾದಿ ರೂಪದಿ
ಕರಣ ಮಾನಿಗಳೊಳಗೆ ನೆಲಿಸಿ -
ದ್ವರ ವಿದೂರನು ಸ್ಥೂಲ ವಿಷಯಗಳುಂಡುಣಿಪ ನಿತ್ಯ ||
ಅರಿಯದಲೆ ನಾನುಂಬೆನೆಂಬುವ
ನಿರಿಯಗಳನುಂಬವನು ನಿಶ್ಚಯ
ಮರಳಿ ಮರಳಿ ಭವಾಟವಿಯ ಸಂಚರಿಸಿ ಬಳಲುವನು || ೬ ||

ಸುರುಚಿ ರುಚಿರ ಸುಗಂಧ ಶುಚಿಯಂ -
ದಿರುತಿಹನು ಷಡ್ರಸಗಳೊಳು ಹ
ನ್ನೆರಡು ರೂಪದಲಿಪ್ಪ ಶ್ರೀ ಭೂ ದುರ್ಗೆಯರಸಹಿತ ||
ಸ್ವರಮಣನು ಎಪ್ಪತ್ತೆರಡು ಸಾ
ವಿರ ಸಮೀರನ ರೂಪದೊಳಗಿ -
ದ್ದುರುಪರಾಕ್ರಮ ಕರ್ತೃ ಎನಿಸುವ ನಾಡಿಗಳೊಳಗಿದ್ದು || ೭ ||

ನಿನ್ನ ಸರ್ವತ್ರದಲಿ ನೆನೆವವ -
ರನ್ಯ ಕರ್ಮವ ಮಾಡಿದರು ಸರಿ
ಪುಣ್ಯ ಕರ್ಮಗಳೆನಿಸುವವು ಸಂದೇಹವಿನಿತಿಲ್ಲ ||
ನಿನ್ನಸ್ಮರಿಸದೆ ಸ್ನಾನ ಜಪ ಹೋ -
ಮಾನ್ನ ವಸ್ತ್ರಗಜಾಶ್ವ ಭೂ ಧನ
ಧಾನ್ಯ ಮೊದಲಾದಖಿಳ ಧರ್ಮವ ಮಾಡಿ ಫಲವೇನು || ೮ ||

ಇಷ್ಟ ಭೋಗ್ಯ ಪದಾರ್ಥದೊಳು ಶಿಪಿ -
ವಿಷ್ಟನಾಮದಿ ಸರ್ವಜೀವರ
ತುಷ್ಟಿ ಬಡಿಸುವ ದಿನದಿನದಿ ಸಂತುಷ್ಟ ತಾನಾಗಿ ||
ಕೋಷ್ಟದೊಳು ನೆಲಸಿದ್ದು ರಸಮಯ
ಪುಷ್ಟಿಗೈಸುತ್ತಿಂದ್ರಿಯಗಳೊಳು
ಪ್ರೇಷ್ಟನಾಗಿದ್ದೆಲ್ಲ ವಿಷಯಗಳುಂಬ ತಿಳಿಸದಲೆ || ೯ ||

ಕಾರಣಾಹ್ವಯ ಜ್ಞಾನ ಕರ್ಮ
ಪ್ರೇರಕನು ತಾನಾಗಿ ಕ್ರಿಯೆಗಳ
ತೋರುವನು ಕರ್ಮೇಂದಿಯಾಧಿಪರೊಳಗೆ ನೆಲಸಿದ್ದು ||
ಮೂರು ಗುಣಮಯ ದ್ರವ್ಯಗ ತದಾ -
ಕಾರ ತನ್ನಾಮದಲಿ ಕರೆಸುವ
ತೋರಿಕೊಳ್ಳದೆ ಜನರ ಮೋಹಿಪಮೋಘ ಕಲ್ಪಕನು || ೧೦ ||

ದ್ರವ್ಯನೆನಿಸುವ ಭೂತ ಮಾತ್ರದೊ -
ಳವ್ಯಯನು ಕರ್ಮೇಂದ್ರಿಯಗಳೊಳು
ಭವ್ಯಸತ್ಕ್ರಿಯನೆನಿಪ ಜ್ಞಾನೇಂದ್ರಿಯಗಳೊಳಗಿದ್ದು ||

ಸ್ತವ್ಯ ಕಾರಕನೆನಿಸಿ ಸುಖಮಯ
ಸೇವ್ಯ ಸೇವಕನೆನಿಸಿ ಜಗದೊಳು
ಹವ್ಯ ವಾಹನ ಅರಣಿಯೊಳಗಿಪ್ಪಂತೆ ಇರುತಿಪ್ಪ || ೧೧ ||

ಮನವೆ ಮೊದಲಾದಿಂದ್ರಿಯಗಳೊ -
ಳಗ ನಿಲದೇವನು ಶುಚಿಯೆನಿಸಿಕೊಂ -
ಡನವರತ ನೆಲಸಿಪ್ಪ ಶುಚಿಷದ್ಧ್ಯೋತನೆಂದೆನಿಸಿ ||
ತನುವಿನೊಳಗಿಪ್ಪನು ಸದಾ ವಾ -
ಮನ ಹೃಷೀಕೇಶಾಖ್ಯ ರೂಪದ -
ಲನುಭವಕೆ ತಂದೀವ ವಿಷಯಜ ಸುಖವ ಜೀವರಿಗೆ || ೧೨ ||

ಪ್ರೇರಕ ಪ್ರೇರ್ಯರೊಳು ಪ್ರೇರ್ಯ
ಪ್ರೇರಕನು ತಾನಾಗಿ ಹರಿಸಿನಿ -
ರ್ವೈರದಿಂದ ಪ್ರವರ್ತಿಸುವ ತನ್ನಾಮರೂಪದಲಿ ||
ತೋರಿಕೊಳ್ಳದೆ ಸರ್ವರೊಳು ಭಾ -
ಗೀರಥಿಯ ಜನಕನು ಸಕಲ ವ್ಯಾ -
ಪಾರಗಳ ತಾ ಮಾಡಿ ಮಾಡಿಸಿ ನೋಡಿ ನಗುತಿಪ್ಪ || ೧೩ ||

ಹರಿಯೆ ಮುಖ್ಯ ನಿಯಾಮಕನು ಯಂ -
ದರಿತು ಪುಣ್ಯಾಪುಣ್ಯ ಹರ್ಷಾ -
ಮರ್ಷ ಲಾಭಾಲಾಭ ಸುಖ ದುಃಖಾದಿ ದ್ವಂದ್ವಗಳ ||
ನಿರುತ ಅವನಂಘ್ರಿಗೆ ಸಮರ್ಪಿಸಿ
ನರಕ ಭೂಸ್ವರ್ಗಾಪವರ್ಗದಿ
ಕರಣ ನಿಯಾಮಕನ ಸರ್ವತ್ರದಲಿ ನೆನೆವುತಿರು || ೧೪ ||

ಮಾಣವಕ ತತ್ಫಲಗಳನು ಸಂ -
ಧಾನವಿಲ್ಲದೆ ಕರ್ಮಗಳ ಸ್ವೇ -
ಚ್ಛಾನುಸಾರದಿ ಮಾಡಿ ಮೋದಿಸುವಂತೆ ಪ್ರತಿದಿನದಿ ||
ಜ್ಞಾನಪೂರ್ವಕ ವಿಧಿ ನಿಷೇಧಗ
ಳೇನು ನೋಡದೆ ಮಾಡು ಕರ್ಮಪ್ರ -
ಧಾನ ಪುರುಷೋತ್ತಮನಲಿ ಭಕುತಿಯ ಬೇಡು ಕೊಂಡಾಡು || ೧೫ ||

ಹಾನಿ ವೃದ್ಧಿ ಜಯಾಪಜಯಗಳು
ಏನು ಕೊಟ್ಟರು ಭುಂಜಿಸುತ ಲ -
ಕ್ಷ್ಮೀನಿವಾಸನ ಕರುಣವನೆ ಸಂಪಾದಿಸನುದಿನದಿ ||
ಜ್ಞಾನ ಸುಖಮಯ ತನ್ನವರ ಪರ
ಮಾನುರಾಗದಿ ಸಂತೈಪದೇ -
ಹಾನುಬಂಧಿಗಳಂತೆ ಒಳಹೊರಗಿದ್ದು ಕರುಣಾಳು || ೧೬ ||

ಆ ಪರಮ ಸಕಲೇಂದ್ರಿಯಗಳೊಳು
ವ್ಯಾಪಕನು ತಾನಾಗಿ ವಿಷಯವ
ತಾ ಪರಿಗ್ರಹಿಸುವನು ತಿಳಿಸುವ ಸರ್ವ ಜೀವರೊಳು ||
ಪಾಪರಹಿತ ಪುರಾಣ ಪುರುಷ ಸ
ಮೀಪದಲಿ ನೆಲಸಿದ್ದು ನಾನಾ
ರೂಪಧಾರಕ ತೋರಿಕೊಳ್ಳದೆ ಕರ್ಮಗಳ ಮಾಳ್ಪ || ೧೭ ||

ಖೇಚರರು ಭೂಚರರು ವಾರಿನಿ -
ಶಾಚರರೊಳಿವರ ಕರ್ಮಗ -
ಳಾಚರಿಸುವನು ಘನಮಹಿಮ ಪರಮಾಲ್ಪನೋಪಾದಿ ||
ಗೋಚರಿಸು ಬಹುಪ್ರಕಾರಾ
ಲೋಚನೆಯ ಮಾಡಿದರು ಮನಸಿಗೆ
ಕೀಚಕಾರಿ ಪ್ರಿಯ ಕವಿಜನ ಗೇಯ ಮಹರಾಯ || ೧೮ ||

ಒಂದೆ ಗೋತ್ರ ಪ್ರವರ ಸಂಧ್ಯಾ
ವಂದನೆಗಳನು ಮಾಡಿ ಪ್ರಾಂತಕೆ
ತಂದೆ ತನಯರು ಬೇರೆ ತಮ್ಮಯ ಪೆಸರ ಗೊಂಬಂತೆ ||
ಒಂದೆ ದೇಹದೊಳಿದ್ದು ನಿಂದ್ಯಾ -
ನಿಂದ್ಯ ಕರ್ಮವ ಮಾಡಿ ಮಾಡಿಸಿ
ಇಂದಿರೇಶನು ಸರ್ವಜೀವರೊಳೀಶನೆನಿಸುವನು || ೧೯ ||

ಕಿಟ್ಟಗಟ್ಟಿದ ಲೋಹ ಪಾವಕ
ಸುಟ್ಟು ವಿಂಗಡ ಮಾಡುವಂತೆ ಘ
ರಟ ವ್ರೀಹಿಗಳೊಳಿಪ್ಪ ತಂಡುಲ ಕಡೆಗೆ ತೆಗೆವಂತೆ ||

ವಿಠ್ಠಲಾ ಯೆಂದೊಮ್ಮೆ ಮೈಮರೆ -
ದಟ್ಟಹಾಸದಿ ಕರೆಯೆ ದುರಿತ ಗ -
ಳಟ್ಟುಳಿಯ ಬಿಡಿಸಿವನ ತನ್ನೊಳಗಿಟ್ಟು ಸಲಹುವನು || ೨೦ ||

ಜಲಧಿಯೊಳು ಸ್ವೇಚ್ಛಾನುಸಾರದಿ
ಜಲಚರ ಪ್ರಾಣಿಗಳು ತತ್ತತ್
ಸ್ಥಳಗಳಲಿ ಸಂತೋಷ ಪಡುತಲಿ ಸಂಚರಿಸುವಂತೆ ||
ನಳಿನನಾಭನೊಳಬ್ಜಭವ ಮು
ಪ್ಪೊಳಲುರಿಗ ಮೈಗಣ್ಣ ಮೊದಲಾ -
ದ್ಹಲವು ಜೀವರ ಗಣವು ವರ್ತಿಸುತಿಹವು ನಿತ್ಯದಲಿ || ೨೧ ||

ವಾಸುದೇವನು ಒಳಹೊರಗೆ ಆ -
ಭಾಸಕನು ತಾನಾಗಿ ಬಿಂಬ ಪ್ರ -
ಕಾಶಿಸುವ ತದ್ರೂಪ ತನ್ನಾಮದಲಿ ಸರ್ವತ್ರ ||
ಈ ಸಮನ್ವಯ ಯಿಂದೆನಿಪ ಸದು
ಪಾಸನೆಯ ಗೈವವನು ಮೋಕ್ಷಾ -
ನ್ವೇಷಿಗಳೊಳುತ್ತಮನು ಜೀವನ್ಮುಕ್ತನವನಿಯೊಳು || ೨೨ ||

ಭೋಗ್ಯ ವಸ್ತುಗಳೊಳಗೆ ಯೋಗ್ಯಾ -
ಯೋಗ್ಯ ರಸಗಳನರಿತು ಯೋಗ್ಯಾ -
ಯೋಗ್ಯರಲಿ ನೆಲಸಿಪ್ಪ ಹರಿಗೆ ಸಮರ್ಪಿಸನುದಿನದಿ ||
ಭಾಗ್ಯ ಬಡತನ ಬರಲು ಹಿಗ್ಗದೆ
ಕುಗ್ಗಿ ಸೊರಗದೆ ಸದುಭಕುತಿ ವೈ -
ರಾಗ್ಯಗಳನೆ ಮಾಡು ನಿರ್ಭಾಗ್ಯನೆನಿಸದಲೇ || ೨೩ ||

ಸ್ಥಳ ಜಲಾದ್ರಿಗಳಲ್ಲಿ ಜನಿಸುವ
ಫಲಸುಪುಷ್ಪಜಗಂಧರಸ ಶ್ರೀ
ತುಲಸಿ ಮೊದಲಾದಖಿಳ ಪೂಜಾಸಾಧನ ಪದಾರ್ಥ ||
ಹಲವು ಬಗೆಯಿಂದರ್ಪಿಸುತ ಬಾಂ -
ಬೊಳೆಯ ಜನಕಗೆ ನಿತ್ಯ ನಿತ್ಯದಿ
ತಿಳಿವುದಿದು ವ್ಯತಿರೇಕ ಪೂಜೆಗಳೆಂದು ಕೋವಿದರು || ೨೪ ||

ಶ್ರೀಕರನ ಸರ್ವತ್ರದಲಿ ಆವ -
ಲೋಕಿಸುತ ಗುಣರೂಪ ಕ್ರಿಯ ವ್ಯತಿ -
ರೇಕ ತಿಳಿಯದಲನ್ವಯಿಸು ಬಿಂಬನಲಿ ಮರೆಯದಲೆ ||
ಸ್ವೀಕರಿಸುವನು ಕರುಣದಿಂದ ನಿ -
ರಾಕರಿಸದೆ ಕೃಪಾಳು ಭಕ್ತರ
ಶೋಕಗಳ ಪರಿಹರಿಸಿ ಸುಖವಿತ್ತನವರತ ಪೊರೆವ || ೨೫ ||

ಈನಿತು ವ್ಯತಿರೇಕಾನ್ವಯ ಗಳಿಂ -
ದೆನಿಪ ಪೂಜಾ ವಿಧಿಗಳನೆ ತಿಳಿ -
ದನಿಮಿಷೇಶನ ತೃಪ್ತಿ ಪಡಿಸುತಲಿರು ನಿರಂತರದಿ ||
ಘನ ಮಹಿಮ ಕೈಗೊಂಡು ಸ್ಥಿತಿ ಮೃತಿ
ಜನುಮಗಳ ಪರಿಹರಿಸಿ ಸೇವಕ
ಜನರೊಳಿಟ್ಟಾನಂದ ಪಡಿಸುವ ಭಕ್ತವತ್ಸಲನು || ೨೬ ||

ಜಲಜನಾಭನಿಗೆರಡು ಪ್ರತಿಮೆ ಗ
ಳಿಳೆಯೊಳಗೆ ಜಡ ಚೇತನಾತ್ಮಕ
ಚಲದೊಳಿರ್ಬಗೆ ಸ್ತ್ರೀ ಪುರುಷ ಭೇದದಲಿ ಜಡದೊಳಗೆ ||
ತಿಳಿವುದಾಹಿತ ಪ್ರತಿಮೆ ಸಹಜಾ -
ಚಲಗಳೆಂದಿರ್ಬಗೆ ಪ್ರತೀಕದಿ
ಲಲಿತ ಪಂಚತ್ರಯಸುಗೋಳಕವರಿತು ಭಜಿಸುತಿರು || ೨೭ ||

ವಾರಿಜಾಸನ ವಾಯು ವೀಂದ್ರ ಉ -
ಮಾರಮಣ ನಾಕೇಶ ಸ್ಮರಹಂ
ಕಾರಿಕ ಪ್ರಾಣಾದಿಗಳು ಪುರುಷ ಕಳೇವರದಿ ||
ತೋರಿಕೊಳದನಿರುದ್ಧ ದೋಷವಿ -
ದೂರ ನಾರಾಯಣ ರೂಪ ಶ -
ರೀರ ಮಾನಿಗಳಾಗಿ ಭಜಿಸುತ ಸುಖವ ಕೊಡುತಿಹರು || ೨೮ ||

ಸಿರಿ ಸರಸ್ವತಿ ಭಾರತಿ ಸೌ -
ಪರ್ಣಿ ವಾರುಣಿ ಪಾರ್ವತೀ ಮುಖ -
ರಿರುತಿಹರು ಸ್ತ್ರೀಯರೊಳಗಭಿಮಾನಿಗಳು ತಾವೆನಿಸಿ ||

ಅರುಣ ಸ್ವರ್ಣನಿಭಾಂಗ ಶ್ರೀ ಸಂ -
ಕರುಷಣ ಪ್ರದ್ಯುಮ್ನ ರೂಪಗ -
ಳಿರಳು ಹಗಲು ಉಪಾಸನವಗೈವುತಲೆ ಮೋದಿಪರು || ೨೯ ||

ಕೃತ ಪ್ರತೀಕದಿ ಟಂಕಿ ಭಾರ್ಗವ
ಹುತವಹಾನಿಲ ಮುಖ್ಯ ದಿವಿಜರು
ತುತಸಿಕೊಳ್ಳುತಭಿಮಾನಿಗಳು ತಾವಾಗಿ ನೆಲಸಿದ್ದು ||
ಪ್ರತಿದಿವಸ ಶ್ರೀ ತುಳಸಿ ಗಂಧಾ -
ಕ್ಷತೆ ಕುಸುಮ ಫಲ ದೀಪ ಪಂಚಾ
ಮೃತದಿ ಪೂಜಿಪ ಭಕುತರಿಗೆ ಕೊಡುತಿಹರು ಪುರುಷಾರ್ಥ || ೩೦ ||

ನಗಗಳಭಿಮಾನಿಗಳೆನಿಪ ಸುರ -
ರುಗಳು ಸಹಜಾಚಲಗಳಿಗೆ ಮಾ -
ನಿಗಳೆನಿಸಿ ಶ್ರೀ ವಾಸುದೇವನ ಪೂಜಿಸುತಲಿಹರು ||
ಸ್ವಗತ ಭೇದ ವಿವರ್ಜಿತನ ನಾಲ್
ಬಗೆ ಪ್ರತೀಕದಿ ತಿಳಿದು ಪೂಜಿಸೆ
ವಿಗತ ಸಂಸಾರಾಬ್ಧಿ ದಾಟಿಸಿ ಮುಕ್ತರನು ಮಾಳ್ಪ || ೩೧ ||

ಆವಕ್ಷೇತ್ರಕೆ ಪೋದರೇನಿ -
ನ್ನಾವ ತೀರ್ಥದಿ ಮುಳುಗಲೇನಿ -
ನ್ನಾವ ಜಪತಪ ಹೋಮದಾನವ ಮಾಡಿ ಫಲವೇನು ||
ಶ್ರೀ ವರ ಜಗನ್ನಾಥ ವಿಠ್ಠಲನ
ಈ ವಿಧದಿ ಜಂಗಮಸ್ಥಾವರ
ಜೀವರೊಳು ಪರಿಪೂರ್ಣನೆಂದರಿಯದಿಹ ಮಾನವರು || ೩೨ ||

# ೧೨ ನಾಡೀ ಪ್ರಕರಣ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವುದು ||

ವಾಸುದೇವನು ಪ್ರಾಣ ಮುಖ ತ -
ತ್ತ್ವೇಶರಿಂದಲಿ ಸೇವೆ ಕೈಕೊಳು -
ತೀ ಶರೀರದೊಳಿಪ್ಪ ಮೂವತ್ತಾರು ಸಾಹಸ್ರ ||
ಈ ಸುನಾಡಿ ಗಳೊಳಗೆ ಶ್ರೀ ಭೂ -
ಮಿ ಸಮೇತ ವಿಹಾರ ಗೈವ ಪ -
ರೇಶನಮಲ ಸುಮೂರ್ತಿಗಳ ಚಿಂತಿಸುತ ಹಿಗ್ಗುತಿರು || ೧ ||

ಚರಣಗಳೊಳಿಹ ನಾಡಿಗಳು ಹ -
ನ್ನೆರಡು ಸಾವಿರ ಮಧ್ಯ ದೇಹದೊ
ಳಿರುತಿಹವು ಹದಿನಾಲ್ಕು ಬಾಹುಗಳೊಳಗೆ ಈರೆರಡು ||
ಶಿರದೊಳಾರು ಸಾಹಸ್ರ ಚಿಂತಿಸಿ
ಇರಳು ಹಗಲಭಿಮಾನಿ ದಿವಿಜರ -
ನರಿತುಪಾಸನೆ ಗೈವರಿಳೆಯೊಳು ಸ್ವರ್ಗವಾಸಿಗಳು || ೨ ||

ಬೃಹತಿ ನಾಮಕ ವಾಸುದೇವನು
ವಹಿಸಿ ಸ್ತ್ರೀ ಪುರುಷ ದೋಷ ವಿ -
ರಹಿತ ಎಪ್ಪತ್ತೆರಡು ಸಾವಿರ ನಾಡಿಗಳೊಳಿದ್ದು ||
ದ್ರುಹಿಣ ಮೊದಲಾದಮರಗಣ ಸ
ನ್ಮಹಿತ ಸರ್ವ ಪ್ರಾಣಿಗಳ ಮಹಾ
ಮಹಿಮ ಸಂತೈಸುವನು ಸಂತತ ಪರಮ ಕರುಣಾಳು || ೩ ||

ನೂರು ವರ್ಷಕೆ ದಿವಸ ಮೂವ
ತ್ತಾರುಸಾವಿರ ವಹವು ನಾಡಿ ಶ -
ರೀರದೊಳಗೆನಿತಿಹವು ಎಂದರಿತೊಂದು ದಿವಸದಲಿ ||
ಸೂರಿಗಳ ಸತ್ಕರಿಸಿದವ ಪ್ರತಿ
ವಾರದಲಿ ದಂಪತಿಗಳರ್ಚನೆ
ತಾರಚಿಸಿದವ ಸತ್ಯ ಸಂಶಯವಿಲ್ಲ ವೆಂದೆಂದು || ೪ ||

ಚತುರ ವಿಂಶತಿ ತತ್ವಗಳು ತ -
ತ್ವತಿಗಳೆನಿಸುವ ಬ್ರಹ್ಮಮುಖ ದೇ -
ವತೆಗಳನುದಿನ ಪ್ರತಿ ಪ್ರತಿ ನಾಡಿಗಳೊಳಿರುತಿದ್ದು ||
ಚತುರ ದಶ ಲೋಕದೊಳು ಜೀವ
ಪ್ರತತಿಗಳ ಸಂರಕ್ಷಿಸುವ ಶಾ -
ಶ್ವತನ ತತ್ತ್ವಸ್ಥಾನದಲಿ ನೋಡುತಲಿ ಮೋದಿಪರು || ೫ ||

ಸತ್ಯ ಸಂಕಲ್ಪನು ಸದಾ ಎ -
ಪ್ಪತ್ತೆರಡು ಸಾಹಸ್ರದೊಳು ಮೂ -
ವತ್ತು ನಾಲಕುಲಕ್ಷದೈವತ್ತಾರು ಸಾಹಸ್ರ ||
ಚಿತ್ರಕೃತಿ ಒಡಗೂಡಿ ಪರಮ ಸು -
ನಿತ್ಯ ಮಂಗಳ ಮೂರ್ತಿ ಭಕ್ತರ
ತೆತ್ತಿಗನು ತಾನಾಗಿ ಸರ್ವತ್ರದಲಿ ಸಂತೈಪ || ೬ ||

ಮಣಿಗಳೊಳಗಿಹ ಸೂತ್ರದಂದದಿ
ಪ್ರಣವ ಪಾದ್ಯನು ಸರ್ವ ಚೇತನ
ಗಣ ದೊಳಿಗಿದ್ದನವರತ ಸಂತೈಸುವನು ತನ್ನವರ ||
ಪ್ರಣತ ಕಾಮದ ಭಕ್ತ ಚಿಂತಾ
ಮಣಿ ಚಿದಾನಂದೈಕದೇಹನು
ಅಣು ಮಹದ್ಗತನಲ್ಪರೋಪಾದಿಯಲಿ ನೆಲೆಸಿಪ್ಪ || ೭ ||

ಈ ಸುಷುಮ್ನಾದ್ಯಖಿಳ ನಾಡೀ
ಕೋಶ ನಾಭೀ ಮೂಲದಲಿ ವೃಷ -
ಣಾಸನದ ಮಧ್ಯದಲಿ ಇಪ್ಪದು ತುಂದಿನಾಮದಲಿ ||
ಆ ಸರೋಜಾಸನ ಮುಖರು ಮೂ -
ಲೇಶನಾನಂದಾದಿ ಸುಗುಣೋ -
ಪಾಸನೆಯ ಗೈಯುತಲಿ ದೇಹಗಳೊಳಗೆ ಇರುತಿಹರು || ೮ ||

ಸೂರಿಗಳು ಚಿತ್ತೈಸುವದು ಭಾ -
ಗೀರಥಿಯೇ ಮೊದಲಾದ ತೀರ್ಥಗ -
ಳೀರಧಿಕ ಯಪ್ಪತ್ತು ಸಾವಿರ ನಾಡಿಯೊಳಗಿಹವು ||

ಈ ರಹಸ್ಯವನಲ್ಪ ಜನರಿಗೆ
ತೋರಿ ಪೇಳದೆ ನಾಡಿ ನದಿಯೊಳು
ಧೀರರನುದಿನ ಮಜ್ಜನವ ಮಾಡುತಲೆ ಸುಖಿಸುವರು || ೯ ||

ತಿಳಿವದೀ ದೇಹದೊಳಗಿಹ ಎಡ
ಬಲದ ನಾಡಿಗಳೊಳಗೆ ದಿವಿಜರು
ಜಲಜ ಸಂಭವ ವಾಯು ವಾಣ್ಯಾದಿಗಳು ಬಲದಲ್ಲಿ ||
ಯಲರುಣಿಪ ವಿಹಗೇಂದ್ರ ಫಳಿ ಬೆ -
ಟ್ಟಳಿಂದು ಷಣ್ಮಹಿಷಿಯರು ವಾರುಣಿ
ಕುಲಿಶಧರ ಕಾಮಾದಿಗಳು ಯಡಭಾಗದೊಳಗಿಹರು || ೧೦ ||

ಇಕ್ಕೆಲದೊಳಿಹ ನಾಡಿಯೊಳು ದೇ -
ಪಕ್ಕಳಿಂದೊಡನಾಡುತಲಿ ಪೊಂ -
ಬಕ್ಕಿದೇರನು ಜೀವರಧಿಕಾರಾನುಸಾರದಲಿ ||
ತಕ್ಕಸಾಧನವ ಮಾಡಿ ಮಾಡಿಸು -
ತಕ್ಕರದಿ ಸಂತೈಪ ಭಕ್ತರ
ದಕ್ಕ ಗೊಡನಸುರರ್ಗೆ ಸತ್ಪುಣ್ಯಗಳನಪಹರಿಪ || ೧೧ ||

ತುಂದಿವಿಡಿದಾಶಿರದ ಪರಿಯಂ -
ತೊಂದೆ ವ್ಯಾಪಿಸಿ ಇಹದು ತಾವರೆ
ಕಂದ ನಿಭನದರೊಳಗೆ ಇದಕೀರ್ರೈದು ಶಾಖೆಗಳು ||
ಒಂದಧಿಕ ದಶಕರಣಗಳು ಸಂ -
ಬಂಧಗೈದಿಹವಲ್ಲಿ ರವಿ ಶಶಿ
ಸಿಂಧು ನಾಸತ್ಯಾದಿಗಳು ನೆಲೆಗೊಂಡಿಹರು ಸತತ || ೧೨ ||

ಪೊಕ್ಕಳಡಿ ವಿಡಿದೊಂದೆ ನಾಡಿಯು
ಸುಕ್ಕದಲೆ ಧಾರಾಳ ರೂಪದಿ
ಸಿಕ್ಕಿಹದು ನಡುದೇಹದೊಳಗೆ ಸುಷುಮ್ನ ನಾಮದಲಿ ||
ರಕ್ಕಸರನೊಳ ಪೋಗ ಗೊಡದೆ ದಶ
ದಿಕ್ಕನೊಳಗೆ ಸಮೀರ ದೇವನು
ಲೆಕ್ಕಿಸದೆ ಮತ್ತೊಬ್ಬರನು ಸಂಚರಿಪ ದೇಹದೊಳು || ೧೩ ||

ಈನಿತು ನಾಡೀ ಶಾಖೆಗಳು ಈ
ತನುವಿನೊಳಗಿಹವೆಂದು ಏಕಾ
ತ್ಮನು ದ್ವಿಸಪ್ತತಿ ಸಾವಿರಾತ್ಮಕನಾಗಿ ನಾಡಿಯೊಳು ||
ವನಿತೆಯಿಂದೊಡಗೂಡಿ ನಾರಾ -
ಯಣ ದಿವಾರಾತ್ರಿಯೊಳಗೀಪರಿ
ವನಜಜಾಂಡದೊಳಖಿಳ ಜೀವರೊಳಿದ್ದು ಮೋಹಿಸುವ || ೧೪ ||

ದಿನದಿನದಿ ವರ್ಧಿಸುವ ಕುಮುದಾ -
ಪ್ತನ ಮಯೂಖದ ಸೊಬಗ ಗತಲೋ -
ಚನವಲೋಕಿಸಿ ಮೋದಪಡಬಲ್ಲನೆ ನಿರಂತರದಿ ||
ಕುನರಗೀ ಸುಕಥಾಮೃತದ ಭೋ -
ಜನದ ಸುಖ ದೊರಕುವದೆ ಲಕುಮೀ
ಮನೋಹರನ ಸದ್ಗುಣವ ಕೀರ್ತಿಪ ಭಕ್ತಗಲ್ಲದಲೆ || ೧೫ ||

ಈ ತನುವಿನೊಳಗಿಹವು ಓತ
ಪ್ರೋತರೂಪದಿ ನಾಡಿಗಳು ಪುರು -
ಹೂತ ಮುಖರಲ್ಲಿಹರು ತಮ್ಮಿಂದಧಿಕರೊಡ ಗೂಡಿ ||
ಭೀತಿಗೊಳಿಸುತ ದಾನವರ ಸಂ -
ಘಾತನಾಮಕ ಹರಿಯ ಗುಣ ಸಂ -
ಪ್ರೀತಿಯಲಿ ಸದುಪಾಸನೆಯ ಗೈಯುತಲಿ ಮೋದಿಪರು || ೧೬ ||

ಜಲಚ ಕುಕ್ಕುಟ ಖೇಟ ಜೀವರ
ಕಳೇವರಗಳೊಳಗಿದ್ದು ಕಾಣಿಸಿ
ಕೊಳದೆ ತತ್ತದ್ರೂಪ ತನ್ನಾಮದಲಿ ಕರೆಸುತಲಿ ||
ಜಲರುಹೇಕ್ಷಣ ವಿವಿಧ ಕರ್ಮ -
ಗಳ ನಿರಂತರದಿ ಮಾಡಿ ತತ್ತ -
ತ್ಫಲಗಳುಣ್ಣದೆ ಸಂಚರಿಸುವನು ನಿತ್ಯ ಸುಖ ಪೂರ್ಣ || ೧೭ ||

ತಿಳಿದುಪಾಸನೆ ಗೈವುತೀ ಪರಿ
ಮಲಿನನಂತಿರು ದುರ್ಜನರ ಕಂ -
ಗಳಿಗೆ ಗೋಚರಿಸದೆ ವಿಪಶ್ಚಿತರೊಡನೆ ಗರ್ವಿಸದೆ ||

ಮಳೆ ಬಿಸಲು ಹಸಿ ತೃಷಿ ಜಯಾಪಜಯ
ಖಳರ ನಿಂದಾನಿಂದ್ಯ ಭಯಗಳಿ -
ಗಳುಕುದಲೆ ಮದ್ವಾನೆಯಂದದಿ ಚರಿಸುಧರೆಯೊಳಗೆ || ೧೮ ||

ಕಾನನ ಗ್ರಾಮಸ್ಥ ಸರ್ವ
ಪ್ರಾಣಿಗಳು ಪ್ರತಿದಿವಸದಲಿ ಏ -
ನೇನು ಮಾಡುವ ಕರ್ಮಗಳು ಹರಿಪೂಜೆಯಂದರಿದು ||
ಧೇನಿಸುತ ಸದ್ಭಕ್ತಿಯಲಿ ಪವ -
ಮಾನ ಮುಖ ದೇವಾಂತರಾತ್ಮಕ
ಶ್ರೀನಿವಾಸನಿಗರ್ಪಿಸುತ ಮೋದಿಸುತ ನಲಿಯುತಿರು || ೧೯ ||

ನೋಕನೀಯನು ಲೋಕದೊಳು ಶುನಿ
ಸೂಕರಾದಿಗಳೊಳಗೆ ನೆಲಸಿ -
ದ್ವೇಕಮೇವಾದ್ವಿತೀಯ ಬಹುರೂಪಾಹ್ವಯಗಳಿಂದ ||
ತಾಕರೆಸುತೊಳಗಿದ್ದು ತಿಳಿಸದೆ
ಶ್ರೀ ಕಮಲಭವ ಮುಖ್ಯ ಸಕಲದಿ -
ವೌಕಸ ಗಣಾರಾಧ್ಯ ಕೈಕೊಂಡನುದಿನದಿ ಪೊರೆವ || ೨೦ ||

ಈನಿತುಪಾಸನೆ ಗೈವುತಿಹ ಸ
ಜ್ಜನರು ಸಂಸಾರದಲಿ ಪ್ರತಿ ಪ್ರತಿ
ದಿನಗಳಲಿ ಏನೇನು ಮಾಡುವದೆಲ್ಲ ಹರಿಪೂಜೆ ||
ಎನಿಸಿಕೊಂಬವು ಸತ್ಯವೀ ಮಾ -
ತನಲಿ ಸಂಶಯ ಬಡುವ ನರನ -
ಲ್ಪನು ಸುನಿಶ್ಚಯ ಬಾಹ್ಯ ಕರ್ಮವ ಮಾಡಿ ಫಲವೇನು || ೨೧ ||

ಭೋಗ್ಯ ಭೋಕ್ತೃಗಳೊಳಗೆ ಹರಿ ತಾ
ಭೋಗ್ಯ ಭೋಕ್ತನು ಎನಿಸಿ ಯೋಗ್ಯಾ -
ಯೋಗ್ಯ ರಸಗಳ ದೇವದಾನವ ಗಣಕೆ ಉಣಿಸುವನು ||
ಭಾಗ್ಯನಿಧಿ ಭಕ್ತರಿಗೆ ಸದ್ವೈ -
ರಾಗ್ಯ ಭಕ್ತಿ ಜ್ಞಾನವೀವಾ -
ಯೋಗ್ಯರಿಗೆ ದ್ವೇಷಾದಿಗಳ ತನ್ನಲ್ಲಿ ಕೊಡುತ್ತಿಪ್ಪ || ೨೨ ||

ಈ ಚತುರ್ದಶ ಭುವನದೊಳಗೆ ಚ -
ರಾಚರಾತ್ಮಕ ಜೀವರಲ್ಲಿ ವಿ -
ರೋಚನಾತ್ಮಜ ವಂಚಕನು ನೆಲಸಿದ್ದು ದಿನದಿನದಿ ||
ಯಾಚಕನು ಎಂದೆನಿಸಿಕೊಂಬ ಮ -
ರೀಚಿದಮನ ಸುಹಂಸರೂಪಿ ನಿ -
ಷೇಚಕಾಹ್ವಯನಾಗಿ ಜನರಭಿಲಾಷೆ ಪೂರೈಪ || ೨೩ ||

ಅನ್ನದನ್ನಾದನ್ನಮಯ ಸ್ವಯ -
ಮನ್ನ ಬ್ರಹ್ಮಾದ್ಯಖಿಳ ಚೇತನ -
ಕನ್ನ ಕಲ್ಪಕನಾಹನನಿರುದ್ಧಾದಿ ರೂಪದಲಿ ||
ಅನ್ಯರನಪೇಕ್ಷಿಸದೆ ಗುಣಕಾ -
ರುಣ್ಯ ಸಾಗರ ಸೃಷ್ಟಿಸುವನು ಹಿ -
ರಣ್ಯ ಗರ್ಭನೊಳಿದ್ದು ಪಾಲಿಸುವನು ಜಗತ್ರಯವ || ೨೪ ||

ತ್ರಿಪದ ತ್ರಿದಶಾಧ್ಯಕ್ಷ ತ್ರಿಸ್ಥ
ತ್ರಿಪಥಗಾಮಿನಿಪಿತ ತ್ರಿವಿಕ್ರಮ
ಕೃಪಣ ವತ್ಸಲ ಕುವಲಯದಳಶ್ಯಾಮ ನಿಸ್ಸೀಮ ||
ಅಪರಿಮಿತ ಚಿತ್ಸುಖ ಗುಣಾತ್ಮಕ
ವಪುಷ ವೈಕುಠಾದಿ ಲೋಕಾ -
ಧಿಪ ಪತ್ರಯೀ ಮಯ ತನ್ನವರ ನಿಷ್ಕಪಟದಿಂ ಪೊರೆವ || ೨೫ ||

ಲವಣ ಮಿಶ್ರಿತ ಜಲವು ತೋರ್ಪುದು
ಲವಣದೋಪಾದಿಯಲಿ ಜಿಹ್ವೆಗೆ
ವಿವರಗೈಸಲು ಶಕ್ಯವಾಗುವದೇನೊ ನೋಳ್ಪರಿಗೆ ||
ಸ್ವವಶವ್ಯಾಪಿಯನಿಸಿ ಲಕ್ಷ್ಮೀ -
ಧವ ಚರಾಚರದೊಳಗೆ ತುಂಬಿಹ -
ನವಿದಿತನ ಸಾಕಲ್ಯ ಬಲ್ಲವರಾರು ಸುರರೊಳಗೆ || ೨೬ ||

ವ್ಯಾಪ್ಯನಂದದಿ ಸರ್ವಜೀವರೊ -
ಳಿಪ್ಪ ಚಿನ್ಮಯ ಘೋರಭವ ಸಂ -
ತಪ್ಯಮಾನರು ಭಜಿಸ ಭಕುತಿಗಳಿಂದಲಿಹಪರದಿ ||

ಪ್ರಾಪ್ಯನಾಗುವನಪರವರ್ಗಾಗ -
ಳೊಪ್ಪಿಕೊಂಬನು ಭಕ್ತವತ್ಸಲ
ತಪ್ಪಿಸುವ ಜನ್ಮಾದಿ ದೋಷಗಳವರಿಗನವರತ || ೨೭ ||

ಹಲವು ಬಗೆಯಲಿ ಹರಿಯ ಮನದಲಿ
ಒಲಿಸಿ ನಿಲ್ಲಿಸಿ ಏನು ಮಾಡುವ
ಕೆಲಸಗಳನವ ನಂಘ್ರಿ ಪೂಜೆಗಳೆಂದು ನೆನೆವುತಿರು ||
ಹಲಧರಾನುಜ ತಾನೆ ಸರ್ವ
ಸ್ಥಳಗಳಲಿ ನೆಲಸಿದ್ದು ನಿಶ್ಚಂ -
ಚಲ ಭಕುತಿ ಸುಜ್ಞಾನ ಭಾಗ್ಯವ ಕೊಟ್ಟು ಸಂತೈಪ || ೨೮ ||

ದೋಷ ಗಂಧ ವಿದೂರ ನಾನಾ
ವೇಷ ಧಾರಕನೀ ಜಗತ್ರಯ
ಪೋಷಕ ಪುರಾತನ ಪುರುಷ ಪುರುಹೂತ ಮುಖವಿನುತ ||
ಶೇಷವರ ಪರ್ಯಂಕ ಶಯನ ವಿ -
ಭೀಷಣ ಪ್ರಿಯ ವಿಜಯ ಸಖ ಸಂ -
ತೋಷ ಪಡಿಸುವ ಸುಜನರಿಗಿಷ್ಟಾರ್ಥಗಳ ಪೂರೈಸಿ || ೨೯ ||

ಶ್ರೀ ಮಹೀಸೇವಿತ ಪದಾಂಬುಜ
ಭೂಮ ಸದ್ಭಕ್ತ್ಯೇಕ ಲಭ್ಯ ಪಿ -
ತಾಮಹಾದ್ಯಮರಾಸುರಾರ್ಚಿತ ಪಾದ ಪಂಕೇಜ ||
ಹಾಮ ವಾಮನ ರಾಮ ಸಂಸಾ -
ರಾಮಯೌಷಧ ಹೇ ಮಮ ಕುಲ
ಸ್ವಾಮಿ ಸಂತೈಸೆನಲು ಬಂದೊದಗುವನು ಕರುಣಾಳು || ೩೦ ||

ದನುಜ ದಿವಿಜರೊಳಿದ್ದು ಅವರವ -
ರನುಸರಿಸಿ ಕರ್ಮಗಳ ಮಾಳ್ಪನು
ಜನನ ಮರಣಾದ್ಯಖಿಳ ದೋಷವಿದೂರ ಎಮ್ಮೊಡನೆ ||
ಜನಿಸುವನು ಜೀವಿಸುವ ಸಂರ -
ಕ್ಷಣೆಯ ಮಾಡುವನೆಲ್ಲ ಕಾಲದಿ
ಧನವ ಕಾಯ್ದಿಹ ಸರ್ಪನಂತನಿಮಿತ್ತ ಬಾಂಧವನು || ೩೧ ||

ಬಿಸರುಹಾಪ್ತಾಗಸದಿ ತಾನುದ -
ಯಿಸಲು ವೃಕ್ಷಂಗಳ ನೆಳಲು ಪಸ
ರಿಸುವವಿಳಿಯೊಳಗಸ್ತಮಿಸಲಲ್ಲಲ್ಲೆ ಲೀನಿಪವು ||
ಶ್ವಸನ ಮುಖ್ಯಮರಾಂತರಾತ್ಮಕ -
ನೊಶದೊಳಿರುತಿಪ್ಪವು ಜಗತ್ರಯ
ಬಸಿರೊಳಿಂಬಿಟ್ಟಿಲ್ಲ ಕರ್ಮವ ತೋರ್ಪ ನೋಳ್ಪರಿಗೆ || ೩೨ ||

ತ್ರಿಭುವನೈಕಾರಾಧ್ಯ ಲಕ್ಷ್ಮೀ
ಸುಭುಜಯುಗಳಾಲಿಂಗಿತಾಂಗ
ಸ್ವಭು ಸುಖಾತ್ಮ ಸುವರ್ಣ ವರ್ಣ ಸುಪರ್ಣ ವರವಾಹನ ||
ಅಭಯದಾನಂತಾರ್ಕ ಶಶಿಸಂ -
ನಿಭ ನಿರಂಜನ ನಿತ್ಯದಲಿ ತನ -
ಗಭಿನಮಿಸುವರಿಗೀವ ಸರ್ವಾರ್ಥಗಳ ತಡೆಯದಲೆ || ೩೩ ||

ಕವಿಗಳಿಂದಲಿ ತಿಳಿದು ಪ್ರಾತಃ
ಸವನ ಮಾಧ್ಯಂದಿನವು ಸಾಯಮ
ಸವನಗಳು ವಸುರುದ್ರ ಆದಿತ್ಯರೊಳು ರಾಜಿಸುವ ||
ಪವನನೊಳು ಕೃತಿ ಜಯ ಸುಮಾಯಾ
ಧವನ ಮೂರ್ತಿ ತ್ರಯವ ಚಿಂತಿಸಿ
ದಿವಸವೆಂಬಾಹುತಿಗಳಿಂದರ್ಚಿಸುತ ಸುಖಿಸುತಿರು || ೩೪ ||

ಚತುರವಿಂಶತ್ಯಬ್ಧ ವಾಸುದೇ -
ವತೆಗಳೊಳು ಪ್ರದ್ಯುಮ್ನ ನಿಪ್ಪನು
ಚತುಶ್ಚತ್ವಾರಿಂಶತಿಗಳಲಿ ಸಂಕರ್ಷಣಾಖ್ಯ ||
ಹೃತವಹಾಕ್ಷನೊಳಿಹನು ಮಾಯಾ
ಪತಿಯು ಹದಿನಾರಧಿಕ ದ್ವಾತ್ರಿಂ -
ಶತಿ ವರುಷಗಳಲಿಪ್ಪನಾದಿತ್ಯನೊಳು ಸಿತಕಾಯ || ೩೫ ||

ಷೋಡಶೋತ್ತರ ಶತ ವರ್ಷದಲಿ
ಷೋಡಶೋತ್ತರ ಶತ ಸುರೂಪದಿ
ಕ್ರೀಡಿಸುವ ವಸುರುದ್ರ ಆದಿತ್ಯರೊಳು ಸತಿಸಹಿತ ||

ವ್ರೀಡಿವಿಲ್ಲದೆ ಭಜಿಪ ಭಕ್ತರ
ಪೀಡಿಸುವ ದುರಿತೌಘಗಳ ದೂ -
ರೋಡಿಸುತ ಬಳಿಯಲಿ ಬಿಡದೆ ನೆಲಸಿಪ್ಪ ಭಯಹಾರಿ || ೩೬ ||

ಮೂರಧಿಕ ಎಂಭತ್ತು ಸಹಸ್ರೈ -
ನೂರು ಇಪ್ಪತ್ತೆನಿಪ ರೂಪದಿ
ತೋರುತಿಪ್ಪ ದಿವಾನಿಶಾಧಿಪರೊಳಗೆ ನಿತ್ಯದಲಿ ||
ಭಾರತೀ ಪ್ರಾಣರೊಳಗಿದ್ದು ನಿ -
ವಾರಿಸುತ ಭಕ್ತರ ದುರಿತ ಹಿಂ -
ಕಾರ ನಿಧನ ಪ್ರಥಮ ರೂಪದಿ ಪಿತೃಗಳನೆ ಪೊರೆವ || ೩೭ ||

ಬುದ್ಧಿ ಪೂರ್ವಕ ಉತ್ತಮೋತ್ತಮ
ಶುದ್ಧ ಊರ್ಣಾಂಬರವ ಪಂಕದೊ
ಳದ್ದಿ ತೆಗೆಯಲು ಲೇಪವಾಗುವದೇ ಪರೀಕ್ಷಿಸಲು ||
ಪದ್ಮನಾಭನು ಸರ್ವಜೀವರೊ -
ಳಿದ್ದರೇನು ಗುಣತ್ರಯಗಳಿಂ
ಬದ್ಧನಾಗುವನೇನೋ ನಿತ್ಯ ಸುಖಾತ್ಮಚಿನ್ಮಯನು || ೩೮ ||

ಸಕಲ ದೋಷ ವಿದೂರ ಶಶಿ ಪಾ -
ವಕ ಸಹಸ್ರಾನಂತ ಸೂರ್ಯ
ಪ್ರಖರ ಸನ್ನಿಭಗಾತ್ರ ಲಕುಮೀಕಳತ್ರ ಸುರಮಿತ್ರ ||
ವಿಖನಸಾಂಡದೊಳಿಪ್ಪ ಬ್ರಹ್ಮಾ -
ದ್ಯಖಿಳ ಚೇತನ ಗಣಕೆ ತಾನೆ
ಸಖನೆನಿಸಿಕೊಂಡಕುಟಿಲಾತ್ಮಕನಿಪ್ಪನವರಂತೆ || ೩೯ ||

ದೇಶ ಭೇದಗಳಲ್ಲಿ ಇಪ್ಪಾ -
ಕಾಶದೋಪಾದಿಯಲಿ ಚೇತನ
ರಾಶಿಯೊಳು ನೆಲಸಿಪ್ಪನವ್ಯವಧಾನದಲಿ ನಿರುತ ||
ಶ್ರೀ ಸಹಿತ ಸರ್ವತ್ರ ನಿರವಾ -
ಕಾಶ ಕೊಡುವಂದದಲಿ ಕೊಡುತ ನಿ -
ರಾಶಿಯಲಿ ಸರ್ವಾಂತರಾತ್ಮಕ ಶೋಭಿಸುವ ಸುಖದ || ೪೦ ||

ಶ್ರೀವಿರಿಂಚಾದ್ಯಮರಗಣಾ ಸಂ -
ಸೇವಿತಾಂಘ್ರಿ ಸರೋಜ ಈ ಜಡ
ಜೀವರಾಶಿಗಳೊಳ ಹೊರಗೆ ನೆಲಸಿದ್ದು ನಿತ್ಯದಲಿ ||
ಸಾವಕಾಶನು ಎನಿಸಿ ತನ್ನ ಕ
ಳೇವರದಲಿಂಬಿಟ್ಟು ಸಲಹುವ
ದೇವ ದೇವಕೀ ರಮಣಾ ದಾನವ ಹರಣಾ ಜಿತಮರಣಾ || ೪೧ ||

ಮಾಸ ಒಂದಕೆ ಪ್ರತಿ ದಿವಸದಲಿ
ಶ್ವಾಸಗಳ ಪವಷ್ಟಚತ್ವಾ -
ರಿಂಶತಿ ಸಹಸ್ರಾಧಿಕಾರು ಸುಲಕ್ಷ ಸಂಖೆಯಲಿ ||
ಹಂಸ ನಾಮಕ ಹರಿಯ ಷೋಡಶ
ಈ ಶತಾಬ್ದದಿ ಭಜಿಸೆ ಒಲಿವ ದ -
ಯಾ ಸಮುದ್ರ ಕುಚೇಲಗೊಲಿದಂದದಲಿ ದಿನದಿನದಿ || ೪೨ ||

ಸ್ಥೂಲ ದೇಹದೊಳಿದ್ದು, ವರ್ಷಕೆ
ಏಳಧಿಕ ಎಪ್ಪತ್ತು ಲಕ್ಷದ
ಮೇಲೆ ಎಪ್ಪತ್ತಾರು ಸಾವಿರ ಶ್ವಾಸ ಜಪಗಳನು ||
ಗಾಳಿದೇವನು ಕರುಣದಲಿ ಈ -
ರೇಳು ಲೋಕದೊಳುಳ್ಳ ಚೇತನ
ಜಾಲದೊಳು ಮಾಡುವನು ತ್ರಿಜಗ ದ್ವ್ಯಾಪ್ತ ಪರಮಾಪ್ತ || ೪೩ ||

ಈರೆರಡು ದೇಹಗಳೊಳಿದ್ದು ಸ -
ಮೀರ ದೇವನು ಶ್ವಾಸ ಜಪ ನಾ -
ನೂರಧಿಕವಾಗಿಪ್ಪ ಎಂಭತ್ತಾರು ಸಾಹಸ್ರ ||
ತಾ ರಚಿಸುವನು ದಿವಸ ಒಂದಕೆ
ಮೂರು ವಿಧ ಜೀವರೊಳಿದ್ದು ಖ -
ರಾರಿ ಕರುಣಾಬಲವಿದೆಂತುಂಟೋ ಪವನರಾಯನೊಳು || ೪೪ ||

ಶ್ರೀಧರ ಜಗನ್ನಾಥ ವಿಠಲನು
ತಾ ದಯದಿ ವದನದೊಳು ನುಡಿದೊ -
ಪಾದಿಯಲಿ ನಾ ನುಡಿದೆನಲ್ಲದೆ ಕೇಳಿ ಬುಧ ಜನರು ||

ಸಾಧುಲಿಂಗ ಪ್ರದರ್ಶಕರು ನಿ -
ಷೇಧಿಸಿದರೇನಹುದು ಎನ್ನಪ -
ರಾಧವೇನಿದರೊಳಗೆ ಪೇಳ್ವದು ತಿಳಿದು ಕೋವಿದರು || ೪೫ ||

# ೧೩. ನಾಮಸ್ಮರಣೆ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಮಕ್ಕಳಾಡಿಸುವಾಗ ಮುದದಿಯೊ -
ಳಕ್ಕರದಿ ನಲಿವಾಗ ಹಯಪ -
ಲ್ಲಕ್ಕಿ ಗಜ ಮೊದಲಾದ ವಾಹನಗಳೇರಿ ಮೆರೆವಾಗ ||
ಬಿಕ್ಕುವಾಗಾಕಳಿಸುತಲಿ ದೇ -
ವಕ್ಕಿ ತನಯನ ಸ್ಮರಿಸುತಿಹ ನರ
ಸಿಕ್ಕುವನೆ ಯಮದೂತರಿಗೆ ಆವಲ್ಲಿ ನೋಡಿದರು || ೧ ||

ಸರಿತ್ಪ್ರವಹಗಳಲ್ಲಿ ದಿವ್ಯಾಂ -
ಬರದಿ ಪತ್ರಾದಿಯಲಿ ಹರ್ಷಾ -
ಮರುಷ ವಿಸ್ಮೃತಿಯಿಂದಲಾಗಲಿ ಒಮ್ಮೆ ಬಾಯ್ದೆರದು ||
ಹರಿ ಹರೀ ಹರಿ ಎಂಬ ಎರಡ -
ಕ್ಷರ ನುಡಿದ ಮಾತ್ರದಲಿ ದುರಿತಗ -
ಳಿರದೆ ಪೋಪವು ತೂಲ ರಾಶಿಯೊಳನಲಪೊಕ್ಕಂತೆ || ೨ ||

ಮಲಗುವಾಗಲು ಏಳುವಾಗಲು
ಕುಳಿತು ಮಾತಾಡುತಲೆ ಮನೆಯೊಳು
ಕೆಲಸಗಳ ಮಾಡುತಲೆ ಮೈದೊಳುವಾಗ ಮೆಲುವಾಗ ||
ಕಲುಷದೂರನ ಸಕಲಠಾವಿಲಿ
ತಿಳಿಯೆ ತತ್ತನ್ನಾಮ ರೂಪವ
ಬಳಿಯೊಳಿಪ್ಪನು ಒಂದರಕ್ಷಣ ಬಿಟ್ಟಗಲನವರ || ೩ ||

ಆವ ಕುಲದವ ನಾದಡೇನಿ -
ನ್ನಾವ ದೇಶದೊಳಿದ್ದಡೇನಿ -
ನ್ನಾವ ಕರ್ಮವ ಮಾಡಲೇನಿನ್ನಾವ ಕಾಲದಲಿ ||
ಶ್ರೀವರನು ಸರ್ವತ್ರದಲಿ ಸಂ -
ಭಾವಿಸುತ ಪೂಜಿಸುತ ಮೊದಿಪ
ಕೊವಿದರಿಗುಂಟೇನೋ ಭವದುಃಖಾದಿ ದೋಷಗಳು || ೪ ||

ವಾಸುದೇವನ ಗುಣ ಸಮುದ್ರ ದೊ
ಳೀಸಬಲ್ಲ ಭವ ಸಮುದ್ರಾ -
ಯಾಸವಿಲ್ಲದೆ ದಾಟುವನು ಶೀಘ್ರದಲಿ ಜಗದೊಳಗೆ ||
ಬೇಸರದೆ ದುರ್ವಿಷಯಗಳನಭಿ -
ಲಾಷೆಯಲಿ ಬಳಲುವವ ನಾನಾ
ಕ್ಲೇಶಗಳನನುಭವಿಪ ಭಕ್ತಿಸುಮಾರ್ಗ ಕಾಣದಲೆ || ೫ ||

ಸ್ನಾನ ಜಪ ದೇವಾರ್ಚನೆಯು ವ್ಯಾ -
ಖ್ಯಾನ ಭಾರತಮುಖ ಮಹೋಪಪು -
ರಾಣ ಕಥೆಗಳ ಪೇಳಿ ಕೇಳಿದರೇನು ದಿನದಿನದಿ ||
ಜ್ಞಾನಕರ್ಮೇಂದ್ರಿಯಗಳಿಂದೇ -
ನೇನು ಮಾಡುವ ಕರ್ಮಗಳು ಲಕು -
ಮೀನಿವಾಸನ ಪೂಜೆಯಂದರ್ಪಿಸದ ಮಾನವನು || ೬ ||

ದೇವಗಂಗೆಯೊಳುಳ್ಳವಗೆ ದುರಿ -
ತಾವಳಿಗಳುಂಟೆ ವಿಚಾರಿಸೆ
ಪಾಪುಗಳ ಭಯಉುಂಟೆ ವಿಹಗಾಧಿಪನ ಮಂದಿರದಿ ||
ಜೀವ ಕರ್ತೃತ್ವವನು ಮರೆದು ಪ -
ರಾವರೇಶನೇ ಕರ್ತೃ ಎಂದರಿ
ದಾವ ಕರ್ಮವ ಮಾಡಿದರು ಲೇಪಿಸವು ಕರ್ಮಗಳು || ೭ ||

ಏನು ಮಾಡುವ ಪುಣ್ಯ ಪಾಪಗ -
ಳಾನೆ ಮಾಡುವೆನೆಂಬವಾಧಮನು
ಹೀನ ಕರ್ಮಕೆ ಪಾತ್ರನಾ ಪುಣ್ಯಕ್ಕೆ ಹರಿಯುಂಬ ||

ಮಾನವನು ಮಧ್ಯಮನು ದ್ವಂದ್ವಕೆ
ಶ್ರೀನಿವಾಸನೆ ಕರ್ತನೆಂದು ಸ -
ದಾನುರಾಗದಿ ನೆನೆದು ಸುಖಿಸುವನೆ ನರೋತ್ತಮನೂ || ೮ ||

ಈ ಉಪಾಸನೆ ಗೈವರಿಳೆಯೊಳು
ದೇವತೆಗಳಲ್ಲದಲೆ ನರರ -
ಲ್ಲಾವ ಬಗೆಯಿಂದಾದರಿವರರ್ಚನೆಯು ಹರಿಪೂಜೆ ||
ಕೇವಲ ಪ್ರತಿಮೆಗಳೆನಿಪರು ರ -
ಮಾವಿನೋದಿಗೆ ಇವರನುಗ್ರಹವೇ
ದೇವರನುಗ್ರಹ ವೆನಿಸುವುದು ಮುಕ್ತಿಯೋಗ್ಯರಿಗೆ || ೯ ||

ತನುವೆ ನಾನೆಂಬುವವ ಸತಿಸುತ
ಮನೆ ಧನಾದಿಗಳೆನ್ನದೆಂಬುವ
ದ್ಯುನದಿ ಮೊದಲಾದವುಗಳೆ ಸತ್ತೀರ್ಥ ಎಂಬುವನು ||
ಅನಲ ಲೋಹಾದಿ ಪ್ರತೀಕಾ -
ರ್ಚನವೇ ದೇವರ ಪೂಜೆಸುಜನರೇ
ಮನುಜರಹುದೆಂಬುವನು ಗೋಖರನೆನಿಪ ಬುಧರಿಂದ || ೧೦ ||

ಅನಲ ಸೋಮಾರ್ಕೇಂದು ತಾರಾ -
ವನಿ ಸುರಾಪಗ ಮುಖ್ಯ ತೀರ್ಥಗ -
ಳನಿಲ ಗಗನ ಮನಾದಿ ಇಂದ್ರಿಯಗಳಿಗೆ ಅಭಿಮಾನಿ ||
ಎನಿಪ ಸುರರು ವಿಪಶ್ಚಿತರು ಸ -
ನ್ಮನದಿ ಭಜಿಸದಲಿಪ್ಪವರ ಪಾ -
ವನವ ಮಾಡರು ತಮ್ಮ ಪೂಜೆಯ ಮಾಡಿದರು ಸರಿಯೆ || ೧೧ ||

ಕೆಂಡಗಾಣದೆ ಮಟ್ಟಿದರು ಸರಿ
ಕಂಡು ಮುಟ್ಟಲು ದಹಿಸದಿಪ್ಪದೆ
ಪುಂಡರೀಕದಳಾಯತಾಕ್ಷನ ವಿಮಲ ಪದಪದ್ಮ ||
ಬಂಡುಣಿಗಳೆಂದೆನಿಪ ಭಕ್ತರ
ಹಿಂಡು ನೋಡಿದ ಮಾತ್ರದಲಿ ತನು
ದಿಂಡು ಗೆಡಹಿದ ನರನ ಪಾವನ ಮಾಳ್ಪರಾಕ್ಷಣದಿ || ೧೨ ||

ಈ ನಿಮಿತ್ತ ಪುನಃ ಪುನಃ ಸು -
ಜ್ಞಾನಿಗಳ ಸಹವಾಸ ಮಾಡು ಕು -
ಮಾನವರ ಕೂಡಾಡದಿರು ಲೌಕಿಕಕೆ ಮರುಳಾಗಿ ||
ವೈನತೇಯಾಂಸಗನ ಸರ್ವ
ಸ್ಥಾನದಲಿ ತನ್ನಾಮರೂಪವ
ಧೇನಿಸುತ ಸಂಚರಿಸು ಇತರಾಲೋಚನೆಯ ಬಿಟ್ಟು || ೧೩ ||

ಈ ನಳಿನಜಾಂಡದೊಳು ಸರ್ವ -
ಪ್ರಾಣಿಗಳೊಳಿದ್ದನವರತ ವಿ -
ವಿಜ್ಞಾನಮಯ ವ್ಯಾಪಾರಗಳ ಮಾಡುವನು ತಿಳಿಸದಲೆ ||
ಏನು ಕಾಣದೆ ಸಕಲ ಕರ್ಮಗ -
ಳಾನೆ ಮಾಡುವೆನೆಂಬ ನರ ಕು -
ಯೋನಿ ಯೈದುವ ಕರ್ತುಹರಿ ಎಂಬುವನೆ ಮುಕ್ತನಹ || ೧೪ ||

ಕಲಿಮಲಾಪಹಳೆನಿಸುತಿಹ ಬಾಂ -
ಬೊಳೆಯೊಳಗೆ ಸಂಚರಿಸಿ ಬದುಕುವ
ಜಲಚರ ಪ್ರಾಣಿಗಳು ಬಲ್ಲವೆ ತೀರ್ಥ ಮಹಿಮೆಯನು ||
ಹಲವು ಬಗೆಯಲಿ ಹರಿಯ ಕರುಣಾ
ಬಲದಿ ಬಲ್ಲಿದರಾದ ಬ್ರಹ್ಮಾ -
ನಿಲ ವಿಪೇಶಾದ್ಯಮರರರಿಯರನಂತನಮಲಗುಣ || ೧೫ ||

ಶ್ರೀ ಲಕುಮಿ ವಲ್ಲಭನು ಹೃತ್ಕೀ -
ಲಾಲಜದೊಳಿದ್ದಖಿಳ ಚೇತನ
ಜಾಲವನು ಮೋಹಿಸುವ ತ್ರಿಗುಣಾದಿ ಬದ್ಧರನ ಮಾಡಿ ||
ಸ್ಥೂಲಕರ್ಮಾದಿ ರತರ ಮಾಡಿ ಸು -
ಲೀಲೆಗಳ ತಿಳಿಸದಲೆ ಭವದಿ ಕು -
ಲಾಲ ಚಕ್ರದಿ ತೆರದಿ ತಿರುಗಿಸುತಿಹನು ಮಾನವರ || ೧೬ ||

ವೇದ ಶಾಸ್ತ್ರ ವಿಚಾರಗೈದು ನಿ
ಷೇಧ ಕರ್ಮವ ತೊರೆದು ನಿತ್ಯದಿ
ಸಾಧುಕರ್ಮವ ಮಾಳ್ಪರಿಗೆ ಸ್ವರ್ಗದಲಿ ಸುಖವೀವ ||

ಐದಿಸುವ ಪಾಪಿಗಳ ನಿರಯವ
ಖೇದ ಮೋದ ಮನುಷ್ಯರಿಗೆ ದು
ರ್ವಾದಿಗಳಿಗಂಧಂ ತಮದಿ ಸುಖದುಃಖಗಳನುಣಿಸುವ || ೧೭ ||

ನಿರ್ಗುಣೋಪಾಸಕಗೆ ಗುಣಸಂ -
ಸರ್ಗದೋಷಗಳೀಯದಲಪ
ವರ್ಗದಲಿ ಸುಖವಿತ್ತು ಪಾಲಿಸುವ ಕೃಪಾಸಾಂದ್ರ ||
ದುರ್ಗಮನು ಎಂದೆನಿಪ ತ್ರೈವಿ -
ದ್ಯರ್ಗೆ ತ್ರಿಗುಣಾತೀತ ಸಂತತ
ಸ್ವರ್ಗ ಭೂ ನರಕದಲಿ ಸಂಚಾರವನೆ ಮಾಡಿಸುವ || ೧೮ ||

ಮೂವರೊಳಗಿದ್ದರೂ ಸರಿಯೆ ಸುಖ
ನೋವುಗಳು ಸಂಬಂಧವಾಗವು
ಪಾವನಕೆ ಪಾವನ ಪರಾತ್ಪರ ಪೂರ್ಣ ಸುಖವನಧಿ ||
ಈ ವನರುಹಭವಾಂಡದೊಳು ಸ್ವಕ -
ಳೇವರ ತದಾಕಾರ ಮಾಡಿಪ -
ರಾವರೇಶ ಚರಾಚರಾತ್ಮಕ ಲೋಕಗಳ ಪೊರೆವ || ೧೯ ||

ಅನಿಮಿತ್ತ ನಿರಂತರ ಸ್ವಾ -
ಧೀನಕರ್ತೃತ್ವವನು ಮರದೇ -
ನೇನು ಮಾಡುವುದೆಲ್ಲ ಹರಿ ಒಳಹೊರಗೆ ನೆಲಸಿದ್ದು||
ತಾನೆ ಮಾಡುವನೆಂದರಿದು ಮ
ದ್ದಾನೆಯಂದದಿ ಸಂಚರಿಸು ಸುವ -
ಮಾನವಂದಿತ ಒಂದರೆಕ್ಷಣ ಬಿಟ್ಟಗಲ ನಿನ್ನ || ೨೦ ||

ಹಲವು ಕರ್ಮವ ಮಾಡಿ ದೇಹವ
ಬಳಲಿಸದೆ ದಿನದಿನದಿ ಹೃದಯಾಕ -
ಮಲ ಸದನದಿ ವಿರಾಜಿಸುವ ಹರಿಮೂರ್ತಿಯನೆ ಭಜಿಸು ||
ತಿಳಿಯದೀ ಪೂಜಾಪ್ರಕರಣವ
ಫಲ ಸುಪುಷ್ಪಾಗ್ರ್ಯೋದಕ ಶ್ರೀ
ತುಳಸಿದಳವರ್ಪಿಸಲು ಒಪ್ಪನು ವಾಸುದೇವ ಸದಾ || ೨೧ ||

ಧರಣಿಯಲ್ಲಿ ನಾರಾಯಣನು ಉದಕದಿ
ತುರಿಯನಾಮಕನಗ್ನಿಯೊಳು ಸಂ -
ಕರ್ಷಣಾಖ್ಯಯ ವಾಯುಗ ಪ್ರದ್ಯುಮ್ನನನಿರುದ್ಧ ||
ಇರುತಿಹನಾಕಾಶದೊಳು ಮೂ -
ರೆರಡುರೂಪವ ಧರಿಸಿ ಭೂತಗ
ಕರೆಸುವನು ತನ್ನಾಮರೂಪದಿ ಪ್ರಜರ ಸಂತೈಪ || ೨೨ ||

ಘನಗತನು ತಾನಾಗಿ ನಾರಾಯ -
ಣನು ತನ್ನಾಮದಲಿ ಕರೆಸುವ
ವನದ ಗರ್ಭೋದಕದಿ ನೆಲಸಿಹ ವಾಸುದೇವಾಖ್ಯ ||
ಧ್ವನಿಸಿಡಿಲು ಸಂಕರ್ಷಣನು ಮಿಂ -
ಚಿನೊಳು ಶ್ರೀ ಪ್ರದ್ಯುಮ್ನ ವೃಷ್ಟಿಯ
ಹನಿಗಳೊಳಗನಿರುದ್ಧನಿಪ್ಪನು ವರ್ಷವೆಂದೆನಿಸಿ || ೨೩ ||

ಗೃಹ ಕುಟುಂಬ ಧನಾದಿಗಳ ಸ -
ನ್ನಹಗಳುಳ್ಳವರಾಗಿ ವಿಹಿತಾ -
ವಿಹಿತ ಧರ್ಮ ಸುಕರ್ಮಗಳ ತಿಳಿಯದಲೆ ನಿತ್ಯದಲಿ ||
ಅಹರ ಮೈಥುನ ನಿದ್ರೆಗೊಳಗಾ -
ಗಿಹರು ಸರ್ವ ಪ್ರಾಣಿಗಳು ಹೃ -
ದ್ಗುಹ ನಿವಾಸಿಯನರಿಯದಲೆ ಭವದೊಳಗೆ ತೊಳಲುವರು || ೨೪ ||

ಜಡಜಸಂಭವ ಖಗ ಫಣಿಪ ಕೆಂ -
ಜಡೆಯರಿಂದೊಡಗೂಡಿ ರಾಜಿಸು -
ತಡವಿಯೊಳಗಿಪ್ಪನು ಸದಾ ಗೋಜಾದ್ರಿಜನು ಎನಿಸಿ ||
ಉಡುಪನಿಂದಭಿ[1]ವೃದ್ಧಿಗಳ ತಾ
ಕೊಡುತ ಪಕ್ಷಿ ಮೃಗಾಹಿಗಳ ಕಾ -
ರೊಡಲ ಕಾವನು ತತ್ತದಾಖ್ಯಯನಾಗಿ ಜೀವರನು || ೨೫ ||

ಅಪರಿಮಿತ ಸನ್ಮಹಿಮ ನರಹರಿ
ವಿಪಿನದೊಳು ಸಂತೈಸುವನು ಕಾ -
ಶ್ಯಪಿಯನಳಿದವ ಸ್ಥಳಗಳಲಿ ಸರ್ವತ್ರ ಕೇಶವನು ||

ಖಪತಿ ಗಗನದಿ ಜಲಗಳಲಿ ಮಹಾ
ಶಫರನಾಮಕ ಭಕ್ತರನ ನಿ
ಷ್ಕಪಟದಿಂದಲಿ ಸಲಹುವನು ಕರುಣಾಳು ದಿನದಿನದಿ || ೨೬ ||

ಕಾರಣಾಂತರ್ಯಾಮಿ ಸ್ಥೂಲವ -
ತಾರ ವ್ಯಾಪ್ತಾಂಶಾದಿ ರೂಪಕೆ
ಸಾರ ಶುಭ ಪ್ರವಿವಿಕ್ತಾನಂದ ಸ್ಥೂಲ ನಿಸ್ಸಾರ ||
ಆರು ರಸಗಳನರ್ಪಿಸಲ್ಪರಿ -
ಗೀ ರಹಸ್ಯವ ಪೇಳದೆ ಸದಾ -
ಪಾರಮಹಿಮನ ರೂಪಗಳ ನೆನೆನೆನೆದು ಸುಖಿಸುತಿರು || ೨೭ ||

ಜಲಗತುಡಪನ ವಿಮಲ ಬಿಂಬವ
ಮೆಲುವೆನೆಂದತಿಹರುಷದಿಂದಲಿ
ಜಲಚರ ಪ್ರಾಣಿಗಳು ನಿತ್ಯದಿ ಎತ್ನಗೈವಂತೆ ||
ಹಲಧರಾನುಜ ಭೋಗ್ಯ ರಸಗಳ
ನೆಲೆಯನರಿಯದೆ ಪೂಜಿಸುತ ಹಂ -
ಬಲಿಸುವರು ಪುರುಷಾರ್ಥಗಳ ಸತ್ಕುಲಜರಾವೆಂದು || ೨೮ ||

ದೇವ ಋಷಿ ಗಂಧರ್ವ ಪಿತೃ ನರ
ದೇವ ಮಾನವ ದನುಜ ಗೋಖ -
ರಾವಿ ಮೊದಲಾದಖಿಲ ಚೇತನ ಭೋಗ್ಯ ರಸಗಳನೂ ||
ಯಾವದವಯವಗಳೊಳಗಿದ್ದು ರ -
ಮಾವರನು ಸ್ವೀಕರಿಪ ಯಾವ -
ಜ್ಜೀವಗಣಕೆ ಸ್ವಭೋಗ್ಯ ರಸಗಳನೀವನೆಂದೆಂದು || ೨೯ ||

ಒರಟು ಬುದ್ಧಿಯ ಬಿಟ್ಟು ಲೌಕಿಕ
ಹರಟೆಗಳನೀಡಾಡಿ ಕಾಂಚನ
ಪರಟೆ ಲೋಷ್ಟಾದಿಗಳು ಸಮವೆಂದರಿದು ನಿತ್ಯದಲಿ ||
ಪುರುಟಗರ್ಭಾಂಡೋದರನು ಸ -
ತ್ಪುರುಟನೆಂದೆನಿಸಲ್ಕರೊಳಗಿ -
ದ್ದುರುಟು ಕರ್ಮವ ಮಾಳ್ಪನೆಂದಡಿಗಡಿಗೆ ನೆನೆಯುತಿರು || ೩೦ ||

ಭೂತಳದಿ ಜನರುಗಳು ಮರ್ಮದ
ಮಾತುಗಳನಾಡಿದರೆ ಸಹಿಸದೆ
ಘಾತಿಸುವರತಿಕೋಪದಿಂದಲಿ ಎಚ್ಚರಿಪ ತೆರದಿ ||
ಮಾತುಳಾಂತಕ ಜಾರ ಹೇಸವ -
ನೀತ ಚೋರನೆ ಎನಲು ತನ್ನ ನಿ -
ಕೇತನದೊಳಿಟ್ಟವರ ಸಂತೈಸುವನು ಕರುಣಾಳು || ೩೧ ||

ಹರಿಕಥಾಮೃತ ಸಾರವಿದು ಸಂ -
ತರು ಸದಾ ಚಿತ್ತೈಸುವುದು ನಿ -
ಷ್ಠುರಿಗಳಿಗೆ ಪಿಶುನರಿಗಯೋಗ್ಯರಿಗಿದನು ಪೇಳದಲೆ ||
ನಿರತಸದ್ಭಕ್ತಿಯಲಿ ಭಗವ
ಚ್ಚರಿತೆಗಳ ಕೊಂಡಾಡಿ ಹಿಗ್ಗುವ
ಪರಮ ಭಗವದ್ದಾಸರಿಗೆ ತಿಳಿಸುವದು ಈ ರಹಸ್ಯ || ೩೨ ||

ಸತ್ಯ ಸಂಕಲ್ಪನು ಸದಾ ಏ -
ನಿತ್ತುದೆ ಪುರುಷಾರ್ಥವೆಂದರಿ -
ದತ್ಯಧಿಕ ಸಂತೋಷದಲಿ ನೆನೆವುತ್ತ ಭುಂಜಿಪದು ||
ನಿತ್ಯ ಸುಖ ಸಂಪೂರ್ಣ ಪರಮ ಸು -
ಹೃತ್ತಮ ಜಗನ್ನಾಥ ವಿಠ್ಠಲ
ಬತ್ತಿಸಿ ಭವಾಂಬುಧಿಯ ಚಿತ್ಸುಖ ವ್ಯಕ್ತಿ ಕೊಡುತಿಪ್ಪ || ೩೩ ||

# ೧೪ ಪಿತೃಗಣ ವಿಚಾರ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ಪೇಳುವೆ ||
ಪರಮ ಭಗವದ್ಭಕ್ತರಿದನಾದರದಿ ಕೇಳುವುದು ||

ಕೃತಿರಮಣ ಪ್ರದ್ಯುಮ್ನ ವಸುದೇ
ವತೆಗಳಾಹಂಕಾರತ್ರಯಗಳೊಳು
ಚತುರವಿಂಶತಿ ರೂಪದಿಂದಲಿ ಭೋಜ್ಯನೆನಿಸುವನು ||

ಹುತವಹಾಕ್ಷಾಂತರ್ಗತ ಜಯಾ
ಪತಿಯು ತಾನೇ ಮೂರಧಿಕ ತ್ರಿಂ
ಶತಿ ಸುರೂಪದಿ ಭೋಕ್ತ ಎನಿಸುವ ಭೋಕ್ತ್ಯಗಳೊಳಗಿದ್ದು || ೧ ||

ಆರಧಿಕ ಮೂವತ್ತು ರೂಪದಿ
ಪಾರಿಜಾಪ್ತನೊಳಿರುತಿಹನು ಮಾ -
ಯಾರಮಣ ಶ್ರೀವಾಸುದೇವನು ಕಾಲನಾಮದಲಿ ||
ಮೂರು ವಿಧ ಪಿತೃಗಳೊಳು ವಸು ತ್ರಿಪು -
ರಾರಿಯಾದಿತ್ಯಗನಿರುದ್ಧನು
ತೋರಿಕೊಳ್ಳದೆ ಕರ್ತೃಕರ್ಮ ಕ್ರಿಯನೆನಿಸಿಕೊಂಬ || ೨ ||

ಸ್ವಪತ ನಾರಾಯಣನು ತಾ ಷ -
ಣ್ಮಾಪತಿ ನಾಮದಲಿ ಕರೆಸುತಲಿ
ಶಿವ ದಿವಾಕರ ಕರ್ತೃ ಕರ್ಮ ಕ್ರಿಯಗಳೊಳಿದ್ದು ||
ನೆವನವಿಲ್ಲದೆ ನಿತ್ಯದಲಿ ತ -
ನ್ನವರು ಮಾಡುವ ಸೇವೆ ಕೈ ಕೊಂ -
ಡವರ ಪಿತೃಗಳಿಗೀವನಂತಾನಂತ ಸುಖಗಳನು || ೩ ||

ತಂತುಪಟದಂದದಲಿ ಲಕುಮೀ
ಕಾಂತ ಪಂಚಾತ್ಮಕ ನೆನಿಸಿ ವಸು
ಕಂತುಹರ ರವಿ ಕರ್ತೃಗಳೊಳಿದ್ದನನವರತ ತನ್ನ ||
ಚಿಂತಿಸುವ ಸಂತರನು ಗುರು ಮ -
ಧ್ವಾಂತರಾತ್ಮಕ ಸಂತೈಸುವನು
ಸಂತತಖಿಲಾರ್ಥಗಳ ಪಾಲಿಸಿ ಇಹಪರಂಗಳಲಿ || ೪ ||

ತಂದೆ ತಾಯ್ಗಳ ಪ್ರೀತಿಗೋಸುಗ
ನಿಂದ್ಯ ಕರ್ಮವ ತೊರದು ವಿಹಿತಗ -
ಳೊಂದು ಬಿಡದೆ ಸಾಂಗ ಕರ್ಮಗಳಾಚರಿಸುವವರು ||
ವಂದನಿಯರಾಗಿಳೆಯೊಳಗೆ ದೈ -
ನಂದಿನದಿ ದೈಹಿಕ ದಹಿಕ ಸುಖ -
ದಿಂದ ಬಾಳ್ವರು ಬಹುದಿವಸದಲಿ ಕೀರ್ತಿಯುತರಾಗಿ || ೫ ||

ಅಂಶಿ ಅಂಶಾಂತರ್ಗತ ತ್ರಯ
ಹಂಸವಾಹನ ಮುಖ್ಯದಿವಿಜರ
ಸಂಶಯದಿ ತಿಳಿದಂತರಾತ್ಮಕ ಶ್ರೀ ಜನಾರ್ದನನ ||
ಸಂಸ್ಮರಣೆ ಪೂರ್ವಕದಿ ಷಡಧಿಕ
ತ್ರಿಂಶತಿತ್ರಯ ರೂಪವರಿತು ವಿ -
ಪಾಂಸಗನ ಪೂಜಿಸುವವರೇ ಕೃತಾರ್ಥರೆನಿಸುವರು || ೬||

ಮೂರುವರಸಾವಿರದ ಮೇಲರೆ
ಸೂರ್ಯದು ರೂಪದಿ ಜನಾರ್ದನ
ಸೂರಿಗಳು ಮಾಡುವ ಸಮಾರಾಧನೆಗೆ ವಿಘ್ನಗಳು ||
ಬಾರದಂತೆ ಬಹು ಪ್ರಕಾರ ಖ -
ರಾರಿ ಕಾಪಾಡುವನು ಸರ್ವ ಶ -
ರೀರಗಳೊಳಗಿದ್ದವರವರ ಪೆಸರಿಂದ ಕರೆಸುತಲಿ || ೭ ||

ಜಯ ಜಯ ಜಯಕಾಂತ ದತ್ತಾ -
ತ್ರೇಯ ಕಪಿಲ ಮಹಿದಾಸ ಭಕ್ತ
ಪ್ರಿಯ ಪುರಾತನ ಪುರುಷ ಪೂರ್ಣಾನಂದ ಜ್ಞಾನಘನ ||
ಹಯವದನ ಹರಿ ಹಂಸ ಲೋಕ -
ತ್ರಯ ವಿಲಕ್ಷಣ ನಿಖಿಳ ಜಗದಾ
ಶ್ರಯ ನಿರಾಮಯ ದಯದಿ ಸಂತೈಸೆಂದು ಪ್ರಾರ್ಥಿಪುದು || ೮ ||

ಷಣ್ಣವತಿ ಎಂಬಕ್ಷರದ್ವಯನು
ಷಣ್ಣವತಿ ನಾಮದಲಿ ಕರೆಸುತ
ತನ್ನವರು ಸದ್ಭಕ್ತಿ ಪೂರ್ವಕದಿಂದ ಮಾಡುತಿಹ ||
ಪುಣ್ಯಕರ್ಮವ ಸ್ವೀಕರಿಸಿ ಕಾ -
ರುಣ್ಯ ಸಾಗರ ಸಲಹುವನು ಬ್ರ -
ಹ್ಮಣ್ಯದೇವ ಭವಾಬ್ಧಿಪೋತ ಬಹುಪ್ರಕಾರದಲಿ || ೯ ||

ದೇಹಗಳ ಕೊಡುವವನವರವ -
ರಹರವನು ಕೊಡದಿಹನೆ ಸುಮನಸ
ಮಹಿತ ಮಂಗಳ ಚರಿತ ಸದ್ಗುಣ ಭರಿತನನವರತ ||

ಐಹಿಕ ಪಾರತ್ರಿಕ ಸುಖಪ್ರದ
ವಹಿಸಿ ಬೆನ್ನಲಿ ಬೆಟ್ಟವಮೃತವ
ದ್ರುಹಿಣ ಮೊದಲಾದವರಿಗುಣಿಸಿದ ಮುರಿದನಹಿತರನ || ೧೦ ||

ದ್ರುಹಿಣ ಮೊದಲಾದಮರರಿಗೆ ಸ -
ನ್ಮಹಿತ ಮಾಯಾರಮಣ ತಾನೆ
ಸ್ವಹನೆನಿಸಿ ಸಂತೃಪ್ತಿ ಬಡಿಸುವ ಸರ್ವಕಾಲದಲಿ ||
ಪ್ರಹಿತ ಸಂಕರ್ಷಣನು ಪಿತೃಗಳಿ -
ಗಹರನೆನಿಪ ಸ್ವಧಾಖ್ಯರೂಪದಿ
ಮಹಿಜ ಫಲ ತೃಣ ಪೆಸರಿನಲಿ ಪ್ರದ್ಯುಮ್ನನನಿರುದ್ಧ || ೧೧ ||

ಅನ್ನನೆನಿಸುವ ನೃಪಸುಗಳಿಗೆ
ಹಿರಣ್ಯಗರ್ಭಾಂಡದೊಳು ಸಂತತ
ತನ್ನನೀಪರಿಯಿಂದುಪಾಸನೆಗೈವ ಭಕುತರನ ||
ಬನ್ನಪಡಿಸದೆ ಭವಸಮುದ್ರ ಮ -
ಹೋನ್ನತಿಯ ದಾಟಿಸಿ ಚತುರವಿಧ
ಅನ್ನಮಯನಾತ್ಮಪ್ರದರ್ಶನ ಸುಖವನೀವ ಸದಾ || ೧೨ ||

ಮನವಚನ ಕಾಯಗಳ ದೆಶೆಯಿಂ -
ದನುದಿನದಿ ಬಿಡದಾಚರಿಸುತಿ -
ಪ್ಪನುಚಿತೋಚಿತ ಕರ್ಮಗಳ ಸದ್ಭಕ್ತಿ ಪೂರ್ವಕದಿ ||
ಅನಿಲ ದೇವನೊಳಿಪ್ಪ ನಾರಾ -
ಯಣಗಿದನ್ನವುಪವಂದು ಕೃಷ್ಣಾ -
ರ್ಪಣವೆನುತ ಕೊಡೆ ಸ್ವೀಕರಿಸಿ ಸಂತೈಪ ಕರುಣಾಳು || ೧೩ ||

ಏಳುವಿಧ ಅನ್ನ ಪ್ರಕರಣವ
ಕೇಳಿ ಕೋವಿದರಾಸ್ಯದಿಂದಲಿ
ಆಲಿಸವ ಮಾಡದಲೆ ಅನಿರುದ್ಧಾದಿ ರೂಪಗಳ ||
ಕಾಲಕಾಲದಿ ನೆನೆದು ಪೂಜಿಸು
ಸ್ಥೂಲ ಮತಿಗಳಿಗಿದನು ಪೇಳದೆ
ಶ್ರೀಲಕುಮಿ ವಲ್ಲಭನೇ ಅನ್ನಾದನ್ನ ಅನ್ನದನು || ೧೪ ||

ಎಂದರಿತು ಸಪ್ತಾನ್ನಗಳ ದೈ -
ನಂದಿನದಿ ಮರಿಯದೆ ಸದಾ ಗೋ -
ವಿಂದಗರ್ಪಿಸು ನಿರ್ಭಯದಿ ಮಹಯಜ್ಞವಿದು ಎಂದು ||
ಇಂದಿರೇಶನು ಸ್ವೀಕರಿಸಿ ದಯ -
ದಿಂದ ಬೇಡಿಸಿಕೊಳದೆ ತವಕದಿ
ತಂದು ಕೊಡುವನು ಪರಮ ಮಂಗಳ ತನ್ನ ದಾಸರಿಗೆ || ೧೫ ||

ಸೂಜಿ ಕರದಲಿ ಪಿಡಿದು ಸಮರವ
ನಾಜೈಸುವೆನು ಯೆಂಬ ನರನಂ -
ತೀ ಜಗತ್ತಿನೊಳುಳ್ಳ ಅಜ್ಞಾನಿಗಳು ನಿತ್ಯದಲಿ ||
ತ್ರೀಜಗತ್ಪತಿ ಚರಣಯುಗಳ ಸ -
ರೋಜ ಭಕ್ತಿಜ್ಞಾನ ಪೂರ್ವಕ
ಪೂಜಿಸದೆ ಧರ್ಮಾರ್ಥಕಾಮವ ಬಯಸಿ ಬಳಲುವರು || ೧೬ ||

ಶಕಟ ಭಂಜನ ಸಕಲ ಜೀವರ
ನಿಕಟಗನುತಾನಾಗಿ ಲೋಕಕೆ
ಪ್ರಕಟನಾಗದೆ ಸಕಲ ಕರ್ಮವ ಮಾಡಿ ಮಾಡಿಸುತ ||
ಅಕುಟಿಲಾತ್ಮಕ ಭಕ್ತಜನರಿಗೆ
ಸುಖದನೆನಿಸುವ ಸರ್ವಕಾಲದಿ
ಅಕಟಕಟ ಈತನ ಮಾಹಾಮಹಿಮೆಗೇನೆಂಬೆ || ೧೭ ||

ಶ್ರೀ ಲಕುಮಿವಲ್ಲಭನು ವೈಕುಂ -
ಠಾಲಯದಿ ಪ್ರಣವ ಪ್ರಕೃತಿ ಕೀ -
ಲಾಲಜಾಸನ ಮುಖ್ಯ ಚೇತನರೊಳಗೆ ನೆಲಸಿದ್ದು ||
ಮೂಲಕಾರಣಾನಂತನಾಮದಿ
ಲೀಲೆಗೈವುತ ತೋರಿಕೊಳ್ಳದೆ
ಪಾಲಿನೊಳ್ ಘೃತವಿದ್ದ ತೆರದಂತಿಪ್ಪ ತ್ರಿಸ್ಥಳದಿ || ೧೮ ||

ಮೂರು ಯುಗದಲಿ ಮೂಲ ರೂಪನು
ಸೂರಿಗಳ ಸಂತೈಸಿ ದಿತಿಜ ಕು -
ಮಾರಕರ ಸಂಹರಿಸಿ ಧರ್ಮವನುಳುಹಬೇಕೆಂದು ||

ಕಾರುಣಿಕ ಭೂಮಿಯೊಳು ನಿಜ ಪರಿ
ವಾರ ಸಹಿತವತರಿಸಿ ಬಹು ವಿಧ
ತೋರುವನು ನರವತ್ಪ್ರವೃತ್ತಿಯ ಸಕಲ ಚೇತನಕೆ || ೧೯ ||

ಕಾರಣಾಹ್ವಯ ಪ್ರಕೃತಿಯೊಳಗಿ
ದ್ವಾರಧಿಕ ಹದಿನೆಂಟು ತತ್ವಪ
ತಾ ರಚಿಸಿ ತದ್ರೂಪ ತನ್ನಾಮಗಳನೆ ಧರಿಸಿ ||
ನೀರಜಭವಾಂಡವನು ನಿರ್ಮಿಸಿ
ಕಾರುಣಿಕ ಕಾರ್ಯಾಖ್ಯರೂಪದಿ
ತೋರುವನು ಸಹಜಾಹಿತಾಚಲಗಳಲಿ ಪ್ರತಿದಿನದಿ || ೨೦ ||

ಜೀವರಂತರ್ಯಾಮಿ ಅಂಶ ಕ
ಳೇವರಗಳೊಳಗಿಂದ್ರಿಯಗಳಲಿ
ತಾ ವಿಹಾರ ಗೈವುತಸುದಿನ ಅಂಶನಾಮದಲಿ ||
ಈ ವಿಷಯಗಳನುಂಡು ಸುಖಿಮಯ -
ನೀವ ಸುಖ ಸಂಸಾರ ದುಃಖವ
ದೇವ ಮಾನವ ದಾನವರಿಗವಿರತ ಸುಧಾಮ ಸುಖ || ೨೧ ||

ದೇಶದೇಶವ ಸುತ್ತಿ ದೇಹಾ
ಯಾಸಗೊಳಿಸದೆ ಕಾಮ್ಯ ಕರ್ಮಾದು -
ರಾಶಿಗೊಳಗಾಗದಲೆ ಬ್ರಹ್ಮಾದ್ಯಖಿಳ ಚೇತನರು ||
ಭೂ ಸಲಿಲ ಪಾವಕ ಸಮೀರಾ -
ಕಾಶ ಮೊದಲಾದಖಿಳ ತತ್ವ ಪ -
ರೇಶಗಿವಧಿಷ್ಠಾನ ವೆಂದರಿದರ್ಚಿಸನವರತ || ೨೨ ||

ಎರಡು ವಿಧದಲಿ ಲೋಕದೊಳು ಜೀ -
ವರುಗಳಿಪ್ಪರು ಸಂತತ ಕ್ಷರಾ -
ಕ್ಷರ ವಿಲಿಂಗ ಸಲಿಂಗ ಸೃಜ್ಯಾಸೃಜ್ಯ ಭೇದದಲಿ ||
ಕರೆಸುವದು ಜಡಪ್ರಕೃತಿ ಪ್ರಣವಾ -
ಕ್ಷರ ಮಹದಣುಕಾಲನಾಮದಿ
ಹರಿಸಹಿತ ಭೇದಗಳ ಪಂಚಕ ಸ್ಮರಿಸು ಸುಪವಿತ್ರ || ೨೩ ||

ಜೀವ ಜೀವರ ಭೇದ ಜಡ ಜಡ
ಜೀವ ಜಡಗಳ ಭೇದ ಪರಮನು
ಜೀವ ಜಡ ಸುವಿಲಕ್ಷಣನು ಎಂದರಿತು ನಿತ್ಯದಲಿ ||
ಈ ವಿರಿಂಚಾಂಡದಲಿ ಯಲ್ಲಾ
ಠಾವಿನಲಿ ತಿಳಿದೈದು ಭೇದ ಕ -
ಳೇವರದೊಳರಿತಚ್ಯುತನ ಪದಯೈದು ಶೀಘ್ರದಲಿ || ೨೪ ||

ಆದಿಯಲಿ ಕ್ಷರಾಕ್ಷರಾಖ್ಯ
ದ್ವೇಧವಕ್ಷರದೊಳು ರಮಾ ಮಧು -
ಸೂದನರು ಕ್ಷರಗಳೊಳು ಪ್ರಕೃತಿ ಪ್ರಣಾವ ಕಾಲಗಳು ||
ವೇಧ ಮುಖ್ಯ ತೃಣಾಂತ ಜೀವರ
ಭೇದಗಳನರಿತೀರಹಸ್ಯವ
ಬೋಧಿಸದೆ ಮಂದರಿಗೆ ಸರ್ವತ್ರದಲಿ ಚಿಂತಿಪುದು || ೨೫ ||

ದೀಪದಿಂ ದೀಪಗಳ ಪೊರೆಮ -
ಟ್ಯಾಪಣಾಲಯಗತ ತಿಮಿರಗಳ
ತಾ ಪರಿಹರಗೈಸಿ ತದ್ಗತ ಪದಾರ್ಥ ತೋರ್ಪಂತೆ ||
ಶೌಪರಣಿವರವಾಹನನು ಬಹು
ರೂಪನಾಮದಿ ಎಲ್ಲ ಕಡೆಯಲಿ
ವ್ಯಾಪಿಸಿದ್ದು ಯಥೇಷ್ಟ ಮಹಿಮೆಯ ತೋರ್ಪ ತಿಳಿಸದಲೆ || ೨೬ ||

ನಳಿನಮಿತ್ರಗೆ ಇಂದ್ರಧನು ಪ್ರತಿ
ಫಲಿಸುವಂತೆ ಜಗತ್ರಯವು ಕಂ -
ಗೊಳಿಪದನುಪಾದಿಯಲಿ ಪ್ರತಿಬಿಂಬಾಹ್ವಯದಿ ಹರಿಗೆ ||
ತಿಳಿಯೆ ತ್ರಿಕಕುದ್ಧಾಮನತಿಮಂ -
ಗಳ ಸುರೂಪವ ಸರ್ವಠಾವಿಲಿ
ಪೊಳೆವ ಹೃದಯಕೆ ಪ್ರತಿದಿವಸ ಪ್ರಹ್ಲಾದ ಪೋಷಕನು || ೨೭ ||

ರಸವಿಶೇಷದೊಳತಿವಿಮಲ ಸಿತ
ವಸನವನು ತೋಯ್ಸಿ ಅಗ್ನಿಯೊಳಗಿಡೆ
ಪಸರಿಸುವದು ಪ್ರಕಾಶ ನಸುಗುಂದದಲೆ ಸರ್ವತ್ರ ||

ತ್ರಿಶಿರ ದೂಷಣ ವೈರಿ ಭಕ್ತಿ ಸು -
ರಸದಿ ತೋಂಬ್ದು ಮಹಾತ್ಮರನು ಬಾ -
ಧಿಸದು ಭವದೊಳಗಿದ್ದರೆಯು ಸರಿ ದುರಿತರಾಶಿಗಳು || ೨೮ ||

ವಾರಿನಿಧಿಯೊಳಗಖಿಳ ನದಿಗಳು
ಬೇರೆ ಬೇರೆ ನಿರಂತರದಲಿ ವಿ -
ಹಾರ ಗೈಯುತ ಪರಮ ಮೋದದಲಿಪ್ಪ ತೆರದಂತೆ ||
ಮೂರು ಗುಣಗಳ ಮಾನಿ ಎನಿಸುವ
ಶ್ರೀ ರಮಾರೂಪಗಳು ಹರಿಯಲಿ
ತೋರುತಿಪ್ಪವು ಸರ್ವಕಾಲದಿ ಸಮರಹಿತವೆನಿಸಿ || ೨೯ ||

ಕೋಕನದ ಸಖಸುದಯ ಘೂಕಾ
ಲೋಕನಕೆ ಸೊಗಸಿದಿರೆ ಭಾಸ್ಕರ
ತಾ ಕಳಂಕನೆ ಈ ಕೃತಿಯಲಿ ಜಗನ್ನಾಥ ವಿಠಲಾಗಿ ||
ಸ್ವೀಕರಿಸಿ ಸುಖಬಡಲರಿಯದವಿ -
ವೇಕಿಗಳು ನಿಂದಿಸಿದರೇನಹು -
ದೀ ಕವಿತ್ವವ ಕೇಳಿ ಸುಖಪಡದಿಹರೆ ಕೋವಿದರು || ೩೦ ||

ಚೇತನಾಚೇತನಗಳಲಿ ಗುರು
ಮಾತರಿಶ್ವಾಂತರ್ಗತ ಜಗ
ನ್ನಾಥ ವಿಠಲ ನಿರಂತರದಿ ವ್ಯಾಪಿಸಿ ತಿಳಿಸದಲೆ ||
ಕಾತುರವ ಪುಟ್ಟಿಸಿ ವಿಷಯದಲಿ
ಯಾತುಧಾನರ ಮೋಹಿಸುವ ನಿ -
ರ್ಭೀತ ನಿತ್ಯಾನಂದಮಯ ನಿರ್ದೋಷ ನಿರವದ್ಯ || ೩೧ ||

# ೧೩ ಶ್ವಾಸ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವುದು ||

ಭಾರತೀಶನು ಪಳಿಗೆಯೊಳು ಮು -
ನ್ನೂರರವತ್ತು ಸುರ ಜಪಗಳ
ತಾರಚಿಸುವನು ಸರ್ವ ಜೀವರೊಳಿದ್ದು ಬೇಸರದೆ ||
ಕಾರುಣಿಕನವರವರ ಸಾಧನ
ಪೂರಯಿಸಿ ಭೂ ಸ್ವರ್ಗ ನರಕವ
ಸೇರಿಸುವ ಸರ್ವಜ್ಞ ಸಕಲೇಷ್ಟಪ್ರದಾಯಕನು || ೧ ||

ತಾಸಿಗೊಂಬೈನೂರು ಶ್ವಾಸೋ -
ಚ್ಛ್ವಾಸಗಳ ನಡೆಸುತಲಿ ಚೇತನ
ರಾಶಿಯೊಳು ಹಗಲಿರುಳು ಜಾಗ್ರತನಾಗಿ ನಿತ್ಯದಲಿ ||
ಈ ಸುಮನಸೋತ್ತಂಸ ಲೇಸಾ -
ಯಾಸವಿಲ್ಲದೆ ಪೋಷಿಸುತ ಮೂ
ಲೇತಸಂಸ್ಥಿ ಸರೋಜ ಮೂಲದಲಿಪ್ಪ ಕಾಣಿಸದೆ || ೨ ||

ಅರಿವದೊಂದ್ಯಾಮದೊಳು ಶ್ವಾಸಗ -
ಳೆರಡು ಸಾವಿರದೇಳನೂರನು
ಶರಸಹಸ್ರದ ಮೇಲೆ ನಾನೂರಹವು ದ್ವಿತೀಯಕ್ಕೆ ||
ಮರಳಿ ಯಾಮತ್ರಯಕೆ ಪತು ಸಾ
ವಿರದ ಮೇಲ್ ನೂರೇಣಿಕೆಯಲಿ ಹ
ನ್ನೆರಡು ತಾಸಿಗೆ ಹತ್ತು ಸಾವಿರ ದೆಂಟುನೂರಹವು || ೩ ||

ಒಂದು ದಿನದೊಳಗನಿಲ ಇಪ್ಪ -
ತ್ತೊಂದು ಸಾವಿರದಾರುನೂರು ಮು -
ಕುಂದನಾಜ್ಞದಿ ಮಾಡಿ ಮಾಡಿಸಿಲೋಕಗಳಪೊರೆವ ||
ನೆಂದು ಪವನನ ಪೊಗಳುತಿರುವಂ -
ದೆಂದು ಮರಿಯದೆ ಈ ಮಹಿಮೆ ಸಂ -
ಕ್ರಂದನಾದ್ಯರಿಗುಂಟೆ ನೋಡಲು ಸರ್ವಕಾಲದಲಿ || ೪ ||

ಮೂರು ಲಕ್ಷದ ಮೇಲೆ ವಿಂಶತಿ
ಈರೆರಡು ಸಾವಿರವು ಪಕ್ಷಕೆ
ಆರು ಲಕ್ಷದ ಮೇಲೆ ನಾಲ್ವತ್ತೆಂಟು ಸಾವಿರವು ||
ಮೂರು ತನು ಮಾಸಕೆ ಜಪಿಸಿ ಸಂ |
ಸಾರಸಾಗರದಿಂದ ಸುಜನರ |
ಪಾರುಗಾಣಿಸಿ ಸಲಹುವನು ಬಹುಭೋಗಗಳನಿತ್ತು || ೫ ||

ಎರಡು ತಿಂಗಳಿಹವು ಋತು ಭೂ
ಸುರರು ತಿಳಿವದು ಶ್ವಾಸಜಪ ಹ
ನ್ನೆರಡು ಲಕ್ಷದ ಮೇಲೆ ತೊಂಬತ್ತಾರು ಸಾಹಸ್ರ ||
ಕರೆಸುವದು ಅಯನಾಹ್ವಯದಲರೆ -
ವರುಷ ಮೂವತ್ತೆಂಟು ಲಕ್ಷೋ -
ಪರಿ ತಿಳಿವದೆಂಭತ್ತೆಂಟುಸಹಸ್ರ ಕೋವಿದರು || ೬ ||

ವರುಷಕಿದರಿಮ್ಮಡಿ ಜಪಂಗಳ
ಗುರುವರ್ಯ ತಾ ಮಾಡಿ ಮಾಡಿಸಿ
ದುರಿತಗಳ ಪರಿಹರಿಸುವನು ಚಿಂತಿಸುವ ಸಜ್ಜನರ ||
ಸುರವಿರೋಧಿಗಳೊಳಗೆ ನೆಲಸಿ -
ದ್ವಿರವಿದೂರ ತಮೋಧಿಕಾರಿಗ -
ಳಿರವರಿತ ಸೋऽಹಮುಪಾಸನೆ ಮಾಳ್ಪನವರಂತೆ || ೭ ||

ಇನಿತುಪಾಸನೆ ಸರ್ವಜೀವರೊ -
ಳನಿಲದೇವರು ಮಾಡುತಿರೆ ಚಿಂ -
ತನೆಯ ಮಾಡದೆ ಕಂಡನೀರೊಳು ಮುಣಿಗೆ ನಿತ್ಯದಲಿ ||
ಮನೆಯೊಳಗೆ ಕೃಷ್ಣಾಜಿನಾದ್ಯಾ -
ಸನದಿ ಕುಳಿತು ವಿಶಿಷ್ಟ ಬಹು ಸ -
ಜ್ಜನನೆನಿಸಿ ಜಪಮಣಿಗಳೆಣಿಸಿದರೇನು ಬೇಸರಿದೆ || ೮ ||

ಓದನೋದಕವೆರಡು ತೇಜದೊ -
ಳೈದುವವು ಲಯ ತದಭಿಮಾನಿಗ -
ಳಾದ ಶಿವ ಪವನರು ರಮಾಧೀನತ್ವ ವೈದುವರು ||

ಈ ದಿವಿಜ ರೊಡಗೂಡಿ ಶ್ರೀ ಮಧು
ಸೂದನನ ಐದುಮಳು ಎಂದರಿ -
ದಾದರದಲನ್ನೋದಕವ ಕೊಡುತ್ತುಣುತ ಸುಖಿಸುತಿರು || ೯ ||

ಜಾಲಿತೊಪ್ಪಲಜಾವಿಗಳು ಮೆ -
ದ್ದಾಲಯದಿ ಸ್ವೇಚ್ಛಾನುಸಾರದಿ
ಪಾಲಗರೆಮಂದದಲಿ ಲಕ್ಷ್ಮೀರಮಣ ತನ್ನಪದ ||
ಕೀಳಕರ್ಮವ ಸ್ವೀಕರಿಸಿ ತ -
ನ್ನಾಲಯದಲಿಟ್ಟವರ ಪೊರೆವ ಕೃ -
ಪಾಳು ಕಾಮದ ಕೈರವದಳ ಶ್ಯಾಮ ಶ್ರೀ ರಾಮ || ೧೦ ||

ಶಶಿ ದಿವಾಕರ ಪಾವಕರೊಳಿಹ
ಅಸಿತ ಸಿತ ಲೋಹಿತಗಳಲಿ ಶಿವ
ಶ್ವಸನ ಭಾರ್ಗವಿ ಮೂವರೊಳು ಕೃಷ್ಣ ಹಯವದನ ||
ವಸುಧಿಪಾರ್ದನ ತ್ರಿವೃತ್ ಯನಿಸೀ
ವಸುಮತಿಯೊಳನ್ನೋದಕಾನಲ
ಪೆಸರಿನಿಂದಲಿ ಸರ್ವ ಜೀವರ ಸಲಹುವನು ಕರುಣಿ || ೧೧ ||

ದೀಪಕರದಲಿ ಪಿಡಿದು ಕಾಣದೆ
ಕೂಪದೊಳು ಬಿದ್ದಂತೆ ವೇದ ಮ -
ಹೋಪನಿಷದರ್ಥಗಳ ನಿತ್ಯದಿ ಪೇಳುವವರೆಲ್ಲ ||
ಶ್ರೀ ಪವನ ಮುಖ ನಿನುತನಮಲ ಸು -
ರೂಪಗಳ ವ್ಯಾಪಾರ ತಿಳಿಯದೆ
ಪಾಪ ಪುಣ್ಯಕೆ ಜೀವ ಕರ್ತೃ ಅಕರ್ತೃ ಹರಿಯೆಂಬ || ೧೨ ||

ಅನಿಲದೇವನು ವಾಜಸೋಮಯ -
ನೆನಿಸಿ ಪಾವಕ ವರುಣ ಸಂಕ್ರಂ -
ದನ ಮುಖಾದ್ಯರೊಳಿದ್ದು ಭಗವದ್ರೂಪಗುಣಗಳನು ||
ನೆನನೆನದುಚ್ಚರಿಸುತಲಿ ನ -
ಮ್ಮನು ಸದಾ ಸಂತೈಸುವನು ಸ -
ನ್ಮುನಿಗಣಾರಾಧಿತ ಪದಾಂಬುಜ ಗೋಜ ಸುರರಾಜ || ೧೩ ||

ಪಾದಪೆನಿಪರು ವಾಗ್ಮನೋಮಯ
ಸ್ವಾದರೂಪ ದ್ವಿಜಗಳೊಳು ಪ್ರ -
ಹ್ಲಾದ ಪೋಷಕ ಸಂಕರ್ಷಣಾಖ್ಯಯದಿ ನೆಲಸಿದ್ದು ||
ವೇದ ಶಾಸ್ತ್ರ ಪುರಾಣಗಳ ಸಂ -
ವಾದ ರೂಪದಿ ಮನನಗೈಯುತ
ಮೋದ ಮಯ ಸುಖವಿತ್ತು ಸಲಹುವ ಸರ್ವ ಸಜ್ಜನರ || ೧೪ ||

ಗಂಧವಹ ದಶದಿಶಗಳೊಳಗರ -
ವಿಂದ ಸೌರಭ ಪಸರಿಸುತ ಘ್ರಾ -
ಣೇಂದ್ರಿಯಗಳಿಗೆ ಸುಖವನೀವುತ ಸಂಚರಿಸುವಂತೆ ||
ಇಂದಿರೇಶನ ಸುಗುಣಗಳ ವೈ -
ನಂದಿನದಿ ತುತಿಸುತನುಮೋದಿಸು -
ತಂಧ ಬಧಿರ ಸುಮೂಕನಂತಿರು ಮಂದಜನರೊಡನೆ || ೧೫ ||

ಶ್ರೀ ರಮಣನರ ಮನೆಯ ಪೂರ್ವ
ದ್ವಾರದಲ್ಲಿಹ ಸಂಜ್ಞಸೂರ್ಯಗ
ಭಾರತೀಪತಿ ಪ್ರಾಣ ನೊಳಗಿಹ ಲಕುಮಿನಾರಾಯಣನ ||
ಸೇರಿ ಮನುಜೋತ್ತಮರು ಸರ್ವಶ -
ರೀರಗತ ನಾರಾಯಣನ ಅವ -
ತಾರಗುಣಗಳ ತುತಿಸುತಲಿ ಮೋದಿಪರು ಮುಕ್ತಿಯಲಿ || ೧೬ ||

ಪ್ರಣವ ಪ್ರತಿಪಾದ್ಯನ ಪುರದ ದ -
ಕ್ಷಿಣಕವಾಟದಲಿಪ್ಪ ಶಶಿರೋ -
ಹಿಣಿಗತ ವ್ಯಾನಸ್ಥ ಕೃತಿ ಪ್ರದ್ಯುಮ್ನ ರೂಪವನು ||
ಗುಣಗಳನು ಸಂಸ್ತುತಿಸುತಲಿ ಪಿತೃ
ಗಣ ಗದಾಧರನತಿವಿಮಲ ಪ -
ಟ್ಟಣದೊಳಗೆ ಸ್ವೇಚ್ಛಾನುಸಾರದಿ ಸಂಚರಿಸುತಿಹರು. || ೧೭ ||

ಅಮಿತ ವಿಕ್ರಮನಾಲಯದ ಪ -
ಶ್ಚಿಮಕವಾಟದಿ ಸತಿ ಸಹಿತ ಸಂ -
ಭ್ರಮದಿ ಭಗವದ್ಗುಣಗಳನೆ ಪೊಗಳುತಲಿ ಮೋದಿಸುವ ||

ಸುಮನಸಾಸ್ಯನೊಳಿಪ್ಪಪಾನಗ
ಸಮನ ಸಂಕರುಷಣ ನಿಜ ಕ್ಷ್ಮಾ
ತ್ಮಮಲದೊಳು ಧೇನಿಸುವ ಋಷಿಗಣ ಐದಿ ಸುಖಿಸುವರು ॥ ೧೮ ॥

ಸ್ವರವರ್ಣನ ಗುಣ ರೂಪ ಸಪ್ತ
ಸ್ವರಗಳಿಂದಲಿ ಪಾಡುತಿಹ ತುಂ -
ಬರನೆ ಮೊದಲಾದಖಿಳ ಗಂಧರ್ವರು ರಮಾಪತಿಯ ॥
ಪುರದ ಉತ್ತರ ಬಾಗಿಲಾಧಿಪ
ಸುರಪ ಶಚಿಗ ಸಮಾನ ವಾಯುಗ
ಹರಿನ್ಮಣಿನಿಭ ಶಾಂತಿ ಪತಿಯನಿರುದ್ಧನೈದುವರು ॥ ೧೯ ॥

ಗರುಡ ಶೇಷ ಸುರೇಂದ್ರ ಮುಖ ಪು -
ಷ್ಕರನೆ ಕಡೆಯಾಗಿಪ್ಪಖಿಳ ನಿ -
ರ್ಜರರು ಊರ್ಧ್ವದ್ವಾರಗತ ಭಾರತಿ ಉದಾನನೊಳು ॥
ಮೆರೆವ ಮಾಯಾವಾಸುದೇವನ
ಪರಮ ಮಂಗಳವಯವಗಳ ಮುಂ -
ದಿರವನೈದಿ ಸದಾ ಮುಕುಂದನ ನೋಡಿ ಸುಖಿಸುವರು ॥ ೨೦ ॥

ದ್ವಾರ ಪಂಚಕಪಾಲಕರೊಳಿಹ
ಭಾರತೀ ಪ್ರಾಣಾಂತರಾತ್ಮಕ
ಮಾರಮಣನೈರೂಪ ತತ್ತದ್ವಾರದಲಿ ಬಪ್ಪ ॥
ಮೂರೆರಡು ವಿಧ ಮುಕ್ತಿಯೋಗ್ಯರ
ತಾರತಮ್ಯವನರಿತವರ ಕಂ
ಸಾರಿ ಸಂಸಾರಾಬ್ಧಿ ದಾಟಿಸಿ ಮುಕ್ತರನ ಮಾಳ್ಪ ॥ ೨೧ ॥

ಬೆಳಗಿದ್ದೂಜಿಯು ನೋಳ್ಪರಿಗೆ ಥಳ
ಥಳಿಸುತಲೆ ಕಂಗೊಳಿಸುವಂದದಿ
ತೊಳೆದು ದೇಹವ ನಾಮ ಮುದ್ರೆಗಳಿಂದಲಂಕರಿಸಿ ॥
ಒಲಿಸಿ ನಿತ್ಯ ಕುತರ್ಕಯುಕ್ತಿಗ -
ಳಲಪಭೋಧರ ಶಾಸ್ತ್ರ ಮರ್ಮವ
ತಿಳಿಯದಿಹ ನರ ಬರಿದೆ ಇದರೊಳು ಶಂಕಿಸಿದರೇನು ॥ ೨೨ ॥

ಉದಧಿಯೊಳಗೂರ್ಮಿಗಳು ತೋರ್ಪಂ -
ದದಲಿ ಹಂಸೋದ್ಗೀಥ ಹರಿ ಹಯ -
ವದನ ಕೃಷ್ಣಾದ್ಯಮಿತನವತಾರಗಳು ನಿತ್ಯದಲಿ ||
ಪದುಮನಾಭನೊಳಿರುತಿಹವು ಸ -
ರ್ವದ ಸಮಸ್ತ ಪ್ರಾಣಿಗಳ ಚಿ -
ದ್ಹೃದಯಗತ ರೂಪಗಳನವ್ಯವಧಾನದಲಿ ಬಿಡದೆ || ೨೩ ||

ಶರಧಿಯೊಳು ಮಕರಾದಿ ಜೀವರು
ಇರಲು ಹಗಲೇಕ ಪ್ರಕಾರದಿ
ಚರಿಸುತನುಮೋದಿಸುತ ಇಪ್ಪಂದದಿ ಜಗತ್ರಯವು ||
ಇರುತಿಹವು ಜಗದೀಶನುದರದಿ
ಕರೆಸುವದು ಪ್ರತಿಬಿಂಬನಾಮದಿ
ಧರಿಸಿಹವು ಹರಿನಾಮ ರೂಪಂಗಳನನವರತ || ೨೪ ||

ಜನನಿ ಸೌಖ್ಯ ಪದಾರ್ಥಗಳ ಭೋ -
ಜನವು ಮಾಡಲು ಗರ್ಭಗತ ಶಿಶು
ದಿನದಿನಲಭಿವೃದ್ಧಿಯೈದುವ ತೆರದಿ ಜೀವರಿಗೆ ||
ವನಜನಾಭನು ಸರ್ವರಸ ಉಂ -
ಡುಣಿಸಿ ಸಂರಕ್ಷಿಸುವ ಜಾಹ್ನವಿ
ಜನಕ ಜನ್ಮಾದ್ಯಖಿಳ ದೋಷ ವಿದೂರ ಗಂಭೀರ || ೨೫ ||

ಆಸೆಗೊಳಗಾದವನು ಜನರಿಗೆ
ದಾಸನೆನಿಸುವನು ಆಸೆಯನು ನಿಜ
ದಾಸ್ಯೈದಿಹ ಪುಂಸಗೆಲ್ಲರು ದಾಸರೆನಿಸುವರು ||
ಶ್ರೀಶನಂಘ್ರಿ ಸರೋಜಯುಗಳ ನಿ -
ರಾಶೆಯಿಂದಲಿ ಭಜಿಸೆ ವಲಿದು ರ -
ಮಾಸಹಿತ ತನ್ನನೆ ಕೊಡುವ ಕರುಣಾ ಸಮುದ್ರಹರಿ || ೨೬ ||

ದ್ಯುನದಿಯಾದ್ಯಂತವನು ಕಾಣದೆ
ಮನುಜನೇಕತ್ರದಲಿ ತಾ ಮ -
ಜ್ಜನವಗೈಯೆ ಸಮಸ್ತ ದೋಷದಿ ಮುಕ್ತನಹತೆರದಿ ||

ಸತ್ಯಲೋಕಾಧಿಪನೊಳಗೆ ಐ
ವತ್ತೆರಡು ಪವಮಾನನೊಳು ನಾ
ಲ್ವತ್ತು ಮೇಲೆಂಟಧಿಕ ಶಿವನೊಳಗಿಟ್ಟ ಇಪ್ಪತ್ತು ||
ಚಿತ್ತಜೇಂದ್ರರೊಳೈದಧಿಕ ದಶ
ತತ್ವಾಭಿಮಾನಿಗಳೆನಿಪ ಸುರರೊಳು
ಹತ್ತು ಈರೈದಖಿಳ ಜೀವರೊಳಿಟ್ಟ ನಿರವದ್ಯ || ೨ ||

ಕಲಿ ಮೊದಲು ಗೊಂಡಖಿಳ ದಾನವ
ರೊಳಗೆ ನಾಲ್ವತ್ತೈದು ಈ ಪರಿ
ತಿಳಿದುಪಾಸನೆ ಮಾಡು ಮರಿಯದೆ ಪರಮ ಭಕುತಿಯಲಿ ||
ಇಳೆಯೊಳಗೆ ಸಂಚರಿಸು ಲಕುಮಿ
ನಿಲಯನಾಳುನಾನೆಂದು ಸರ್ವ
ಸ್ಥಳಗಳಲಿ ಸಂತೈಸುತಿಪ್ಪನು ಗೆಳೆಯನಂದದಲಿ || ೩ ||

ಅವನಿಪ ಸ್ವಾಮಿ ತ್ವ ಧರ್ಮವ
ಸ್ವವಶವಾತ್ಯರಿಗಿತ್ತು ತಾನು -
ತ್ತವರ ಮುಖದಲಿ ರಾಜ್ಯಕಾರ್ಯವ ಮಾಡಿಸುವ ತೆರದಿ ||
ಕವಿಭಿರೀಡಿತ ತನ್ನ ಕಳೆಗಳ
ದಿವಿಜ ದಾನವ ಮಾನವರೊಳಿ
ಟ್ಟವಿರತ ಗುಣ ತ್ರಯಜ ಕರ್ಮವ ಮಾಡಿ ಮಾಡಿಸುವ || ೪ ||

ಪುಣ್ಯ ಪಾಪಗಳೀ ತೆರದಿ ಕಾ
ರುಣ್ಯ ಸಾಗರ ದೇವದಾನವ
ಮಾನವರೊಳಿಟ್ಟವರ ಫಲವ್ಯತ್ಯಾಸವನೆ ಮಾಡಿ ||
ಬನ್ನಬಡಿಸುವ ಭಕ್ತಿಹೀನರ
ಸನ್ನುತ ಸುಕರ್ಮ ಫಲಗಳ ತೆಗೆದು ಪ್ರ -
ಪನ್ನರಿಗೆ ಕೊಟ್ಟವರ ಸುಖ ಬಡಿಸುವನು ಸುಭುಜಾಪ್ತ || ೫ ||

ಮಾಣಿಕವ ಕೊಂಡಂಗಡಿಯೊಳಿಜಿ -
ವಾನ ಕೊಟ್ಟಾ ಪುರುಷನ ಸಮಾ -
ಧಾನ ಮಾಡುವ ತೆರದಿ ದೈತ್ಯರು ನಿತ್ಯದಲಿ ಮಾಳ್ಪ ||

ದಾನಯಜ್ಞಾದಿಗಳ ಫಲ ಯಜ
ಮಾನತಾನಪಹರಿಸಿ ಅಸಮೀ -
ಚೀನಸುಖಗಳ ಕೊಟ್ಟು ಅಸುರರ ಮತ್ತರನು ಮಾಳ್ಪ || ೬ ||

ಏಣಲಾಂಛನನಮಲ ಕಿರಣ ಕ್ರ -
ಮೇಣ ವೃದ್ಧಿಯನೈದಿ ಲೋಕರ
ಕಾಣಗೊಡದಿಹ ಕತ್ತಲೆಯ ಭಂಗಿಸುವ ತೆರದಂತೆ ||
ವೈನತೇಯಾಂಸಗನ ಮೂರ್ತಿ
ಧ್ಯಾನ ಉಳ್ಳ ಮಹಾತ್ಮರಿಗೆ ಸು
ಜ್ಞಾನ ಭಕ್ತ್ಯಾದಿಗಳು ವರ್ಧಿಸಿ ಸುಖವ ಕೊಡುತಿಹವು || ೭ ||

ಜನಪನರಿಕೆಯ ಚೋರ ಪೊಳಲೊಳು
ಧನವ ಕದ್ದೊಯ್ವೀಯಲವನವ -
ಗುಣಗಳೆಣಿಸದೆ ಪೊರೆವ ಕೊಡದಿರೆ ಶಿಕ್ಷಿಸುವ ತೆರದಿ ||
ಅನುಚಿತೋಚಿತ ಕರ್ಮ ಕೃಷ್ಣಾ
ರ್ಪಣವೆನಲು ಕೈಕೊಂಡು ತನ್ನರ
ಮನೆಯೊಳಿಟ್ಟಾನಂದ ಬಡಿಸುವ ಮಾಧವಾನತರ || ೮ ||

ಅನ್ನದನ್ನಾದನ್ನನಾಮಕ
ಮುನ್ನೆ ಪೇಳ್ದ ಪ್ರಕಾರ ಜೀವರೊ -
ಳಿನ್ನ ರೂಪ ಪ್ರವೇಶ ಗೈದಪರಪರ ವ್ಯಾಪಾರ ||
ಬನ್ನ ಬಡಿಸದೆ ಮಾಡಿ ಮಾಡಿಸಿ
ಧನ್ಯರೆನಿಸುವುದೆನಿಸಿ ತ್ರೈ -
ಗುಣ್ಯ ವರ್ಜಿತ ತತ್ತದಾಖ್ಯೆಯನಾಗಿ ಕರೆಸುವನು || ೯ ||

ಸಲಿಲ ಬಿಂದು ಪಯೋಬ್ಧಿಯೊಳು ಬೀ -
ಳಲು ವಿಕಾರವನೈದಬಲ್ಲದೆ
ಜಲವು ತದ್ರೂಪವನೈದುವದೆಲ್ಲಕಾಲದಲಿ ||
ಕಲಿಮಲಾಪಹನರ್ಚಿಸುವ ಸ -
ತ್ಕುಲಜರ ಶುಭಕರ್ಮಗಳು ತಾನಿ -
ಷ್ಕಲುಷ ಕರ್ಮಗಳಾಗಿ ಪುರುಷಾರ್ಥಗಳ ಕೊಡುತಿಹವು || ೧೦ ||

ಮೊಗದೊಳಗೆ ಮೊಲೆಯಿಟ್ಟು ಮುದ್ದಿಸಿ
ಮಗುವಿನಂ ಬಿಗಿದಪ್ಪಿ ಸ್ನೇಹದಿ
ತೆಗೆದು ತನ್ನಯ ಸ್ತನಗಳುಣಿಸುವ ಜನನಿಯಂದದಲಿ ||
ಅಗಣಿತಾತ್ಮನು ತನ್ನ ಪಾದಾ -
ಬ್ಜಗಳ ಧೇನಿಪ ಭಕ್ತ ಜನರಿಗೆ
ಪೃಥುಕರಾಗನು ತಾನಾಗಿ ಸೌಖ್ಯಗಳೀವ ಸರ್ವತ್ರ || ೧೧ ||

ತೋಟಿಗನು ಭೂಮಿಯೊಳು ಬೆಳೆವ
ನಾಟಿ ಬೇಕೆಂದನುತ ಹಿತದಲಿ
ಮೋಟೆಯನ್ನೀರೆತ್ತಿ ಸಸಿಗಳ ಸಂತೈಸುವಂತೆ ||
ಹಾಕು ಬಡದಲೆ ಜಗದಿ ಜೀವರ
ಘೋಟಕಾಸ್ಯನು ಸೃಜಿಸಿ ಯೋಗ್ಯತೆ
ದಾಟಗೊಡದಲೆ ಸಲಹುತಿಪ್ಪನು ಸರ್ವಕಾಲದಲಿ || ೧೨ ||

ಭೂಮಿಯೊಳು ಜಲವಿರೆ ತೃಷಾರ್ತನು
ತಾಮರೆದು ಮೊಗವತ್ತಿ ಪಣ್ಣತೆ
ವ್ಯೋಮ ಮಂಡಲದೊಳಗೆ ಕಾಣದ ಹುಡುಕುವಂದದಲಿ ||
ಶ್ರೀ ಮನೋರಮ ಸರ್ವರಂತ -
ರ್ಯಾಮಿಯಾಗಿರ ತಿಳಿಯಲರಿಯದೆ
ಭ್ರಾಮಕರು ಭಜಿಸುವರು ಭಕುತಿಯನ್ಯ ದೇವತೆಯ || ೧೩ ||

ಮುಖ್ಯಫಲ ವೈಕುಂಠ ಮುಖ್ಯಾ -
ಮುಖ್ಯ ಫಲ ಸುರರಾದಿ ಲೋಕಾ -
ಮುಖ್ಯ ಫಲ ವೈಷಿಕವೆಂದರಿದತಿಭಕುತಿಯಿಂದ ||
ರಕ್ಕಸಾರಿಯ ಭಜಿಸುತಲೆ ನಿ -
ರ್ದುಃಖಿನಾಗು ನಿರಂತರದಿ ಮೊರೆ
ಪೊಕ್ಕವರ ಬಿಡಭಕ್ತವತ್ಸಲ ಭಾರತೀಶಪಿತ || ೧೪ ||

ವ್ಯಾಧಿಯಿಂ ಪೀಡಿತ ಶಿಶುವಿಗೆ ಗು -
ಡೋದಕವ ನೆರವಿಕೆ ಔಷಧಿ
ತೇದು ಕುಡಿಸುವ ತಾಯಿಯಮೋಘವಿಧದಲಿ ಸರ್ವಜ್ಞ ||

ಮಂದನಾದರೂ ಸರಿಯೆ ಗೋಪೀ -
ಚಂದನ ಶ್ರೀ ಮುದ್ರೆಗಳ ನಲು -
ವಿಂದ ಧರಿಸುತ ಶ್ರೀ ತುಲಸಿ ಪದುಮಾಕ್ಷ ಸರಗಳನು ||
ಕಂಧರದ ಮಧ್ಯದಲಿ ಧರಿಸಿ ಮು -
ಕುಂದ ಶ್ರೀ ಭೂರಮಣ ತ್ರಿಜಗ -
ದ್ವಂದ್ಯ ಸರ್ವ ಸ್ವಾಮಿ ಮಮಕುಲದೈವವೆನೆ ಪೊರೆವ || ೨೦ ||

ಪ್ರಾಯ ಧನ ಮದದಿಂದ ಜನರಿಗೆ
ನಾಯಕ ಪ್ರಭುವೆಂಬ ಪೂರ್ವದಿ
ತಾಯಿ ಪ್ರೋಕ್ತಿಯೊಳಿರಲು ಪ್ರಭುವೆಂದೇಕೆ ಕರೆಯರಲ್ಲೈ ||
ಕಾಯ ನಿನ್ನನು ಬಿಟ್ಟು ಪೋಗಲು
ರಾಯ ನೀನೆಂಬೋ ಪ್ರಭುತ್ವ ಪ -
ಲಾಯನವನೈದಿತು ಸಮೀಪದಲಿದ್ದರದು ತೋರು || ೨೧ ||

ವಾಸುದೇವೈಕಪ್ರಕಾರದಿ
ಈಶನೆನಿಸುವ ಬ್ರಹ್ಮ ರುದ್ರ ತ -
ಚೇಶ ಮೊದಲಾದಮರರೆಲ್ಲರೂ ದಾಸರೆನಿಸುವರು ||
ಈ ಸುಮಾರ್ಗವ ಬಿಟ್ಟು ಸೋऽಹಮು -
ಪಾಸನೆಯ ಗೈವನರ ದೇಹಜ
ದೈಶಿಕ ಕ್ಲೇಶಗಳು ಬರಲದನೇಕೆ ಬಿಡಿಸಿಕೊಳ || ೨೨ ||

ಆ ಪರಬ್ರಹ್ಮನಲಿ ತ್ರಿಜಗ -
ದ್ವ್ಯಾಪಕತ್ವ ನಿಯಾಮಕತ್ವ
ಸ್ಥಾಪಕತ್ವ ವಶತ್ವ ಈಶತ್ವಾದಿ ಗುಣಗಳಿಗೆ ||
ಲೋಪ ವಿಲ್ಲೇಕಪ್ರಕಾರ ಸ್ವ -
ರೂಪವೆನಿಪವು ಸರ್ವಕಾಲದಿ
ಪೋಪವಲ್ಲವು ಜೀವರಿಗೆ ದಾಸತ್ವದೋಷಾದಿ || ೨೩ ||

ನಿತ್ಯ ನೂತನ ನಿರ್ವಿಕಾರ ಸು -
ಹೃತ್ತಮ ಪ್ರಣವಸ್ಥವರ್ಣೋ -
ತ್ಪತ್ತಿ ಕಾರಣ ವಾಙ್ಮನೋಮಯ ಸಾಮಗಾನರತ ||

ದತ್ತ ಕಪಿಲ ಹಯಾಸ್ಯ ರೂಪದಿ
ಪೃಥಕ್ ಪೃಥಕ್ ಜೀವರೊಳಿದ್ದು ಪ್ರ -
ವರ್ತಿಸುವನವರವರ ಯೋಗ್ಯತೆ ಕರ್ಮವನುಸರಿಸಿ || ೨೪ ||

ಶ್ರುತಿಗಳಾತನ ಮಾತು ವಿಮಲ
ಸ್ಮೃತಿಗಳಾತನ ಶಿಕ್ಷೆ ಜೀವ
ಪ್ರತತಿ ಪ್ರಕೃತಿಗಳೆರಡು ಪ್ರತಿಮೆಗಳೆನಿಸಿ ಕೊಳುತಿಹವು ||
ಇತರ ಕರ್ಮಗಳೆಲ್ಲ ಲಕುಮಿ
ಪತಿಗೆ ಪೂಜೆಗಳೆಂದು ಸ್ಮರಿಸುತ
ಚತುರ ವಿಧ ಪುರುಷಾರ್ಥಗಳ ಬೇಡದಿರು ಸ್ವಪ್ನದಲಿ || ೨೫ ||

ಭೂತಳಾಧಿಪನಾಜ್ಞಧಾರಕ
ದೂತರಿಗ ಸೇವಾನು ಸಾರದಿ
ವೇತನವ ಕೊಟ್ಟವರ ಸಂತೋಷಿಸುವ ತೆರನಂತೆ ||
ಮಾತರಿಶ್ವಪ್ರಿಯನು ಪರಮ
ಪ್ರೀತಿ ಪೂರ್ವಕ ಸದ್ಗುಣಂಗಳ
ಗಾಥಕರ ಸಂತೋಷ ಬಡಿಸುವ ಇಹಪರಂಗಳಲಿ || ೨೬ ||

ದೀಪ ದಿವದಲಿ ಕಂಡರಾದಡೆ
ಲೋಪಗೈಸುವ ರಾಕ್ಷಣ ಹರಿ ಸ
ಮಿಪದಲ್ಲಿರೆ ನಂದನಾಮ ಸುನಂದವೆನಿಸುವವೊ ||
ಔಪಚಾರಿಕವಲ್ಲ ಸುಜನರ
ಪಾಪಕರ್ಮವು ಪುಣ್ಯವೆನಿಪುದು
ಪಾಪಿಗಳ ಸತ್ಪುಣ್ಯ ಕರ್ಮವು ಪಾಪವೆನಿಸುವದು || ೨೭ ||

ಧನವ ಸಂಪಾದಿಸುವ ಪ್ರದ್ರಾ -
ವಣಕರಂದದಿ ಕೋವಿದರ ಮನೆ
ಮನೆಗಳಲಿ ಸಂಚರಿಸು ಶಾಸ್ತ್ರ ಶ್ರವಣ ಗೋಸುಗದೀ ||
ಮನನಗೈದುಪದೇಶಿಸುತ ಮು -
ರ್ಜನರ ಕೊಂಡಾಡದಿರು ಸ್ವಪ್ನದಿ
ಪ್ರಣತ ಕಾಮದ ಕೊಡುವ ಸೌಖ್ಯಗಳಿಹಪರಂಗಳಲಿ || ೨೮ ||

ಕಾರಕ ಕ್ರಿಯ ದ್ರವ್ಯ ವಿಭ್ರಮ
ಮೂರು ವಿಧ ಜೀವರಿಗೆ ಬಹು ಸಂ -
ಸಾರಕಿವು ಕಾರಣವೆನಿಸುವವೆಲ್ಲ ಕಾಲದಲಿ ||
ದೂರ ಓಡಿಸಿ ಭ್ರಾಮಕ ತ್ರಯ
ವಾರಿಗೊಳಗಾಗದಲೆ ಸರ್ವಾ
ಧಾರಕನ ಚಿಂತಿಸುತಲಿರು ಸರ್ವತ್ರ ಮರಿಯದಲೆ || ೨೯ ||

ಕರಣ ಕರ್ಮವ ಮಾಡಿದರೆ ವಿ -
ಸ್ಮರಣೆ ಕಾಲದಿ ಮಾತುಗಳಿಗು -
ತ್ತರವ ಕೊಡದಲೆ ಸುಮ್ಮನಿಪ್ಪನು ಜಾಗರಾವಸ್ಥೆ ||
ಕರುಣಿಸಲು ವ್ಯಾಪಾರ ಮಾಡುವ
ಬರಲು ನಾಲ್ಕಾವಸ್ಥೆಗಳ ಪರಿ -
ಹರಿಸಿ ಕೊಳನೇತಕೆ ಸ್ವತಂತ್ರನು ತಾನೆಂಬುವನು || ೩೦ ||

ಯುಕ್ತಿ ಮಾತುಗಳಲ್ಲ ಶ್ರುತಿ ಸ್ಮೃ -
ತ್ಯುಕ್ತ ಮಾತುಗಳಿವು ವಿಚಾರಿಸೆ
ಮುಕ್ತಿಗಿವು ಸೋಪಾನವೆನಿಪವು ಪ್ರತೀ ಪ್ರತೀ ಪದವು ||
ಭಕ್ತಿ ಪೂರ್ವಕ ಪಠಿಸುವವರಿಗೆ
ವ್ಯಕ್ತಿಕೊಡುವ ಸ್ವರೂಪಸುಖ ಪ್ರವಿ -
ವಿರಕ್ತನ ಮಾಡುವನು ಭವ ಭಯದಿಂದ ಬಹುರೂಪ || ೩೧ ||

ಶ್ರೀನಿವಾಸನ ಸುಗುಣ ಮಣಿಗಳ
ಪ್ರಾಣಮತ ಪಯುನಾಖ್ಯ ಸೂತ್ರದಿ
ಪೋಣಿಸಿದ ಮಾಲಿಕೆಯು ವಾಙ್ಮನರೀಶಗರ್ಪಿಸಿದ ||
ಜ್ಞಾನಿಗಳ ದೃಗ್ವಿಷಯವಹುದ -
ಜ್ಞಾನಿಗಳಿಗಸಹ್ಯ ತೋರ್ಪುದು
ಮಾಣಿಕವ ಮರ್ಕಟನ ಕೈಯೊಳು ಕೊಟ್ಟ ತೆರದಂತೆ || ೩೨ ||

ಶ್ರೀವಿಧೀರ ವಿಪಾಹಿಪೇಶ ಶ -
ಚೀವರಾತ್ಮಭವಾರ್ಕ ಶಶಿ ದಿ -
ಗ್ದೇವರ್ಷಿ ಗಂಧರ್ವ ಕಿನ್ನರ ಸಿದ್ಧ ಸಾಧ್ಯಗಣ ||

ಸೇವಿತ ಪದಾಂಬೋಜ ತತ್ಪಾ -
ದಾಪಲಂಬಿಗಳಾದ ಭಕ್ತರ
ಕಾವ ಕರುಣಾ ಸಾಂದ್ರ ಲಕ್ಷ್ಮೀಹೃತ್ಕುಮುದ ಚಂದ್ರ || ೩೩ ||

ಆದರ್ಶವ ಗತಾಕ್ಷ ಭಾಷಾ
ಭೇದದಿಂದಲಿ ಕರೆಯಲದನು ನಿ -
ಷೇಧಗೈದವಲೋಕಿಸದೆ ಬಿಡುವರೆ ವಿವೇಕಿಗಳು ||
ಮಾಧವನ ಗುಣ ಪೇಳ್ವ ಪ್ರಾಕೃತ
ವಾದರೆಯು ಸರಿ ಕೇಳಿ ಪರಮಾ -
ಹ್ಲಾದ ಬಡದಿಪ್ಪರೆ ನಿರಂತರ ಬಲ್ಲ ಕೋವಿದರು || ೩೪ ||

ಭಾಸ್ಕರನ ಮುಂದಲುಪ ಕಂಡು ನ -
ಮಸ್ಕರಿಸಿ ಮೋದಿಸದೆ ದ್ವೇಷದಿ
ತಸ್ಕರನು ನಿಂದಿಸಲು ಕುಂದುಹುದೆ ದಿವಾಕರಗೆ ||
ಸಂಸ್ಕೃತವಿದಲ್ಲೆಂದು ಕುಹಕ ತಿ -
ರಸ್ಕರಿಸಲೇನಹುದು ಭಕ್ತಿ ಪು -
ರಸ್ಕರದಿ ಕೇಳ್ವರಿಗೆ ಒಲಿವನು ಪುಷ್ಕರಾಕ್ಷ ಸದಾ || ೩೫ ||

ಪತಿತನ ಕಪಾಲದೊಳು ಭಾಗೀ -
ರಥಿಯ ಜಲವಿರೆ ಪೇಯವೆನಿಪುದೆ
ಇತರ ಕವಿ ನಿರ್ಮಿತ ಕುಕಾವ್ಯಾಶ್ರಾವ್ಯ ಬುಧರಿಂದ ||
ಕೃತಿಪತಿ ಕಥಾನ್ವಿತ ವೆನಿಪ ಪ್ರಾ -
ಕೃತವೆ ತಾ ಸಂಸ್ಕೃತವೆನಿಸಿ ಸ -
ದ್ಗತಿಯನೀವುದು ಭಕ್ತಿ ಪೂರ್ವಕ ಕೇಳಿ ಪೇಳ್ವರಿಗೆ || ೩೬ ||

ವೇದಶಾಸ್ತ್ರ ಸಂಯುಕ್ತಿ ಗ್ರಂಥಗ
ಳೋದಿ ಕೇಳ್ದವನಲ್ಲ ಸಂತತ
ಸಾಧುಗಳ ಸಹವಾಸ ಸಲ್ಲಾಪಗಳು ಮೊದಲಿಲ್ಲ ||
ಮೋದ ತೀರ್ಥಾರ್ಯರ ಮತಾನುಗ
ರಾದವರ ಕರುಣದಲಿ ಪೇಳ್ದೆ ರ -
ಮಾಧವ ಜಗನ್ನಾಥ ವಿಠ್ಠಲ ತಿಳಿಸಿದವರೊಳಗೆ || ೩೭ ||

# ೦೭ ಸ್ವಗತ ಸ್ವಾತಂತ್ರ್ಯ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಸ್ವಗತ ಸ್ವಾತಂತ್ರ್ಯಗುಣವ ಹರಿ
ತಗೆದು ಬ್ರಹ್ಮಾದ್ಯರಿಗೆ ಕೊಟ್ಟುದ
ಭೃಗು ಮುನಿಪ ಪೇಳಿದನು ಇಂದ್ರದ್ಯುಮ್ನ ಕ್ಷಿತಿಪನಿಗೆ ||

ಪರಮ ವಿಷ್ಣು ಸ್ವತಂತ್ರ ಮಾಯಾ
ತರುಣಿ ವಕ್ಷಸ್ಥಳ ನಿವಾಸಿಯು
ಸರಸಿಜೋದ್ಭವ ಪ್ರಾಣಶರ್ವರು ಸಚಿವರೆನಿಸುವರು ||
ಸರ್ವ ಕರ್ಮಗಳಲ್ಲಿ ತತ್ಪ್ರಿಯ
ಉರಗ ಭೂಷಣಹಂಕೃತಿತ್ರಯ
ಕರೆಸುವಮರೇಂದ್ರಾರ್ಕ ಮುಖರಿಂದ್ರಿಯಪರೆನಿಸುವರು || ೧ ||

ಈ ದಿವೌಕಸರಂತೆ ಕಲಿ ಮೊದ
ಲಾದ ದೈತ್ಯರು ಸರ್ವ ದೇಹದಿ
ತೋದಕರು ತಾವಾಗಿ ವ್ಯಾಪಾರಗಳ ಮಾಡುವರು ||
ವೇಧಸಂದದಿ ಕಲಿಯು ಹಂಕಾ
ರಾಧಿಪಾಧಮ ಮಧುಕೈಟಭ
ಕ್ರೋಧಿಶಂಬರ ಮುಖರು ಮನಸ್ಸಿಗೆ ಸ್ವಾಮಿ ಎನಿಸುವರು || ೨ ||

ದೇವತೆಗಳೋಪಾದಿ ನಿತ್ಯದೊ -
ಳೀವಮಾದಿ ಸ್ವನಾಮದಿಂದಲಿ
ಯಾವದಿಂದ್ರಿಯಗಳೊಳು ವ್ಯಾಪಾರಗಳ ಮಾಡುವರು ||
ಸೇವಕರ ಸೇವಾನುಗುಣ ಫಲ -
ವೀವ ನೃಪನಂದದಲಿ ತನ್ನ ಸ್ವ -
ಭಾವ ಸ್ವಾತಂತ್ರ್ಯ ವಿಭಾಗವ ಮಾಡು ಕೊಟ್ಟ ಹರಿ || ೩ ||

ಅಗಣಿತ ಸ್ವಾತಂತ್ರ್ಯವ ನಾಲ್ -
ಬಗೆ ವಿಭಾಗವ ಮಾಡಿ ಒಂದನು
ತಗೆದು ದಶವಿಧಗೈಸಿ ವಾದರೆ ಪಂಚ ಪ್ರಾಣನಲಿ ||
ಮೊಗಚತುಷ್ಟಯನೋಳ್ ಸಪಾದ್ಯೈ -
ದುಗುಣವಿರಸಿದ ಮತ್ತೆ ದಶವಿಧ
ಯುಗಳ ಗಣವನು ಮಾಡಿ ಎರಡು ಸದಾಶಿವನೊಳಿಟ್ಟ || ೪ ||

ಪಾಕಶಾಸನ ಕಾಮರೊಳು ಸಾ -
ರ್ಧ್ಯೈಕವಿಟ್ಟ ದಶೇಂದ್ರಿಯರಸದಿ -
ವೌಕಸಾದ್ಯರೊಳೊಂದು ಯಾವ ಜ್ಜೀವರೊಳೊಂದು ||
ನಾಲ್ಕುವರೆ ಕಲ್ಯಾದಿ ದೈತ್ಯಾ -
ನೀಕಕಿತ್ತನು ಎರಡು ತ್ರಿವಿಧ ವಿ -
ವೇಕ ಗೈಸಿಂದಿರೆಗೆ ಒಂದೆರದಾತ್ಮ ತನ್ನೊಳಗೆ || ೫ ||

ಈ ವಿಧದಿ ಸ್ವಾತಂತ್ರ್ಯಽ ತತ್ವವ
ದೇವ ಮಾನವ ದಾನವರೊಳು ರ
ಮಾವಿನೋದಿ ವಿಭಾಗ ಮಾಡಿಟ್ಟಲ್ಲಿ ರಮಿಸುವನು ||
ಮೂವರೊಳಗಿದ್ದವರ ಕರ್ಮವ
ತಾ ವಿಕಾರವ ಗೈಸದಲೆ ಕ -
ಲ್ಪಾವಸಾನಕೆ ಕೊಡುವನಾಯಾಸವರವರ ಗತಿಯ || ೬ ||

ಆಲಯಗಳೊಗಿಪ್ಪ ದೀಪ
ಜ್ವಾಲೆ ವರ್ತಿಗಳನುಸರಿಸಿ ಜನ -
ರಾಳಿಗಳಿಗೊಪ್ಪುವ ತೆರದಿ ಹರಿ ತೋರ್ಪ ಸರ್ವತ್ರ ||
ಕಾಲ ಕಾಲದಿ ಶ್ರೀಧರಾ ದು -
ರ್ಗಾ ಲಲನೆಯರ ಕೂಡಿ ಸುಖ ಮಯ
ಲೀಲೆಗೈಯುಲು ತ್ರಿಗುಣ ಕಾರ್ಯಗಳಹವು ಜೀವರಿಗೆ || ೭ ||

ಇಂದ್ರಿಯಗಳಿಂ ಮಾಳ್ಪ ಕರ್ಮ
ದ್ವಂದ್ವಗಳ ತನಗರ್ಪಿಸಲು ಗೋ -
ವಿಂದ ಪುಣ್ಯವ ಕೊಂಡು ಪಾಪವ ಭಸ್ಮವನೆ ಮಾಳ್ಪ ||

ಇಂದಿರೇಶನ ಭಕ್ತಜನರನ
ನಿಂದಿಸುವರೊಳಗಿಪ್ಪ ಪುಣ್ಯವ
ತಂದು ತನ್ನವರೀವ ಪಾಪಗಳವರಿಗುಣಿಸುವನು || ೮ ||

ಹೊತ್ತು ಹೊತ್ತಿಗೆ ಪಾಪ ಕರ್ಮ ಪ್ರ -
ವರ್ತಕರ ನಿಂದಿಸದೆ ತನಗಿಂ -
ದುತ್ತಮರ ಗುಣ ಕರ್ಮಗಳ ಕೊಂಡಾಡದಲೆ ಇಪ್ಪ ||
ಮರ್ತ್ಯರಿಗೆ ಗೋ ಬ್ರಾಹ್ಮಣ ಸ್ತ್ರೀ
ಹತ್ಯ ಮೊದಲಾದಖಿಳ ದೋಷಗ -
ಳಿತ್ತಪನು ಸಂದೇಹ ಬಡಸಲ್ಲಖಿಳ ಶಾಸ್ತ್ರಮತ || ೯ ||

ತನ್ನ ಸ್ವಾತಂತ್ರ್ಯ ಗುಣಗಳ ಹಿ -
ರಣ್ಯಗರ್ಭಾದ್ಯರಿಗೆ ಕಲಿ ಮುಖ
ದಾನವರ ಸಂತತಿಗೆ ಅವರಧಿಕಾರವನುಸರಿಸಿ ||
ಪುಣ್ಯ ಪಾಪಗಳೀವ ಬಹು ಕಾ -
ರುಣ್ಯಸಾಗರನಲ್ಪಶಕ್ತಿಗ
ಳುಣ್ಣಲರಿಯದೆ ಇರಲು ಉಣಗಲಿಸಿದನು ಸರ್ವರಿಗೆ || ೧೦ ||

ಸತ್ಯವಿಕ್ರಮ ಪುಣ್ಯ ಪಾಪ ಸ
ಮಸ್ತರಿಗೆ ಕೊಡಲೋಸುಗದಿ ಸಾ -
ಲ್ವತ್ತು ಭಾಗವ ಮಾಡಿ ಲೇಶಾಂಶವನು ಜನಕೀವ ||
ಅತ್ಯಲ್ಪ ಪರಮಾಣುವಿಗೆ ಸಾ -
ಮರ್ಥ್ಯವನು ತಾ ಕೊಟ್ಟು ಸ್ಥೂಲ ಪ -
ದಾರ್ಥಗಳನುಂಡುಣಿಪ ಸರ್ವದ ಸರ್ವ ಜೀವರಿಗೆ || ೧೧ ||

ತಿಮಿರ ತರಣಿಗಳೇಕದೇಶದಿ
ಸಮನಿಸಿಪ್ಪವೆ ಎಂದಿಗಾದರೂ
ಭ್ರಮಣ ಛಳಿ ಬಿಸಲಂಜಿಕೆಗಳುಂಟೇನೋ ಪರ್ವತಕೆ ||
ಅಮಿತ ಜೀವರೊಳಿದ್ದು ಲಕುಮಿ
ರಮಣ ವ್ಯಾಪಾರಗಳನೆ ಮಾಡುವ
ಕಮಲಪತ್ರ ಸರೋವರಗಳೊಳಿಪ ತೆರನಂತೆ || ೧೨ ||

ಅಂಬುಜೋದ್ಭವಮುಖ್ಯಸುರ ಕಲಿ
ಶಂಬರಾದಿ ಸಮಸ್ತ ದೈತ್ಯ ಕ -
ದಂಬಕನುದಿನ ಪುಣ್ಯಪಾಪ ವಿಭಾಗವನೆ ಮಾಡಿ ||
ಅಂಬುಧಿಯ ಜಲವನು ಮಹಾಘಟ
ಬಿಂಬರಿತು ತುಂಬುವ ತೆರದಿ ಪ್ರತಿ
ಬಿಂಬರೊಳು ತಾನಿದ್ದು ಯೋಗ್ಯತೆಯಂತೆ ಫಲವೀವ || ೧೩ ||

ಇನಿತು ವಿಷ್ಣು ರಹಸ್ಯ ದೊಳು ಭೃಗು
ಮುನಿಪ ಇಂದ್ರದ್ಯುಮ್ನಗರುಹಿದ -
ದನು ಬುಧರು ಕೇಳುವದು ನಿತ್ಯದಿ ಮತ್ಸರ ಬಿಟ್ಟು ||
ಅನುಚಿತೋಕ್ತಿಗಳಿದ್ದರೆಯು ಸರಿ
ಗಣನೆ ಮಾಡದಿರೆಂದು ವಿದ್ವ -
ಜನಕೆ ವಿಜ್ಞಾಪನೆಯ ಮಾಡುವೆ ವಿನಯ ಪೂರ್ವಕದಿ || ೧೪ ||

ವೀತ ಭಯ ವಿಶ್ವೇಶ ವಿಧಿಪಿತ
ಮಾತುಳಾಂತಕ ಮಧ್ವವಲ್ಲಭ
ಭೂತಭಾವನನಂತ ಭಾಸ್ಕರ ತೇಜ ಮಹರಾಜ ||
ಗೌತಮನ ಮಡದಿಯನು ಕಾಯ್ದ -
ನಾಥ ರಕ್ಷಕ ಗುರುತಮ ಜಗ -
ನ್ನಾಥ ವಿಠ್ಠಲ ತನ್ನ ನಂಬಿದ ಭಕ್ತರನು ಪೊರೆವ || ೧೫ ||

# ೧೮ ಕ್ರೀಡಾ ವಿಲಾಸ ಸಂಧಿ (ಸರ್ವಸ್ವಾತಂತ್ರ್ಯ ಸಂಧಿ)

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಶ್ರೀನಿವಾಸನ ಚರಿತೆಗಳ ಪಾರ -
ಮಾನುರಾಗದಿ ಬೆಸಗೊಳಲು ಮುನಿ |
ಶೌನಕಾದ್ಯರಿಗರುಹಿದನು ಸೂತಾರ್ಯ ದಯದಿಂದ |

ಪಚನ ಭಕ್ಷಣ ಗಮನ ಭೋಜನ
ವಚನ ಮೈಥುನ ಶಯನ ವೀಕ್ಷಣ
ಅಚಲನ ಚಲನ ಪ್ರಯತ್ನವು ಸಾಧ್ಯವೆ ಜನಕೆ ||
ಶುಚಿಸದನ ದಯದಿಂದ ಜೀವರ
ನಿಚಯದೊಳು ತಾನಿಂತು ಮಾಡುವ
ಉಚಿತನೋಚಿತ ಕರ್ಮಗಳನೆಂದರಿದು ಕೊಂಡಾಡು || ೧ ||

ವಿಷ್ಟರಶ್ರವ ದೇಹದೊಳಗ ಪ್ರ
ವಿಷ್ಟನಾಗಿ ನಿರಂತರದಿ ಬಹು
ಚೇಷ್ಟೆಗಳ ಮಾಡುತಿರೆ ಕಂಡು ಸಜೀವಿ ಎನುತಿಹರು ||
ಹೃಷ್ಟರಾಗುವರವರ ನೋಡಿ ಕ -
ನಿಷ್ಟರೆಲ್ಲರು ಸೇವೆ ಮಾಳ್ಪರು
ಬಿಟ್ಟ ಕ್ಷಣದಲಿ ಕುಣಪನೆಂದರಿದುಪೇಕ್ಷಿಪರು || ೨ ||

ಕ್ರೀಡೆಗೋಸುಗ ಅವರವರ ಗತಿ
ನೀಡಲೋಸುಗ ದೇಹಗಳ ಕೊ
ಟ್ಟಾಡುವನು ಸ್ವೇಚ್ಛೆಯಲಿ ಬ್ರಹ್ಮೇಶಾದ್ಯರೊಳು ಪೊಕ್ಕು ||
ಮಾಡುವನು ವ್ಯಾಪಾರ ಬಹುವಿಧ
ಮೂಢ ದೈತ್ಯರೊಳಿದ್ದು ಪ್ರತಿದಿನ
ಕೇಡು ಲಾಭಗಳಿಲ್ಲ ಇದನರಿ ಯಾವ ಕಾಲದಲಿ || ೩ ||

ಅಕ್ಷರೇಡ್ಯನು ಬ್ರಹ್ಮವಾಯು
ತ್ರ್ಯಕ್ಷ ಸುರಪ ಸುರಾದಿಗಳಾ -
ಧ್ಯಕ್ಷನಾಗಿದ್ದೆಲ್ಲರೊಳು ವ್ಯಾಪಾರ ಮಾಡುತಿಹ ||
ಅಕ್ಷಯನು ಸತ್ಯಾತ್ಮಕನು ಪರಾ -
ಪೇಕ್ಷೆಯಿಲ್ಲದೆ ಸರ್ವರೊಳಗೆ ವಿ -
ಲಕ್ಷಣನು ತಾನಾಗಿ ಲೋಕವ ರಕ್ಷಿಸುತಲಿಪ್ಪ || ೪ ||

ಶ್ರೀ ಸರಸ್ವತಿ ಭಾರತೀ ಗಿರಿ -
ಜಾ ಶಚೀ ರತಿ ರೋಹಿಣೀ ಸಂ -
ಜ್ಞಾ ಶತರೂಪಾದ್ಯಖಿಳ ಸ್ತ್ರೀಯರೊಳು ಸ್ತ್ರೀರೂಪ ||

ವಾಸವಾಗಿದ್ದಲ್ಲೆರಿಗೆ ವಿ -
ಶ್ವಾಸ ತನ್ನವರಲ್ಲಿ ಕೊಟ್ಟೆಭಿ -
ಲಾಷೆಗಳ ಪೂರೈಸುತಿಪ್ಪನು ಯೋಗ್ಯತೆಯನರಿತು || ೫ ||

ಕೋಲು ಕುದುರೆಯ ಮಾಡಿ ಆಡುವ
ಬಾಲಕರ ತೆರನಂತೆ ಲಕ್ಷ್ಮೀ
ಲೋಲ ಸ್ವಾತಂತ್ರ್ಯ ಗುಣ ಬ್ರಹ್ಮಾದ್ಯರೊಳಗಿಟ್ಟು ||
ಲೀಲೆಗೈವನು ತನ್ನವರಿಗನು -
ಕೂಲನಾಗಿದ್ದೆಲ್ಲ ಕಾಲದಿ
ಖೂಳರಿಗೆ ಪ್ರತಿಕೂಲನಾಗಿಹ ಪ್ರಕಟನಾಗದಲೆ || ೬ ||

ಸೌಪರ್ಣಿ ವರವಹನ ನಾನಾ
ರೂಪನಾಮದಿ ಕರೆಸುತವರ ಸ -
ಮಿಪದಲ್ಲಿದ್ದಖಿಳ ವ್ಯಾಪಾರಗಳ ಮಾಡುವನು ||
ಪಾಪಪುಣ್ಯಗಳೆರಡು ಅವರ ಸ್ವ -
ರೂಪಗಳನನುಸರಿಸಿ ಉಣಿಪ ಪ -
ರೋಪಕಾರಿ ಪರೇಶ ಪೂರ್ಣಾನಂದ ಜ್ಞಾನಘನ || ೭ ||

ಅವರ ನಿದ್ರಾ ಮೈಥುನಗಳಹ -
ರಹ ಬಯಿಸಿ ಬಳಲುವ ಲಕ್ಷ್ಮೀ
ಮಹಿತನ ಮಹಾ ಮಹಿಮೆಗಳನೆಂತರಿವ ನಿತ್ಯದಲಿ ||
ಅಹಿಕ ಸೌಖ್ಯವ ಮರೆದು ಮನದಲಿ
ಗ್ರಹಿಸಿ ಶಾಸ್ತ್ರಾರ್ಥಗಳ ಪರಮೋ -
ತ್ಸಹದಿ ಕೊಂಡಾಡುತಲಿ ಮೈ ಮರೆದವರಿಗಲ್ಲದಲೆ || ೮ ||

ಬಂಧ ಮೋಕ್ಷ ಪ್ರದನ ಜ್ಞಾನವು
ಮಂದ ಮತಿಗಳಿಗೆಂತು ದೊರೆವುದು
ಬಿಂದು ಮಾತ್ರ ಸುಖಾನುಭವ ಪರ್ವತಕೆ ಸಮದುಃಖಃ ||
ಎಂದು ತಿಳಿಯದಲನ್ಯ ದೈವಗ -
ಳಿಂದ ಸುಖವಾಪೇಕ್ಷಿಸುವರು ಮು -
ಕುಂದ ನಾರಾಧನೆಯ ಬಿಟ್ಟವಗುಂಟೆ ಮುಕ್ತಿ ಸುಖ || ೯ ||

ರಾಜತಸ್ವಾಮಾತ್ಯ ಕರುಣದಿ
ನೈಜ ಜನರಿಗೆ ಕೊಟ್ಟು ಕಾರ್ಯ ನಿ -
ಯೋಜಿಸುವ ಮಾನಾಪಮಾನವ ಮಾಳ್ಪತೆರನಂತೆ ||
ಶ್ರೀ ಜನಾರ್ದನ ಸಕಲ ರೊಳಗಪ
ರಾಜಿತನು ತಾನಾಗಿ ಸರ್ವತ್ರ
ಯೋಜನವ ಮಾಡಿಸುತ ಮಾಡುವ ಫಲಕೆ ಗುರಿಮಾಡಿ || ೧೦ ||

ವಾಸುದೇವ ಸ್ವತಂತ್ರವ ಸರೊ
ಜಾಸನಾದ್ಯಮರಾಸುರರಿಗೀಯು -
ಲೋಸುಗರ್ಧವ ತೆಗೆದದರೊಳಗರ್ಧವ ಚತುರ್ಭಾಗ ||
ಗೈಸಿ ಒಂದನು ಶತವಿಧ ದ್ವಿಪಂ -
ಚಾಶತಾಬ್ಜಜಗಷ್ಮಚತ್ವಾ -
ರಿಂಶವನಿಲನಿಗಿತ್ತು ವಾಣಿ ಭಾರತಿಗರ್ಧ || ೧೧ ||

ದ್ವಿತಿಯ ಪಾದವ ತೆಗೆದು ಕೊಂಡು
ಶತವಿಭಾಗವ ಮಾಡಿ ತಾ ವಿಂ -
ಶತಿ ಉಮೇಶನೊಳಿಟ್ಟು ಇಂದ್ರನೊಳೈದಧಿಕ ಹತ್ತು ||
ರತಿಪನೊಳಗಿನಿತಿಟ್ಟ ಖಿಳದೇ -
ವತೆಗಳೊಳಗೀರೈದು ಜೀವ ಪ್ರ
ತತಿಯೊಳು ದಶವೈದದಿಕ ನಾಲ್ವತ್ತು ದೈತ್ಯರೊಳು || ೧೨ ||

ಕಾರುಣಿಕ ಸ್ವಾತಂತ್ರಿಯ ತ್ವವ
ಮೂರು ವಿಧಗೈಸೆರಡು ತನ್ನೊಳು
ನಾರಿಗೊಂದನು ಕೊಟ್ಟ ಸ್ವಾತಂತ್ರಿಯವ ಸರ್ವರಿಗೆ ||
ಧಾರುಣಿಪ ತನ್ನನುಗರಿಗೆ ವ್ಯಾ -
ಪಾರ ಕೊಟ್ಟು ಗುಣಾಗುಣಗಳ ವಿ
ಚಾರ ಮಾಡುವ ತೆರದಿ ತ್ರಿಗುಣವ ವ್ಯಕ್ತಿಯನೆ ಮಾಳ್ಪ || ೧೩ ||

ಪುಣ್ಯ ಕರ್ಮಕೆ ಸಹಾಯವಾಗುವ
ಧನ್ಯರಿಗೆ ಕಲ್ಯಾದಿ ದೈತ್ಯರ
ಪುಣ್ಯ ಫಲಗಳನೀವದಿತಿಜರ ಪಾಪಕರ್ಮ ಫಲ ||

ಅನ್ಯ ಕರ್ಮವ ಮಾಳ್ಪರಿಗೆ ಅನು -
ಗುಣ್ಯ ಜನರಿಗೆ ಕೊಡುವ ಬಹು ಕಾ -
ರುಣ್ಯ ಸಾಗರ ಈ ತೆರದಿ ಭಕ್ತರನು ಸಂತೈಪ || ೧೪ ||

ನಿರುಪಮಗೆ ಸರಿಯುಂಟು ಎಂದು -
ಚ್ಚರಿಸುವವ ತದ್ಭಕ್ತರೊಳು ಮ -
ತ್ಸರಿಸುವವ ಗುಣಗಣಗಳಿಗೆ ಭೇದಗಳ ಪೇಳುವವ ||
ದರ ಸುದರ್ಶನ ಊರ್ಧ್ವ ಪುಂಡ್ರವ
ಧರಿಸಿದವರೊಳು ದ್ವೇಷಿಸುವ ಹರಿ
ಚರಿತೆಗಳ ಕೇಳದಲೆ ಲೋಕರ ವಾರ್ತೆ ಕೇಳುವವ || ೧೫ ||

ಏವಮಾದಿ ದ್ವೇಷಉಳ್ಳ ಕು -
ಜೀವರೆಲ್ಲರು ದೈತ್ಯರೆಂಬೊರು
ಕೋವಿದರ ವಿಜ್ಞಾನ ಕರ್ಮವ ನೋಡಿ ನಿಂದಿಪರು ||
ದೇವ ದೇವನ ಬಿಟ್ಟು ಯಾವ
ಜ್ಜೀವ ಪರಿಯಂತರದಿ ತುಚ್ಛರ
ಸೇವೆಯಿಂದುಪಜೀವಿಸುವರಜ್ಞಾನಕೊಳಗಾಗಿ || ೧೬ ||

ಕಾಮಲೋಭ ಕ್ರೋಧ ಮದ ಹಿಂ -
ಸಾಮಯಾನೃತ ದಂಭ ಕಪಟ ತ್ರಿ -
ಧಾಮನವತಾರಗಳ ಭೇದ ಅಪೂರ್ಣಸುಖ ಬದ್ಧ ||
ಆಮಿಷ ನಿವೇದಿತವಭೋಜ್ಯತಿ -
ತಾಮಸಾನ್ನವನುಂಬ ತಾಮಸ
ಶ್ರೀ ಮದಾಂಧರ ಸಂಗದಿಂದಲಿ ತಮವೆ ವರ್ಧಿಪುದು || ೧೭ ||

ಜ್ಞಾನ ಭಕುತಿ ವಿರಕ್ತಿ ವಿನಯ ಪು |
ರಾಣ ಶಾಸ್ತ್ರ ಶ್ರವಣ ಚಿಂತನ
ದಾನ ಶಮ ದಮ ಯಜ್ಞ ಸತ್ಯಾಹಿಂಸ ಭೂತದಯಾ ||
ಧ್ಯಾನ ಭಗವನ್ನಾಮ ಕೀರ್ತನ
ಮೌನ ಜಪ ತಪ ವ್ರತ ಸುತೀರ್ಥ
ಸ್ನಾನ ಮಂತ್ರ ಸ್ತೋತ್ರ ವಂದನ ಸಜ್ಜನರ ಗುಣವೂ || ೧೮ ||

ಲೇಶಸ್ವಾತಂತ್ರ್ಯ ಗುಣವನು ಪ್ರ
ವೇಶಗೈಸಿದ ಕಾರಣಾದಿ ಗುಣ
ದೋಷಗಳು ತೋರುವವು ಸತ್ವಾಸತ್ವಜೀವರೊಳು ||
ಶ್ವಾಸ ಭೋಜನ ಪಾನ ಶಯನ ವಿ
ಲಾಸ ಮೈಥುನ ಗಮನ ಹರ್ಷ
ಕ್ಲೇಶ ಸ್ವಪ್ನ ಸುಷುಪ್ತಿ ಜಾಗ್ರತಿಯಹವು ಚೇತನಕೆ || ೧೯ ||

ಅರ್ಧ ತನ್ನೊಳಗಿರಿಸಿ ಉಳಿದೊಂ -
ದರ್ಧ ವಿಭಾಗವಗೈಸಿ ವೃಜಿ -
ನಾರ್ದನನು ಪೂರ್ವದಲಿ ಸ್ವಾತಂತ್ರ್ಯವ ಕೊಟ್ಟಂತೆ ||
ಸ್ವರ್ಧುನೀಪಿತ ಕೊಡುವವರ ಸುಖ
ವೃದ್ಧಿ ಗೋಸುಗ ಬ್ರಹ್ಮ ವಾಯು
ಕಪರ್ದಿ ಮೊದಲಾದವರೊಳಿರ್ದವರೋಗ್ಯತೆಯನರಿತು || ೨೦ ||

ಹಲಧರಾನುಜ ಮಾಳ್ಪ ಕೃತ್ಯವ
ತಿಳಿಯದಾಹಂಕಾರದಿಂದೆ -
ನ್ನಳಿದು ವಿಧಿಯು ನಿಷೇಧ ಪಾತ್ರರು ಇಲ್ಲವೆಂಬುವಗೆ ||
ಫಲಗಳ ದ್ವಯ ಕೊಡುವ ದೈತ್ಯರ
ಕಲುಷ ಕರ್ಮವ ಬಿಟ್ಟು ಪುಣ್ಯವ
ಸೆಳೆದು ತನ್ನೊಳಗಿಟ್ಟು ಕ್ರಮದಿಂ ಕೊಡುವ ಭಕ್ತರಿಗೆ || ೨೧ ||

ತೋಯಜಾಪ್ತನ ಕಿರಣ ವೃಕ್ಷ
ಛಾಯ ವರ್ತಿಸುವಂತೆ ಕಮಲದ -
ಳಾಯತಾಕ್ಷನು ಸರ್ವರೊಳು ವ್ಯಾಪಿಸಿದ ಕಾರಣಾದಿ ||
ಹೇಯ ಸದ್ಗುಣ ಕರ್ಮ ತೋರ್ಪವು
ನ್ಯಾಯ ಕೋವಿದರಿಗೆ ನಿರಂತರ
ಶ್ರೀಯರಸೆ ಸರ್ವೋತ್ತಮನೆಂದು ಪೇಳುವರು || ೨೨ ||

ಮೂಲಕಾರಣ ಪ್ರಕೃತಿ ಎನಿಪ ಮ -
ಹಾಲಕುಮಿ ಎಲ್ಲರೊಳಗಿದ್ದು ಸು -
ಲೀಲೆಗೈಯುತ ಪುಣ್ಯ ಪಾಪಗಳರ್ಪಿಸಲು ಪತಿಗೆ ||

ಪಾಲಗಡಲೊಳು ಬಿದ್ದ ಜಲ ಕೀ -
ಲಾಲವೆನಿಪುದೆ ಜೀವಕೃತ ಕ -
ರ್ಮಾಳಿ ತದ್ವತು ಶುಭವೆ ಎನಿಪುದು ಎಲ್ಲ ಕಾಲದಲಿ || ೨೩ ||

ಜ್ಞಾನ ಸುಖ ಬಲ ಪೂರ್ಣ ವಿಷ್ಣುವಿ -
ಗೇನು ಮಾಳ್ಪವು ತ್ರಿಗುಣ ಕಾರ್ಯ ಕೃ -
ಶಾನುವಿನ ಕ್ರಿಮಿ ಕವಿದು ಭಕ್ಷಿಪುದುಂಟೆ ಲೋಕದೊಳು ||
ಈ ನಳಿನಜಾಂಡವನು ಬ್ರಹ್ಮೇ -
ಶಾನ ಮುಖ್ಯ ಸುರಾಸುರರ ಕಾ
ಲಾನಲನ ಪೋಲ್ ನುಂಗುವವಗೀ ಪಾಪಗಳ ಭಯವೆ || ೨೪ ||

ಮೋದ ಶಿರ ದಕ್ಷಿಣ ಪಕ್ಷ ಪ್ರ -
ಮೋದ ಉತ್ತರ ಪಕ್ಷವೆಂದು ಋ -
ಗಾದಿ ಶೃತಿಗಳು ಪೇಳುವವು ಆನಂದಮಯ ಹರಿಗೆ ||
ಮೋದ ವೈಷಿಕ ಸುಖ ವಿಶೇಷ ಪ್ರ -
ಮೋದ ಪಾರತ್ರಿಕ ಸುಖ ಪ್ರದ -
ನಾದ ಕಾರಣದಿಂದ ಮೋದ ಪ್ರಮೋದ ನೆನಿಸುವನು || ೨೫ ||

ಎಂದಿಗಾದರು ವೃಷ್ಟಿಯಿಂದ ವ -
ಸುಂಧರೆಯೊಳಿಪ್ಪಖಿಳ ಜಲದಿಂ
ಸಿಂಧು ವೃದ್ಧಿಯ ನೈದುವುದೆ ಬಾರದಿರೆ ಬರಿದಹುದೆ ||
ಕುಂದು ಕೊರತೆಗಳಿಲ್ಲದಿಹ ಸ್ವಾ -
ನಂದ ಸಂಪೂರ್ಣ ಸ್ವಭಾವಗೆ
ಬಂದು ಮಾಡುವದೇನು ಕರ್ಮಾಕರ್ಮ ಜನ್ಯಫಲ || ೨೬ ||

ದೇಹ ವೃಕ್ಷದೊಳಿರಡು ಪಕ್ಷಿಗ -
ಳಿಹವೆಂದಿಗೂ ಬಿಡವೆ ಪರಮ
ಸ್ನೇಹದಿಂದಲಿ ಕರ್ಮಜ ಫಲಗಳುಂಬ ಜೀವಖಗಾ ||
ಶ್ರೀ ಹರಿಯು ತಾ ಸಾರ ಭೋಕ್ತನು
ದ್ರೋಹಿಸುವ ಕಲ್ಯಾದಿ ದೈತ್ಯ ಸ -
ಮೂಹಕೀವ ವಿಶಿಷ್ಟ ಪಾಪ ಕ್ಲೇಶ ಎಲ್ಲರಿಗೆ || ೨೭ ||

ದ್ಯುಮಣಿ ಕಿರಣವ ಕಂಡ ಮಾತ್ರದಿ
ತಿಮಿರ ಓಡುವ ತೆರದಿ ಲಕ್ಷ್ಮೀ
ರಮಣ ನೋಡಿದ ಮಾತ್ರದಿಂದಘನಾಶ ವೈದುವದು ||
ಕಮಲ ಸಂಭವ ಮುಖ್ಯ ಎಲ್ಲಾ
ಸುಮನಸರೊಳಿಹ ಪಾಪರಾಶಿಯ -
ನಮರಮುಖನಂದದಲಿ ಭಸ್ಮವ ಮಾಳ್ಪ ಹರಿ ತಾನು || ೨೮ ||

ಚತುರಶತ ಭಾಗದಿ ದಶಾಂಶದೊ -
ಳಿತರ ಜೀವರಿಗೀವ ಲೇಶವ
ದಿತಿಜ ದೇವರ್ಕಳಿಗೆ ಕೊಡುವ ವಿಶಿಷ್ಟ ದುಃಖಸುಖ ||
ಮತಿ ವಿಹೀನ ಪ್ರಾಣಿಗಳಿಗಾ -
ಹುತಿಯ ಸುಖ ಮೃತಿದುಃಖವರ ಯೋ -
ಗ್ಯತೆಯನರಿತು ಪಿಪೀಲ ಮಶಕಾದಿಗಳಿಗೀವ ಹರಿ || ೨೯ ||

ನಿತ್ಯ ನಿರಯಾಂಧಾಖ್ಯ ಕೂಪದಿ
ಭೃತ್ಯರಿಂದೊಡಗೂಡಿ ಪುನರಾ
ವರ್ತಿ ವರ್ಜಿತ ಲೋಕ ವೈದುವ ಕಲಿಯು ದ್ವೇಷದಲಿ ||
ಸತ್ಯ ಲೋಕಾಧಿಪ ಚತುರ್ಮುಖ
ತತ್ವದೇವರ್ಕಳ ಸಹಿತ ನಿಜ
ಮುಕ್ತಿಯೈದುವ ಹರಿ ಪದಾಬ್ಜವ ಭಜಿಸಿ ಭಕುತಿಯಲಿ || ೩೦ ||

ವಿಧಿನಿಷೇಧಗಳೆರಡು ಮರಿಯದೆ
ಮಧುವಿರೋಧಿಯ ಪಾದಕರ್ಪಿಸು
ಅದಿತಿ ಮಕ್ಕಳಿಗೀವ ಪುಣ್ಯವ ಪಾಪ ದೈತ್ಯರಿಗೆ ||
ಸುದರುಶನಧರಗೀಯದಿರೆ ಬಂ -
ದೊದಗಿ ವೈವರು ಪುಣ್ಯ ದೈತ್ಯರು
ಅಧಿಪರಿಲ್ಲ ವೃಕ್ಷಗಳ ಫಲದಂತೆ ನಿತ್ಯದಲಿ || ೩೧ ||

ತಿಲಜ ಕಶ್ಮಲ ತ್ಯಜಿಸಿ ದೀಪವು
ತಿಳಿಯ ತೈಲವ ಗ್ರಹಿಸಿ ಮಂದಿರ
ದೊಳಗೆ ವ್ಯಾಪಿಸಿ ಇಪ್ಪ ಕತ್ತಲೆ ಭಂಗಿಸುವ ತೆರದಿ ||

ಕಲಿ ಮೊದಲುಗೊಂಡಖಿಳ ದಾನವ
ಕುಲಜರನುದಿನ ಮಾಳ್ಪ ಪುಣ್ಯಜ
ಫಲವ ಬ್ರಹ್ಮಾದ್ಯರಿಗೆ ಕೊಟ್ಟಿಲ್ಲಲ್ಲೆ ರಮಿಸುವನು || ೩೨ ||

ಇರ್ದಲೆಯು ನಿತ್ಯದಲಿ ಮೇಧ್ಯಾ -
ಮೇಧ್ಯ ವಸ್ತುಗಳುಂಡು ಲೋಕದಿ
ಶುದ್ಧ ಶುಚಿಯೆಂದೆನಿಸಿ ಕೊಂಬನು ವೇದ ಸ್ಮೃತಿಗಳೊಳು ||
ಬುದ್ಧಿ ಪೂರ್ವಕವಾಗಿ ವಿಬುಧರು
ಶ್ರದ್ಧೆಯಿಂದರ್ಪಿಸಿದ ಕರ್ಮನಿ
ಷಿದ್ಧವಾದರೂ ಸರಿಯೆ ಕೈಕೊಂಡುದ್ಧರಿಸುತಿಪ್ಪ || ೩೩ ||

ಒಡೆಯರಿದ್ದ ವನಸ್ಥ ಫಲಗಳ
ಬಡಿದು ತಿಂಬುವರುಂಟೆ ಕಂಡರೆ
ಹೊಡೆದು ಬಿಸುಡುವರೆಂಬ ಭಯದಿಂ ನೋಡಲಂಜುವರು ||
ಬಿಡದೆ ಮಾಡುವ ಕರ್ಮಗಳು ಮನೆ
ಮಡದಿ ಮಕ್ಕಳು ಬಂಧುಗಳು ಕಾ -
ರೊಡಲನಾಳುಗಳು ಎಂದ ಮಾತ್ರದಿ ಓಡುವರುದುರಿತು || ೩೪ ||

ಜ್ಞಾನ ಕರ್ಮೇಂದ್ರಿಯಗಳಿಂದೇ -
ನೇನು ಮಾಡುವ ಕರ್ಮಗಳು ಲ -
ಕ್ಷ್ಮೀನಿವಾಸನಿಗರ್ಪಿಸುತಲಿರು ಕಾಲ ಕಾಲದಲಿ ||
ಪ್ರಾಣಪತಿ ಕೈಕೊಂಡು ನಾನಾ
ಯೋನಿಯೈದಿಸನೊಮ್ಮೆ ಕೊಡದಿರೆ
ದಾನವರು ಸೆಳೆದೊಯ್ವರೆಲ್ಲಾ ಪುಣ್ಯರಾಶಿಗಳ || ೩೫ ||

ಶ್ರುತಿ ಸ್ಮೃತ್ಯರ್ಥವ ತಿಳಿದವಂ -
ಮತಿ ವಿಶಿಷ್ಟನು ಕರ್ಮ ಮಾಡಲು
ಪ್ರತಿ ಗ್ರಹಿಸನವ ಪಾಪಗಳ ಕೊಡುತಿಪ್ಪ ನಿತ್ಯದಲಿ ||
ಚತುರದಶ ಭುವನಾಧಿಪತಿ ಕ್ರತು
ಕೃತ ಕೃತಜ್ಞನಿಯಾಮಕನು ಎನೆ
ಮತಿಭ್ರಂಶ ಪ್ರಮಾದ ಸಂಕಟ ದೋಷವವಗಿಲ್ಲ || ೩೬ ||

ವಾರಿಜಾಸನ ಮುಖ್ಯರಾಜ್ಞಾ
ಧಾರಕರು ಸರ್ವಸ್ವತಂತ್ರರ
ಮಾರಮಣನೆಂದರಿದು ಇಷ್ಟಾನಿಷ್ಟ ಕರ್ಮಫಲ ||
ಸಾರಭೋಕ್ತನಿಗರ್ಪಿಸಲು ಸ್ವೀ -
ಕಾರ ಮಾಡುವ ಪಾಪ ಫಲ ಕು -
ಬೇರ ನಾಮಕ ದೈತ್ಯರಿಗೆ ಕೊಟ್ಟವರ ನೋಯಿಸುವ || ೩೭ ||

ಕ್ರೂರ ದೈತ್ಯರೊಳಿದ್ದು ತಾನೆ
ಪ್ರೇರಿಸುವ ಕಾರಣದಿ ಹರಿಗೆ ಕು -
ಬೇರನೆಂಬೊರು ಎಲ್ಲರೊಳು ನಿರ್ಗತಗತಿಗೆ ನಿರುತ ||
ಸೂರಿಗಮ್ಯಗೆ ಸೂರ್ಯನೆಂಬರು
ದೂರ ತೋಕಗೆ ಶುಕ್ಲಲಿಂಗ ಶ -
ರೀರವಿಲ್ಲದ ಕಾರಣದಲಿ ಅಕಾಯನೆನಿಸುವನು || ೩೮ ||

ಹೇಳಲೊಶವಲ್ಲದ ಮಹಾಪಾ -
ಪಾಳಿಗಳ ನೊಂದೇಕ್ಷಣದಿ ನಿ -
ರ್ಮೂಲಗೈಸಲುಬೇಕು ಎಂಬವಗೊಂದೆ ಹರಿನಾಮ ||
ನಾಲಿಗೆ ಯೊಳುಳ್ಳವಗೆ ಪರಮ ಕೃ -
ಪಾಳು ಕೃಷ್ಣನು ಕೈಪಿಡಿದು ತ -
ನ್ನಾಲಯದೊಳಿಟ್ಟನುದಿನದಲಾನಂದ ಬಡಿಸುವನು || ೩೯ ||

ರೋಗಿಯೌಷಧ ಪಥ್ಯದಿಂದ ನಿ -
ರೋಗಿ ಯೆನಿಸುವ ತೆರದಿ ಶ್ರೀ ಮ -
ದ್ಭಾಗವತ ಸುಶ್ರವಣಗೈದು ಭವಾಖ್ಯ ರೋಗವನು ||
ನೀಗಿ ಶಬ್ದಾದ್ಯಖಿಳ ವಿಷಯ ನಿ -
ಯೋಗಿಸು ಹರೀಂದ್ರಿಯವನಿಲನೊಳು
ಶ್ರೀ ಗುರು ಜಗನ್ನಾಥ ವಿಠಲ ಪ್ರೀತನಾಗುವನು || ೪೦ ||

# ೧೯ ಕರ್ಮವಿಮೋಚನ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಮೂಲ ನಾರಾಯಣನು ಮಾಯಾ
ಲೋಲನಂತವತಾರ ನಾಮಕ
ವ್ಯಾಳರೂಪ ಜಯಾರಮಣನಾವೇಶನೆನಿಸುವನು ||
ಲೀಲೆಗೈವಾನಂತ ಚೇತನ
ಜಾಲದೊಳು ಪ್ರದ್ಯುಮ್ನ ಬ್ರಹ್ಮಾಂ -
ಡಾಲಯದ ಒಳಹೊರಗೆ ನೆಲಸಿಹ ಶಾಂತಿಯನಿರುದ್ಧ || ೧ ||

ಐದು ಕಾರಣರೂಪ ಇಪ್ಪ
ತ್ತೈದು ಕಾರ್ಯಗಳೆನಿಸುವವು ಆ -
ರೈದು ರೂಪದಿ ರಮಿಸುತಿಪ್ಪನು ಈ ಚರಾಚರದಿ ||
ಭೇದವರ್ಜಿತ ಮೂಜಗಜ್ಜ -
ನ್ಮಾದಿ ಕಾರಣ ಮುಕ್ತಿ ದಾಯಕ
ಸ್ವೋದರದೊಳಿಟ್ಟೆಲ್ಲರನು ಸಂತೈಪ ಸರ್ವಜ್ಞ || ೨ ||

ಕಾರ್ಯಕಾರಣ ಕರ್ತೃಕಗಳೊಳು ಸ್ವ
ಭಾರ್ಯರಿಂದೊಡಗೂಡಿ ಕಪಿಲಾ -
ಚಾರ್ಯ ಕ್ರೀಡಿಸುತಿಪ್ಪ, ತನ್ನೊಳು ತಾನೆ ಸ್ವೇಚ್ಛೆಯಲೀ ||
ಪ್ರೇರ್ಯನಲ್ಲ ರಮಾಬ್ಜಭವ ಭವ -
ರಾರ್ಯ ರಕ್ಷಿಸಿ ಶಿಕ್ಷಿಸುವನು ಸ್ವ -
ವೀರ್ಯದಿಂದಲಿ ದಿವಿಜ ದಾನವ ತತಿಯ ದಿನದಿನದಿ || ೩ ||

ಈ ಸಮಸ್ತ ಜಗತ್ತಿನೊಳಗಾ -
ಕಾಶದೊಳಗಿರುತಿಪ್ಪ ವ್ಯಾಪ್ತಾ -
ವೇಶನವತಾರಾಂತರಾತ್ಮಕನಾಗಿ ಪರಮಾತ್ಮ ||
ನಾಶರಹಿತ ಜಗತ್ತಿನೊಳಗವ
ಕಾಶದನು ತಾನಾಗಿ ಯೋಗೀ -
ಶಾಶಯಸ್ಥಿತ ತನ್ನೊಳಗೆಲ್ಲರನಿಟ್ಟು ಸಲಹುವನು. || ೪ ||

ದಾರು ಪಾಷಾಣಗತ ಪಾವಕ
ಬೇರೆ ಬೇರಿಪ್ಪಂತೆ ಕಾರಣ
ಕಾರ್ಯಗಳ ಒಳಗಿದ್ದು ಕಾರಣ ಕಾರ್ಯನೆಂದೆನಿಸಿ ||
ತೋರಿಕೊಳ್ಳದೆ ಎಲ್ಲರೊಳು ವ್ಯಾ -
ಪಾರ ಮಾಡುವ ಯೋಗ್ಯತೆಗಳನು -
ಸಾರ ಫಲಗಳನುಣಿಸಿ ಸಂತೈಸುವ ಕೃಪಾಸಾಂದ್ರಾ || ೫ ||

ಊರ್ಮಿಗಳವೋಲಿಪ್ಪ ಕರ್ಮಾ -
ಕರ್ಮಜನ್ಯ ಫಲಾ ಫಲಂಗಳ
ನಿರ್ಮಲಾತ್ಮನು ಮಾಡಿಸಿ ಉಂಡುಣಿಸುತ್ತಿಪ್ಪ ||
ನಿರ್ಮಮ ನಿರಾಮಯ ನಿರಾಶ್ರಯ
ಧರ್ಮವಿದ್ವರ್ಮಾತ್ಮ ಧರ್ಮಗ
ದುರ್ಮತಿ ಜನರೊಲ್ಲನ ಪ್ರತಿಮಲ್ಲ ಶ್ರೀನಲ್ಲಾ || ೬ ||

ಜಲಪ ಬಡವಾನಲಗಳಂಬುಧಿ
ಜಲವನುಂಬುವವಬ್ಜಮಳೆಗರೆ -
ದಿಳಿಗೆ ಶಾಂತಿಯ ನೀವುದನಳನು ತಾನೆ ಭಂಜಿಪುದು ||
ತಿಳಿವುದೀಪರಿಯಲ್ಲಿ ಲಕ್ಷ್ಮೀ
ನಿಲಯ ಗುಣಕೃತ ಕರ್ಮಜ ಫಲಾ
ಫಲಗಳುಂಡುಣಿಸುವನು ಸರ್ವಗ ಸರ್ವಜೀವರಿಗೆ || ೭ ||

ಪುಸ್ತಕಗಳವಲೋಕಿಸುತ ಮಂ -
ತ್ರಸ್ತುತಿಗಳೆನಲೇನು ರವಿಯುದ -
ಯಸ್ತಮಯ ಪರಿಯಂತ ಜಪಗಳಮಾಡಿ ಫಲವೇನು ||
ಹೃತಸ್ಥ ಪರಮಾತ್ಮನೆ ಸಮಸ್ತಾ -
ವಸ್ಥೆ ಗಳೊಳಿದ್ದೆಲ್ಲರೊಳಗೆ ನಿ -
ರಸ್ತ ಕಾಮನು ಮಾಡಿ ಮಾಡಿಪನೆಂದು ತಿಳಿಯದವ || ೮ ||

ಮದ್ಯ ಭಾಂಡವ ದೇವನದಿಯೊಳ -
ಗದ್ದಿ ತೊಳೆಯಲು ನಿತ್ಯದಲಿ ಪರಿ -
ಶುದ್ಧವಾಹುದೆ ಎಂದಿಗಾದರೂ ಹರಿ ಪದಾಬ್ಜಗಳ ||

ಬುದ್ಧಿಪೂರ್ವಕ ಭಜಿಸದವಗೆ ವಿ -
ರುದ್ಧವೆನಿಸುವದೆಲ್ಲ ಕರ್ಮ ಸ -
ಮೃದ್ಧಿಗಳ ದುಃಖವನೆ ಕೊಡುತಿಹವಧಮ ಜೀವರಿಗೆ || ೯ ||

ಭಕ್ತಿ ಪೂರ್ವಕವಾಗಿ ಮುಕ್ತಾ -
ಮುಕ್ತನಿಯಾಮಕನ ಸರ್ವೋ -
ದ್ರಿಕ್ತ ಮಹಿಮೆಗಳನನವರತ ಕೊಂಡಾಡು ಮರೆಯದಲೆ ||
ಸಕ್ತನಾಗದೆ ಲೋಕವಾರ್ತೆ ಪ್ರ -
ಸಕ್ತಿಗಳನೀಡಾಡಿ ಶ್ರುತಿ ಸ್ಮೃ -
ತ್ಯುಕ್ತ ಕರ್ಮವ ಮಾಡುತಿರು ಹರಿ ಆಜ್ಞೆಯೆಂದರಿತು || ೧೦ ||

ಲೋಪವಾದರು ಸರಿಯೆ ಕರ್ಮಜ
ಪಾಪ ಪುಣ್ಯಗಳೆರಡು ನಿನ್ನನು
ಲೇಪಿಸವು ನಿಷ್ಕಾಮುಕನು ನೀನಾಗಿ ಮಾಡುತಿರೆ ||
ಸೌಪರ್ಣಿ ವರಹನ ನಿನ್ನ ಮ -
ಹಾಪರಾಧಗಳೆಣಿಸದಲೆ ಸ್ವ -
ರ್ಗಾಪವರ್ಗದೊಳಿಟ್ಟು ಸಲಹುವ ಸತತ ಸುಖಸಾಂದ್ರ || ೧೧ ||

ಸ್ವರತ ಸುಖಮಯ ಸುಲಭ ವಿಶ್ವಂ -
ಭರ ವಿಶೋಕ ಸುರಾಸುರಾರ್ಚಿತ
ಚರಣಯುಗ ಚಾರ್ವಾಂಗ ಶಾರ್ಙ್ಗ ಶರಣ್ಯ ಜಿತಮನ್ಯು ||
ಪರಮಸುಂದರತರ ಪರಾತ್ಪರ
ಶರಣ ಜನ ಸುರಧೇನು ಶಾಶ್ವತ
ಕರುಣಿ ಕಂಜದಳಾಕ್ಷ ಕಾಯನೆ ಕಂಗೋಳಿಪ ಸಿದ್ಧ || ೧೨ ||

ನಿರ್ಮಲನು ನೀನಾಗಿ ಕರ್ಮವಿ
ಕರ್ಮಗಳನು ನಿರಂತರದಲಿ ಸು
ಧರ್ಮನಾಮಕಗರ್ಪಿಸುತ ನಿಷ್ಕಲುಷ ನೀನಾಗು ||
ಬ್ರಹ್ಮಗರ್ಭನ ಜನಕ ದಯದಲಿ
ದುರ್ಮತಿಗಳನು ಕೊಡದದೆ ತನ್ನಯ
ಹರ್ಮದೊಳಗಿಟ್ಟೆಲ್ಲ ಕಾಲದಿ ಕಾವ ಕೃಪೆಯಿಂದ || ೧೩ ||

ಕಲ್ಪ ಕಲ್ಪದಿ ಶರಣಜನ ಪರ
ಕಲ್ಪವೃಕ್ಷನು ತನ್ನ ನಿಜ ಸಂ -
ಕಲ್ಪದನುಸಾರದಲಿ ಕೊಡುತಿಪ್ಪನು ಫಲಾಫಲವ ||
ಅಲ್ಪಸುಖದಾಪೇಕ್ಷೆಯಿಂದಹಿ -
ತಲ್ಪನಾರಾಧಿಸದಿರೆಂದಿಗು
ಶಿಲ್ಪಕನ ಕೈಸಿಕ್ಕ ಶಿಲೆಯಂದದಲಿ ಸಂತೈಪ || ೧೪ ||

ದೇಶ ಭೇದಾಕಾಶದಂದದಿ
ವಾಸುದೇವನು ಸರ್ವ ಭೂತನಿ -
ವಾಸನೆನಿಸಿ ಚರಾಚರಾತ್ಮಕನೆಂದು ಕರೆಸುವನು ||
ದ್ವೇಷ ಸ್ನೇಹೋದಾಸೀನಗಳ -
ಲ್ಲೀ ಶರೀರಗಳೊಳಗೆ ಅವರೋ
ಪಾಸನೆಗಳಂದದಲಿ ಫಲವೀವನು ಪರಬ್ರಹ್ಮ || ೧೫ ||

ಸಂಚಿತಾಗಾಮಿಗಳ ಕರ್ಮ ವಿ -
ರಿಂಚಿ ಜನಕ ಭಜಿಸೆ ಕೆಡುವವು
ಮಿಂಚಿನಂದದಿ ಪೊಳೆವ ಪುರುಷೋತ್ತಮ ಹೃದಂಬರದೀ ||
ವಂಚಿಸುವ ಜನರೊಲ್ಲ ಶ್ರೀವ -
ತ್ಸಾಂಕಿತ ಕೌಸ್ತುಭವಕ್ಷ ತಾನಿ -
ಷ್ಕಿಂಚನ ಜನಪ್ರಿಯ ಸುರಮುನಿಗೇಯ ಶುಭಕಾಯ || ೧೬ ||

ಕಾಲ ದ್ರವ್ಯ ಸುಕರ್ಮ ಶುದ್ಧಿಯ
ಪೇಳುವರು ಅಲ್ಪರಿಗೆ ಅವು ನಿ -
ರ್ಮೂಲಗೈಸುವವಲ್ಲ ಪಾಪಿಗಳೆಲ್ಲ ಕಾಲದಲಿ ||
ತೈಲಧಾರೀಯಂತಪವನ ಪಥ
ಪೋಲಯಿಸಿ ಸ್ತುತಿಸದಲೆ ನಿತ್ಯದಿ
ಬಾಲಿಶರು ಕರ್ಮಾದಿಗಳೆ ತಾರಕವೆಂದು ಪೇಳುವರು || ೧೭ ||

ಕಮಲಸಂಭವ ಶರ್ವ ಶಕ್ರಾ -
ದ್ಯಮರರೆಲ್ಲರು ಇವನ ದುರತಿ -
ಕ್ರಮ ಮಹಿಮೆ ಮನವಚನದಿಂ ವ್ಯಾಪ್ತಗಾಣದಲೆ ||

ಶ್ರಮಿತರಾಗಿ ಪವಾಬ್ದ ಕಲ್ಪ
ದ್ರುಮದ ನೆಳಲಾಶ್ರಯಿಸಿ ಲಕ್ಷ್ಮೀ
ರಮಣ ಸಂತೈಸೆಂದು ಪ್ರಾರ್ಥಿಪರತಿಭಕುತಿಯಿಂದ || ೧೮ ||

ವಾರಿಚರವೆನಿಸುವವು ದರ್ದುರ
ತಾರಕಗಳೆಂದುರಿದು ಭೇಕವ -
ನೇರಿ ಜಲಧಿಯದಾಟುವೆನು ಎಂಬುವನ ತೆರನಂತೆ ||
ತಾರತಮ್ಯ ಜ್ಞಾನಶೂನ್ಯರು
ಸೂರಿಗಮ್ಯನ ತಿಳಿಯಲರಿಯದೆ
ಶೌರಶೈವ ಮತಾನುಗರನನುಸರಿಸಿ ಕೆಡುತಿಪರು || ೧೯ ||

ಕ್ಷುಧೆಯ ಗೋಸುಗ ಪೋಗಿ ಕಾನನ
ಬದರಿ ಫಲಗಳಪೇಕ್ಷೆಯಿಂದಲಿ
ಪೊದೆಯೊಳಗೆ ಶಿಗಬಿದ್ದು ಬಾಯ್ದೆರವವನತೆರನಂತೆ ||
ವಿಧಿಪಿತನ ಪೂಜಿಸದೆ ನಿನ್ನಯ
ಉದರ ಗೋಸುಗ ಸಾಧುಲಿಂಗ
ಪ್ರದರುಶಕರಾರಾಧಿಸುತ ಬಳಲದಿರು ಭವದೊಳಗೆ || ೨೦ ||

ಕ್ಷೋಣಿಪತಿ ಸುತನೆನಿಸಿ ಕೈ ದು -
ಗ್ಗಾಣಿಗೊಡ್ಡುವ ತೆರದಿ ಸುಮನಸ
ಧೇನು ಮನೆಯೊಳಗಿರಲು ಗೋಮಯ ಬಯಸುವಂದದಲಿ ||
ವೇಣುಗಾನ ಪ್ರಿಯನ ಅಹಿಕ ಸು -
ಖಾನುಭವ ಬೇಡದಲೆ ಲಕ್ಷ್ಮೀ
ಪ್ರಾಣನಾಥನ ಪಾದಭಕುತಿಯ ಬೇಡು ಕೊಂಡಾಡು || ೨೧ ||

ಜ್ಞಾನಜ್ಞೇಯ ಜ್ಞಾತೃಯೆಂಬಭಿ -
ದಾನದಿಂ ಬುದ್ಧ್ಯಾದಿಗಳ ಧಿ -
ಷ್ಠಾನದಲಿ ನೆಲಸಿದ್ದು ಕರೆಸುವ ತತ್ತದಾಹ್ವಯದಿ ||
ಭಾನು ಮಂಡಲಗ ಪ್ರದರ್ಶಕ
ತಾನೆನಿಸಿ ವಶನಾಗುವನು ಶುಕ
ಶೌನಕಾದಿ ಮುನೀಂದ್ರ ಹೃದಯಾಕಾಶಗತಚಂದ್ರ || ೨೨ ||

ಶ್ರಮಿತರಾಗಿ ಪದಾಬ್ಜ ಕಲ್ಪ
ದ್ರುಮದ ನೆಳಲಾಶ್ರಯಿಸಿ ಲಕ್ಷ್ಮೀ
ರಮಣ ಸಂತೈಸೆಂದು ಪ್ರಾರ್ಥಿಪರತಿಭಕುತಿಯಿಂದ || ೧೮ ||

ವಾರಿಚರವೆನಿಸುವವು ದರ್ದುರ
ತಾರಕಗಳೆಂದರಿದು ಭೇಕವ -
ನೇರಿ ಜಲಧಿಯದಾಟುವೆನು ಎಂಬುವನ ತೆರನಂತೆ ||
ತಾರತಮ್ಯ ಜ್ಞಾನಶೂನ್ಯರು
ಸೂರಿಗಮ್ಯನ ತಿಳಿಯಲರಿಯದೆ
ಸೌರಶೈವ ಮತಾನುಗರನನುಸರಿಸಿ ಕೆಡುತಿಹರು || ೧೯ ||

ಕ್ಷುಧೆಯ ಗೋಸುಗ ಪೋಗಿ ಕಾನನ
ಬದರಿ ಫಲಗಳಪೇಕ್ಷೆಯಿಂದಲಿ
ಪೊದೆಯೊಳಗೆ ಶಿಗಬಿದ್ದು ಬಾಯ್ಬಿಡುವವನತೆರನಂತೆ ||
ವಿಧಿಪಿತನ ಪೂಜಿಸದೆ ನಿಸ್ಸಯ
ಉದರ ಗೋಸುಗ ಸಾಧುಲಿಂಗ
ಪ್ರದರುಶಕರಾರಾಧಿಸುತ ಬಳಲದಿರು ಭವದೊಳಗೆ || ೨೦ ||

ಕ್ಷೋಣಿಪತಿ ಸುತನೆನಿಸಿ ಕೈ ದು -
ಗ್ಗಾಣಿಗೊಡ್ಡುವ ತೆರದಿ ಸುಮನಸ
ಧೇನು ಮನೆಯೊಳಗಿರಲು ಗೋಮಯ ಬಯಸುವಂದದಲಿ ||
ವೇಣುಗಾನ ಪ್ರಿಯನ ಅಹಿಕ ಸು -
ಖಾನುಭವ ಬೇಡದಲೆ ಲಕ್ಷ್ಮೀ
ಪ್ರಾಣನಾಥನ ಪಾದಭಕುತಿಯ ಬೇಡು ಕೊಂಡಾಡು || ೨೧ ||

ಜ್ಞಾನಜ್ಞೇಯ ಜ್ಞಾತೃಯೆಂಬಭಿ -
ದಾನದಿಂ ಬುದ್ಧ್ಯಾದಿಗಳ ಧಿ -
ಷ್ಠಾನದಲಿ ನೆಲಸಿದ್ದು ಕರೆಸುವ ತತ್ತದಾಹ್ವಯದಿ ||
ಭಾನು ಮಂಡಲಗ ಪ್ರದರ್ಶಕ
ತಾನೆನಿಸಿ ವಶನಾಗುವನು ಶುಕ
ಶೌನಕಾದಿ ಮುನೀಂದ್ರ ಹೃದಯಾಕಾಶಗತಚಂದ್ರ || ೨೨ ||

ಉದಯ ವ್ಯಾಪಿನಿ ದರ್ಶ ಪೌರ್ಣಿಮ -
ವಧಿಕಯಾಮವು ಶ್ರವಣ ವಭಿಜಿತು
ಸದನ ಯ್ಯೆದಿರೆ ಮಾಳ್ಪ ತೆರದಂದದಲಿ ಹರಿಸೇವೆ ||
ವಿಧಿನಿಷೇಧಗಳೇನು ನೋಡದೆ
ವಿಧಿಸುತಿರು ನಿತ್ಯದಲಿ ತನ್ನಯ
ಸದನ ದೊಳಗಿಂಬಿಟ್ಟು ಸಲಹುವ ಭಕ್ತವತ್ಸಲನು || ೨೩ ||

ನಂದಿವಾಹನರಾತ್ರಿ ಸಾಧನೆ
ಬಂದ ದ್ವಾದಶಿ ದಶಮಿ ಪೈತೃಕ
ಸಂಧಿಸಿದ ಸಮಯದಲಿ ಶ್ರವಣಾವ ತ್ಯಜಿಸುವಂತೆ ಸದಾ ||
ನಿಂದ್ಯರಿಂದಲಿ ಬಂದ ದ್ರವ್ಯವ
ಕಣ್ದೆರದು ನೋಡದಲೆ ಶ್ರೀಮದ -
ನಂದ ತೀರ್ಥಾಂತರ್ಗತನ ಸರ್ವತ್ರ ಭಜಿಸುತಿರು || ೨೪ ||

ಶ್ರೀ ಮನೋರಮ ಮರುತೇಶ ತ್ರಿಕಕು -
ದ್ಧಾಮ ಸತ್ಕಲ್ಯಾಣ ಗುಣ ನಿ -
ಸ್ಸೀಮ ಪಾವನನಾಮ ದಿವಿಜೋದ್ದಾಮ ರಘುರಾಮ ||
ಪ್ರೇಮ ಪೂರ್ವಕ ನಿತ್ಯ ತನ್ನ ಮ -
ಹಾ ಮಹಿಮೆಗಳ ಸ್ತುತಿಸುವವರಿಗೆ ಸು
ಧಾಮಗೊಲಿದಂದದಲಿ ಅಖಿಳಾರ್ಥಗಳ ಕೊಡುತಿಪ್ಪ || ೨೫ ||

ತಂದೆ ತಾಯ್ಗಳ ಕುರುಹನರಿಯದ
ಕಂದ ದೇಶಾಂತರದೊಳಗೆ ತ -
ನ್ನಂದದಲಿ ಯಿಪ್ಪವರ ಜನನೀ ಜನಕರನ ಕಂಡು ||
ಹಿಂದೆ ಎನ್ನನು ಪಡೆದವರು ಇವ -
ರಂದದಲಿ ಯಿಪ್ಪರೆಲ್ಲೈ ನಾನವ -
ರೆಂದು ಕಾಣುವೆನೆನುತ ಹುಡುಕುವ ತೆರದಿ ಕೋವಿದರು || ೨೬||

ಶೃತಿ ಪುರಾಣ ಸಮೂಹದೊಳು ಭಾ -
ರತ ಪ್ರತಿ ಪ್ರತಿ ಪದಗಳೊಳು ನಿ -
ರ್ಜಿತನ ಗುಣರೂಪಗಳ ಹುಡುಕುತ ಪರಮಹರುಷದಲಿ ||

ಮತಿ ಮತರು ಪತಿದಿವಸ ಸಾರ -
ಸ್ವತ ಸಮುದ್ರದಿ ಶಫರಿಯಂದದಿ
ಸತತ ಸಂಚರಿಸುವರು ಕಾಂಬುವಲ ವಲವಿಕೆಯಿಂದ || ೨೭ ||

ಮತ್ಸ್ಯಕೇತನ ಜನಕ ಹರಿ ಶ್ರೀ
ವತ್ಸಲಾಂಛನ ನಿಜಶರಣ್ಯ ಜನ
ವತ್ಸಲ ವರಾರೋಹ ವೈಕುಂಠಾಲಯನಿವಾಸಿ ||
ಚಿತ್ಸುಖಪ್ರದ ಸಲಹೆನಲು ಗೋ -
ವತ್ಸ ಧ್ವನಿಗೊದಗುವ ತೆರದಿ ಪರ
ಮೋತ್ಸವದಿ ಬಂದೊದಗುವನು ನಿರ್ಮತ್ಸರರ ಬಳಿಗೆ || ೨೮ ||

ಸೂರಿಗಳಿಗೆ ಸಮೀಪಗ ದುರಾ
ಚಾರಿಗಳಿಗೆಂದೆಂದು ದೂರಾ -
ದ್ದೂರತರ ದುರ್ಲಭನೆನಿಸುವನು ದೈತ್ಯ ಸಂತತಿಗೆ ||
ಸಾರಿಸಾರಿಗೆ ನೆನೆವವರ ಸಂ -
ಸಾರವೆಂಬ ಮಹೋರಗಕೆ
ಸರ್ಪಾರಿ ಯೆನಿಸಿ ಸದಾ ಸುಸೌಖ್ಯವ ನೀವ ಸುಜನರಿಗೆ || ೨೯ ||

ಚಕ್ರ ಶಂಖ ಗದಾಬ್ಜ ಧರ ದುರ -
ತಿಕ್ರಮ ದುರಾವಾಸ ವಿಧಿ ಶಿವ
ಶಕ್ರ ಸೂರ್ಯಾದ್ಯಮರ ಪೂಜ್ಯ ಪದಾಬ್ಜ ನಿರ್ಲಜ್ಜಾ ||
ಶುಕ್ರ ಶಿಷ್ಯನ ಅಶ್ವಮೇಧ
ಪ್ರಕ್ರಿಯವ ಕೆಡಿಸಬ್ಜಜಾಂಡವ -
ತಿಕ್ರಮಿಸಿ ಜಾಹ್ನವಿಯ ಪಡೆದ ತ್ರಿವಿಕ್ರಮಾಹ್ವಯನು || ೩೦ ||

ಶಕ್ತರೆನಿಸುವರಿಲ್ಲ ಹರಿವ್ಯತಿ -
ರಿಕ್ತ ಸುರಗಣರೊಳಗೆ ಸರ್ವೋ -
ದ್ರಿಕ್ತ ನೆನಿಸುವ ಸರ್ವರಿಂದಲಿ ಸರ್ವಕಾಲದಲಿ ||
ಭಕ್ತಿ ಪೂರ್ವಕವಾಗಿ ಅನ್ಯ ಪ್ರ -
ಸಕ್ತಿಗಳ ನೀಡಾಡಿ ಪರಮಾ
ಸಕ್ತನಾಗಿರು ಹರಿಕಥಾಮೃತಪಾನ ವಿಷಯದಲಿ || ೩೧ ||

ಪ್ರಣತಕಾಮದ ಭಕ್ತ ಚಿಂತಾ -
ಮಣಿ ಮಣಿಮಯಾಭರಣಭೂಷಿತ
ಘೃಣ ಗುಣತ್ರಯ ದೂರವರ್ಜಿತ ಗಹನ ಸನ್ಮಹಿಮಾ ||
ಎಣಿಸ ಭಕ್ತರ ದೋಷಗಳ ಕುಂ -
ಭಿಣಿಜೆಯಾಣ್ಮ ಶರಣ್ಯ ರಾಮಾ -
ರ್ಪಣವೆನಲು ಕೈಕೊಂಡ ಶಬರಿಯ ಫಲವ ಪರಮಾತ್ಮ || ೩೨ ||

ಬಲ್ಲೆನೆಂಬುವರಿಲ್ಲ ವೀತನ
ವಲ್ಲೆನೆಂಬುವರಿಲ್ಲ ಲೋಕದೊ -
ಳಿಲ್ಲದಿಹ ಸ್ಥಳವಿಲ್ಲ ಅಜ್ಞಾತ ಜನರಿವಗಿಲ್ಲ ||
ಬೆಲ್ಲದಚ್ಚಿನ ಬೊಂಬೆಯಂದದಿ
ಯೆಲ್ಲರೊಳಗಿರುತಿಪ್ಪ ಶ್ರೀ ಭೂ
ನಲ್ಲ ಇವಗೆಣೆಯಿಲ್ಲ ಅಪ್ರತಿ ಮಲ್ಲ ಜಗಕೆಲ್ಲ || ೩೩ ||

ಶಬ್ದಗೋಚರ ಶಾರ್ವರೀಕರ -
ನಬ್ದವಾಹನನನುಜ ಯಮಮಹಂ -
ಶಾಬ್ದಿ ಚಂದ್ರಮ ನಿರೂಪಮನು ನಿಸ್ಸೀಮ ಸಮಿತಸಮ ||
ಲಬ್ದನಾಗುವ ತನ್ನವಗೆ ಪ್ರಾ -
ರಬ್ದ ಕರ್ಮಗಳುಣಿಸಿ ತೀವ್ರದಿ
ಕ್ಷುಬ್ದ ಪಾವಕನಂತೆ ಬಿಡದಿಪ್ಪನು ದಯಾಸಾಂದ್ರ || ೩೪ ||

ಶ್ರೀವಿರಿಂಚಾದ್ಯಮರ ವಂದಿತ
ಈ ವಸುಂಧರೆಯೊಳಗೆ ದೇವಕಿ
ದೇವಿ ಜಠರದೊಳಗ ವತರಿಸಿದನಜನು ಜನರಂತೆ ||
ರೇವತೀರಮಣಾನುಜನು ಸ್ವ ಪ -
ದಾವಲಂಬಿಗಳನು ಸಲಹಿ ದೈ -
ತ್ಯಾವಳಿಯ ಸಂಹರಿಸಿದ ಜಗನ್ನಾಥವಿಠ್ಠಲನು || ೩೫ ||

# ೨೦ ಗುಣತಾರತಮ್ಯ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಶ್ರೀಧರಾ ದುರ್ಗಾಮನೋರಮ
ವೇಧ ಮುಖ ಸುಮನಸಗಣ ಸಮಾ -
ರಾಧಿತ ಪದಾಂಭೋಜ ಜಗದಂತರ್ಬಹಿವ್ಯಾಪ್ತ ||
ಗೋಧರ ಫಣಿಪರಾತಪತ್ರ ನಿ -
ಷೇಧದೋಷ ವಿಚಿತ್ರಕರ್ಮ ಸು -
ಬೋಧ ಸುಖಮಯಗಾತ್ರ ಪರಮ ಪವಿತ್ರ ಸುಚರಿತ್ರ || ೧ ||

ನಿತ್ಯನಿರ್ಮಲ ನಿಗಮವೇದ್ಯೋ -
ತ್ಪತ್ತಿ ಸ್ಥಿತಿ ಲಯ ದೋಷ ವರ್ಜಿತ
ಪ್ರತ್ಯಗಾತ್ಮ ಪ್ರಸಿದ್ಧ ಮುಕ್ತಾಮುಕ್ತ ಗಣಸೇವ್ಯ ||
ಸತ್ಯಕಾಮ ಶರಣ್ಯ ಶಾಶ್ವತ
ಭೃತ್ಯವತ್ಸಲ ಭಯನಿವಾರಣ
ಅತ್ಯಧಿಕ ಸಂಪ್ರಿಯತಮ ಜಗನ್ನಾಥ ಮಾಂ ಪಾಹಿ || ೨ ||

ಪರಮ ಪುರಷನ ರೂಪಗುಣವನು -
ಅರಸಿ ಕಾಂಬಳು ಪ್ರವಹದಂದದಿ
ನಿರುಪಮಳು ನಿರ್ದುಷ್ಟಸುಖ ಸಂಪೂರ್ಣಳೆನಿಸುವಳೂ ||
ಹರಿಗೆ ಧಾಮತ್ರಯವೆನಿಸಿ ಆ -
ಭರಣ ವಸನಾಯುಧಗಳಾಗಿ -
ದ್ವರಿಗಳನೆ ಸಂಹರಿಸುವಳು ಅಕ್ಷರಳೆನಿಸಿಕೊಂಡು || ೩ ||

ಈತನಿಂದಾನಂತ ಗುಣದಲಿ
ಶ್ರೀ ತರುಣಿ ತಾ ಕಡಿಮೆಯನಿಪಳು
ನಿತ್ಯ ಮುಕ್ತಳು ನಿರ್ವಿಕಾರಳು ತ್ರಿಗುಣ ವರ್ಜಿತಃ
ಧೌತಪಾಪ ವಿರಂಚ ಪವನನ
ಮಾತೆಎನಿಪ ಮಹಾಲಕುಮಿ ವಿ -
ಖ್ಯಾತಳಾಗಿಪಳೆಲ್ಲ ಕಾಲದಿ ಶ್ರುತಿ ಪುರಾಣದೊಳು || ೪ ||

ಕಮಲ ಸಂಭವ ಪವನರೀರ್ವರು
ಸಮರು ಸಮುವರ್ತಿಗಳು ರುದ್ರಾ -
ದ್ಯಮರಗಣ ಸಂಸೇವಿತಪರಬ್ರಹ್ಮನಾಮಕರು ||
ಯಮಳರಿಗೆ ಮಹಲಕುಮಿ ತಾನು -
ತ್ತಮಳು ಕೋಟಿ ಸಜಾತಿ ಗುಣದಿಂ -
ದಮಿತ ಸು ವಿಜಾತ್ಯಧಮರೆನಿಪರು ಬ್ರಹ್ಮವಾಯುಗಳು || ೫ ||

ಪತಿಗಳಿಂದ ಸರಸ್ವತೀ ಭಾ
ರತಿಗಳಧಮರು ನೂರುಗಣ ಪರಿ -
ಮಿತ ವಿಜಾತ್ಯವರರು ಬಲಜ್ಞಾನಾದಿ ಗುಣದಿಂದ ||
ಅತಿಶಯಳು ವಾಗ್ದೇವಿ ಶ್ರೀ ಭಾ -
ರತಿಗೆ ಪದದ ಪ್ರಯುಕ್ತ ವಿಧಿ ಮಾ
ರುತರ ಪೋಲ್ ಚಿಂತಿಪುದು ಸದ್ಭಕ್ತಿಯಲಿ ಕೋವಿದರು || ೬ ||

ಖಗ ಫಣಿಪತಿ ಮೃಡರು ಸಮ ವಾ -
ಣಿಗೆ ಶತಗುಣಾಧಮರು ಮೂವರು
ಮಿಗಿಲೆನಿಸುವರು ಶೇಷ ಪದದಿಂದಲಿ ತ್ರಿಯಂಬಕಗೆ ||
ನಗಧರನ ಷಣ್ಮಹಿಷಿಯರು ಪ -
ನ್ನಗ ವಿಭೂಷಣಗೈದು ಮೇನಕೆ
ಮಗಳು ವಾರುಣಿ ಸೌಪರಣಿಗಳಿಗಧಿಕವೆರಡು ಗುಣ || ೭ ||

ಗರುಡ ಶೇಷ ಮಹೇಶರಿಗೆ ಸೌ -
ಪರುಣಿ ವಾರುಣಿ ಪಾರ್ವತಿಯು ಮೂ
ವರು ದಶಾಧಮ ವಾರುಣಿಗೆ ಕಡಿಮೆನಿಸುವಳು ಗೌರಿ ||
ಹರನ ಮಡದಿಗೆ ಹತ್ತು ಗುಣದಲಿ
ಸುರಪ ಕಾಮರು ಕಡಿಮೆ ಇಂದ್ರಗೆ
ಕೊರತೆ ಯನಿಸುವ ಮನ್ಮಥನು ಪದದಿಂದಲಾವಾಗ || ೮ ||

ಈರೈದು ಗುಣ ಕಡಿಮೆಯಾಹಂ -
ಕಾರಿಕ ಪ್ರಾಣನು ಮನೋಜ ನ -
ಗಾರಿಗಳಿಗನಿರುದ್ಧ ರತಿ ಮನುದಕ್ಷ ಗುರುಶಚಿಯು ||

ಆರು ಜನ ಸಮ ಪ್ರಾಣನಿಂದಲಿ
ಹೌರಿಗೆನಿಪರು ಹತ್ತು ಗುಣದಲಿ
ಮಾರ ಜಾದ್ಯರಿಗೈದು ಗುಣದಿಂದಧಮ ಪ್ರವಹಾಖ್ಯ || ೯ ||

ಗುಣದ್ವಯದಿಂ ಕಡಿಮೆ ಪ್ರವಹಗೆ
ಇನ ಶಶಾಂಕ ಯಮ ಸ್ವಯಂಭುವ
ಮನು ಮಡದಿ ಶತರೂಪ ನಾಲ್ವರು ಪಾದಪಾದಾರ್ಧ ||
ವನಧಿ ನೀಚ ಪದಾರ್ಧ ನಾರದ
ಮುನಿಗೆ ಭೃಗ್ವಗ್ನಿ ಪ್ರಸೂತಿಗ -
ಳೆನಿಸುವರು ಪಾದಾರ್ಧ ಗುಣದಿಂದಧಮರಹುದೆಂದು || ೧೦ ||

ಹುತವಹಗೆ ದ್ವಿಗುಣಾಧಮರು ವಿಧಿ
ಸುತ ಮರೀಚ್ಯಾದಿಗಳು ವೈವ -
ಸ್ವತನು ವಿಶ್ವಾಮಿತ್ರರಿಗೆ ಕಿಂಚಿದ್ಗುಣಾಧಮನು ||
ಪ್ರತಿವರ ಜಗನ್ಮಿತ್ರವರ ನಿರ -
ಋತಿ ಪ್ರಾವಹಿ ತಾರರಿಗೆ ಕಿಂ -
ಚಿತ್ ಗುಣಾಧಮ ಧನಪ ವಿಷಕ್ಸೇನರೆನಿಸುವರು || ೧೧ ||

ಧನಪ ವಿಷ್ವಕ್ಸೇನ ಗೌರೀ
ತನಯರಿಗೆ ಉಕ್ತೇತರರು ಸಮ -
ರೆನಿಸುವರು ಯೆಂಭತ್ತೈದು ಜನ ಶೇಷಶತರೆಂದು ||
ದಿನಪರಾರೇಳಧಿಕ ನಾಲ್ಕ -
ತ್ತನಿಲರೇಳ್ವ ಸುರುದ್ರರಿರ್ವೈ -
ದನಿತು ವಿಶ್ವೇದೇವ ಋಭುವಶ್ವಿನಿಗಳೆಂದು ಪಿತೃಧರಣಿ || ೧೨ ||

ಇವರಿಗಿಂತಲಿ ಕೊರತೆಯೆನಿಪರು
ಚ್ಯವನ ಸನಕಾದಿಗಳು ಪಾವಕ
ಕವಿ ಉಚಥ್ಯ ಜಯಂತ ಕಶ್ಯಪ ಮನುಗಳೇಕಾದಶ ||
ದೃವ ನಹುಷ ಶಶಿಬಿಂದು ಹೈಹಯ
ದಘುಷ್ಯಂತ ವಿರೋಚನನ ನಿಜ
ಕುವರ ಬಲಿ ಮೊದಲಾದ ಸಪ್ತೇಂದ್ರರು ಕಕುಸ್ಥ ಗಯ || ೧೩ ||

ಪೃಥು ಭರತ ಮಾಂಧಾತ ಪ್ರಿಯ -
ವ್ರತ ಮರುತ ಪ್ರಹ್ಲಾದ ಸುಪರಿ -
ಕ್ಷಿತ ಹರಿಶ್ಚಂದ್ರಾಂಬರೀಷೋತ್ತಾನಪಾದಮುಖ ||
ಶತಸುಪುಣ್ಯ ಶ್ಲೋಕರು ಗದಾ -
ಭೃತಗಧಿಷ್ಠಾನರು ಸುಪ್ರಿಯ -
ವ್ರತಗೆ ದ್ವಿಗುಣಾಧಮರು ಕರ್ಮಜರೆಂದು ಕರೆಸುವರು || ೧೪ ||

ನಳನಿ ಸಂಜ್ಞಾ ರೋಹಿಣೀ ಶ್ಯಾ -
ಮಲ ವಿರಾಟ್ ಪರ್ಜನ್ಯರಧಮರು
ಎಲರಮಿತ್ರನ ಮಡದಿ ದ್ವಿಗುಣಾಧಮಳು ಬಾಂಬೊಳೆಗೆ ||
ಜಲಮಯ ಬುಧಾಧಮ ದ್ವಿಗುಣದಿ
ಕೆಳಗೆನಿಸುವರುಷಾ ಶನೈಶ್ಚರ -
ನಿಳಿಯು ಈರು ಗುಣಾಧಮರುಷಾದೇವಿ ದೆಸೆಯಿಂದ || ೧೫ ||

ಎರಡು ಗುಣ ಕರ್ಮಾಧಿಪತಿ ಪು -
ಷ್ಕರ ಕಡಿಮೆಯಾಜನ ದಿವಿಜರು
ಚಿರಪಿತೃಗಳಿಂದುತ್ತಮರು ಕಿಂಕರರು ಪುಷ್ಕರಗೆ ||
ಸುರಪನಾಲಯ ಗಾಯಕೋತ್ತಮ -
ರೆರಡೈದು ಗುಣದಿಂದಿಧಮ ತುಂ -
ಬರಗೆ ಸಮ ನವಕೋಟಿ ಋಷಿಗಳು ನೂರು ಜನರುಳಿದು || ೧೬ ||

ಅವರವರ ಪತ್ನಿಯರಪ್ಸರ
ಯುಪತಿಯರು ಸಮವುತ್ತಮರಸುಳಿ -
ದವರರೆನಿಪರು ಮನುಜಗಂಧರ್ವರು ದ್ವಿಷಡ್ಗುಣದಿ ||
ಕುವಲಯಾಧಿಪರೀರೈದು ಗುಣ
ಪವನಿಪಸ್ತ್ರೀಯರು ದಶೋತ್ತರ
ನವತಿಗುಣದಿಂದಧಮರೆನಿಪರು ಮಾನುಷೋತ್ತಮರು || ೧೭||

ಸತ್ವ ಸತ್ವರು ಸತ್ವರಾಜಸ
ಸತ್ವ ತಾಮಸ ಮೂವರು ರಜ
ಸ್ಸತ್ವರಧಿಕಾರಿಗಳು ಭಗವದ್ಭಕ್ತರೆನಿಸುವರು ||

ನಿತ್ಯ ಬದ್ಧರು ರಜೋರಜರು -
ತ್ಪತ್ತಿ ಭೂಸ್ವರ್ಗದೊಳು ನರಕದಿ
ಪೃಥ್ವಿಯೊಳು ಸಂಚರಿಸುತಿಪ್ಪರು ರಜಸ್ತಾಮಸರು || ೧೮ ||

ತಮಸ್ಸಾತ್ವಿಕರೆನಿಸಕೊಂಬರು
ಅಮಿತನಾಖ್ಯಾತ್ಯಸುರಗಣವಿದೆ
ತಮೋರಾಜಸರೆನಿಸಿಕೊಂಬರು ದೈತ್ಯಸಮುದಾಯ ||
ತಮಸ್ತಾಮಸ ಕಲಿ ಪುರಂಧ್ರಿಯು
ಅಮಿತ ದುರ್ಗುಣ ಪೂರ್ಣ ಸರ್ವಾ
ಧಮರೊಳಧಮಾಧಮ ದುರಾತ್ಮನು ಕಲಿಯೆನಿಸಿ ಕೊಂಬ || ೧೯ ||

ಇವನ ಪೋಲ್ವ ಪಾಪಿಜೀವರು
ಭುವನ ಮೂವರೊಳಗಿಲ್ಲ ನೋಡಲು
ನವವಿಧ ದ್ವೇಷಗಳಿಗಾಗಾರನೆನಿಸಿ ಕೊಳುತಿಪ್ಪ ||
ಬವರದಲಿ ಭಂಗಾರದಲಿ ನಟ
ಯುವತಿ ದ್ಯೂತಾಪೇಯದಲಿ ವೃಷದಲಿ
ಕವಿಸಿ ಮೋಹದಿ ಕೆಡಿಸುವನು ಯೆಂದರಿದು ತ್ಯಜಿಸುವದು || ೨೦ ||

ತ್ರಿವಿಧ ಜೀವ ಪ್ರತತಿಗಳ
ಸಗ್ಗ ಪೊಳೆಯಾಣ್ಮಾಲಯನು ನಿರ್ಮಿಸಿ
ಯುವತಿಯರ ಪೊಡಗೂಡಿ ಕ್ರೀಡಿಸುವನು ಕೃಪಾಸಾಂದ್ರ ||
ದಿವಿಜ ದಾನವ ತಾರತಮ್ಯದ
ವಿವರ ತಿಳಿವ ಮಹಾತ್ಮರಿಗೆ ಬಾ -
ನ್ನವಿರಸಖ ತಾನೊಲಿದು ಪುದ್ಧರಿಸುವನು ಭವದಿಂದ || ೨೧ ||

ದೇವದೈತ್ಯರ ತಾರತಮ್ಯವು
ಪಾವಮಾನಿ ಮತಾನುಗರಿಗಿದು
ಕೇವಲಾವಶ್ಯಕವು ತಿಳಿವದು ಸರ್ವಕಾಲದಲಿ ||
ದಾವಶಿಖಿ ಪಾಪಾಟವಿಗೆ ನವ
ನಾವೆಯೆನಿಪುದು ಭವಸಮುದ್ರಕೆ
ಪಾವಟಿಗೆ ವೈಕುಂಠ ಲೋಕಕಿದೆಂದು ಕರೆಸುವದು || ೨೨ ||

ತಾರತಮ್ಯ ಜ್ಞಾನ ಮುಕ್ತಿ
ದ್ವಾರವೆನಿಪುದು ಭಕ್ತಜನರಿಗೆ
ತೋರಿ ಕೇಳಿ ಸುಖಾಬ್ಧಿಯೊಳು ಲೋಲಾಡುವದು ಬುಧರು ||
ಕ್ರೂರ ಮಾನವರಿಗಿದು ಕರ್ಣ ಕ -
ಠೋರವೆನಿಪುದು ನಿತ್ಯವಲಿ ಅಧಿ -
ಕಾರಿಗಳಿಗಿದನರುಪುವದು ದುಸ್ತರ್ಕಿಗಳ ಬಿಟ್ಟು || ೨೩ ||

ಹರಿ ಸಿರಿ ವಿರಂಚೀರ ಭಾರತಿ
ಗರುಡ ಫಣಿಪತಿ ಷಣ್ಮಹಿಷಿಯರು
ಗಿರಿಜ ನಾಕೇಶ ಸ್ಮರ ಪ್ರಾಣಾನಿರುದ್ಧ ಶಚೀ ||
ಗುರು ರತೀ ಮನು ದಕ್ಷ ಪ್ರವಹಾ
ಮರುತ ಮಾನವಿ ಯಮ ಶಶಿ ದಿವಾ -
ಕರ ವರುಣ ನಾರದ ಸುರಾಸ್ಯ ಪ್ರಸೂತಿ ಭೃಗು ಮುನಿಪ || ೨೪ ||

ಪ್ರತತಿಜಾಸನ ಪುತ್ರರೆನಿಸುವ
ಪ್ರತಿವರ ಮರೀಚ್ಯತ್ರಿ ವೈವ -
ಸ್ವತನು ತಾರಾ ಮಿತ್ರ ನಿರುಋತಿ ಪ್ರವಹ ಮಾರುತನ ||
ಸತಿ ಧನೇಶಾಶ್ವಿನಿಗಳಿಗಣ -
ಪತಿಯು ವಿಷ್ವಕ್ಸೇನ ಶೇಷಸು -
ಶತರು ಮನುಗಳುಚಥ್ಯ ಚ್ಯಾವನ ಮುನಿಗಳಿಗೆ ನಮಿಪೆ || ೨೫ ||

ಶತ ಪುಣ್ಯ ಶ್ಲೋಕರೆನಿಸುವ
ಕ್ಷಿತಿಪರಿಗೆ ನಮಿಸುವೆನು ಭಾಗೀ
ರಥಿ ವಿರಾಟ್ ಪರ್ಜನ್ಯ ರೋಹಿಣಿ ಶಾಮಲಾ ಸಂಜ್ಞಾ ||
ಹುತವಹನ ಮಹಿಳಾ ಬುಧೋಷಾ
ಕ್ಷಿತಿ ಶನೈಶ್ಚರ ಪುಷ್ಕರರಿಗಾ -
ನುತಿಸಿ ಬಿನ್ನೈಸುವೆನು ಭಕ್ತಿಜ್ಞಾನ ಕೊಡಲೆಂದು || ೨೬ ||

ನೂರಧಿಕವಾಗಿಪ್ಪ ಮತ್ತದಿ -
ನಾರು ಸಾವಿರ ನಂದಗೋಪ ಕು -
ಮಾರನರ್ಧಾಂಗಿಯರಗಸ್ತ್ಯಾಧಿಕ ಮುನಿಶ್ವರರು ||

ಊರ್ವಶಿಯು ಮೊದಲಾದ ಅಪ್ಸರ
ನಾರಿಯರು ಶತತುಂಬರುರು ಕಂ -
ಸಾರಿ ಗುಣಗಳ ಕೀರ್ತನೆಯ ಮಾಡಿಸಲಿ ಯನ್ನಿಂದ || ೨೭ ||

ಪಾವನರು ಶುಚಿ ಶುದ್ಧನಾಮಕ
ದೇವತೆಗಳಾಜಾನ ಚಿರಪಿತೃ
ದೇವರನರ ಗಂಧರ್ವರೆನಿಪ ಮಾನುಷೋತ್ತಮರು ||
ಈ ವಸುಮತಿಯೊಳುಳ್ಳ ವೈಷ್ಣವ
ರಾವಳಿಯೊಳಿಹರೆಂದು ನಿತ್ಯದಿ
ಸೇವಿಪುದು ಸಂತೋಷದಿಂ ಸರ್ವಪ್ರಕಾರದಲಿ || ೨೮ ||

ಮಾನುಷೋತ್ತಮರನು ಪಿಡಿದು ಚತು
ರಾನನಾಂತ ಶತೋತ್ತಮತ್ವಕ್ರ
ಮೇಣ ಚಿಂತಪ ಭಕ್ತರಿಗೆ ಚತುರ್ವಿಧ ಪುರುಷಾರ್ಥ ||
ಶ್ರೀ ನಿಧಿ ಜಗನ್ನಾಥ ವಿಠ್ಠಲ
ತಾನೆ ವಲಿದೀವನು ನಿರಂತರ
ಸಾನುರಾಗದಿ ಪಠಿಸುವದು ಪ್ರಾಜ್ಞರಿದ ಮರಿಯದಲೆ || ೨೯ ||

# ೨೦ ಬೃಹತ್ತಾರತಮ್ಯ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಮೀನಕೂರ್ಮ ಕ್ರೋಡ ನರಹರಿ
ಮಾಣವಕ ಭೃಗುರಾಮದಶರಥ -
ಸೂನು ಯಾದವ ಬದ್ಧ ಕಲ್ಕೀ ಕಪಿಲ ವೈಕುಂಠ ||
ಶ್ರೀನಿವಾಸ ವ್ಯಾಸ ವೃಷಭ ಹ -
ಯಾನನ ನಾರಾಯಣೀ ಹಂ -
ಸಾನಿರುದ್ಧ ತ್ರಿವಿಕ್ರಮ ಶ್ರೀಧರ ಹೃಷೀಕೇಶ || ೧ ||

ಹರಿಯು ನಾರಾಯಣನು ಕೃಷ್ಣಾ -
ಸುರಕುಲಾಂತಕ ಸೂರ್ಯಸಮಪ್ರಭ
ಕರೆಸುವನು ನಿರ್ದುಷ್ಟಸುಖ ಪರಿಪೂರ್ಣ ತಾನೆಂದು ||
ಸರ್ವದೇವೋತ್ತಮನು ಸರ್ವಗ
ಪರಮ ಪುರುಷ ಪುರಾತನ ಜರಾ
ಮರಣ ವರ್ಜಿತ ವಾಸುದೇವಾದ್ಯಮಿತ ರೂಪಾತ್ಮಾ || ೨ ||

ಈ ನಳಿನಭವ ಜನನಿ ಲಕ್ಷ್ಮೀ
ಜ್ಞಾನ ಬಲ ಭಕ್ತ್ಯಾದಿ ಗುಣ ಸಂ -
ಪೂರ್ಣಳೆನಿಪಳು ಸರ್ವಕಾಲದಿ ಹರಿಕೃಪಾಬಲದಿ ||
ಹೀನಳೆನಿಪಳನಂತ ಗುಣದಿ ಪು -
ರಾಣ ಪುರಷನಿಗೆ ಪ್ರಕೃತಿಗಿನ್ನು ಸ -
ಮಾನರೆನಿಸುವರಿಲ್ಲ ಮುಕ್ತಾಮುಕ್ತ ಸುರರೊಳಗೆ || ೩ ||

ಗುಣಗಳತ್ರಯ ಮಾನಿ ಶ್ರೀ ಕುಂ -
ಭಿಣಿ ಮಹಾ ದುರ್ಗಾಂಭ್ರಣೀ ರು -
ಗ್ಮಿಣಿಯು ಸತ್ಯಾ ಶಾಂತಿ ಕೃತಿ ಜಯಾ ಮಾಯಾ ಮಹಾಲಕುಮಿ ||
ಜನಕಜಾ ಕಮಲಾಲಯ ದ -
ಕ್ಷಿಣೆಯು ಪದ್ಮಾ ತ್ರಿಲೋಕೇಶ್ವರಿ
ಅಣು ಮಹತ್ತಿನೊಳಿದ್ದು ಉಪಮಾರಹಿತಳೆನಿಸುವಳು || ೪ ||

ಘೋಟಕಾಸ್ಯನ ಮಡದಿಗಿಂದಲಿ
ಹಾಟಕೋದರ ಪವನರೀರ್ವರು
ಕೋಟಿಗುಣದಿಂದಧಮರೆನಿಪರು ಯಾವಕಾಲದಲಿ ||
ಖೇಟಪತಿ ಶೇಷಾಮರೇಂದ್ರರ
ಸಾಟಿ ಮಾಡದೆ ಶ್ರೀ ಶನ ಕೃಪಾ
ನೋಟದಿಂದಲಿ ಸರ್ವರೊಳು ವ್ಯಾಪಾರ ಮಾಡುವರು || ೫ ||

ಪುರುಷ ಬ್ರಹ್ಮಾ ವಿರಂಚಿ ಮಹಾ -
ಮರುತ ಮುಖ್ಯಪ್ರಾಣ ಧೃತಿ ಸ್ಮೃತಿ
ಗುರವರ ಮಹಾಧ್ಯಾತ ಬಲ ವಿಜ್ಞಾನ ವಿಖ್ಯಾತ ||

ಗರಳಭುಗ್ಭವರೋಗ ಭೇಷಜ
ಸ್ವರ ವರಣ ವೇದಸ್ಥ ಜೀವೇ -
ಶ್ವರ ವಿಭೀಷಣ ವಿಶ್ವಚೇಷ್ಟಕ ವೀತಭಯ ಭೀಮ || ೬ ||

ಅನಿಲ ಸ್ಥಿತಿ ವೈರಾಗ್ಯನಿಧಿ ರೋ -
ಚನವಿಮುಕ್ತಾನಂದ ದಶಮತಿ
ಅನಿಮಿಷೇಶಾನಿದ್ರ ಶುಚಿ ಸತ್ವಾತ್ಮಕ ಶರೀರ ||
ಅಣು ಮಹದ್ರೂಪಾತ್ಮಕಾಮೃತ
ಹನುಮದಾದ್ಯವತಾರ ಪದ್ಮಾ
ಸನಪದವಿ ಸಂಪ್ರಾಪ್ತಪರಿಸರ ಅಖಿಳಾತ್ಮಸಮ || ೭ ||

ಮಾತರಿಶ್ವ ಬ್ರಹ್ಮರು ಜಗ
ನ್ಮಾತಗಧಮಾಧೀನರೆನಿಪರು
ಶ್ರೀ ತರುಣಿವಲ್ಲಭನು ಈರ್ವರೊಳಗಾವ ಕಾಲದಲಿ ||
ಸೀತ ಭಕ್ತಿ ಜ್ಞಾನ ಬಲ ರೂ -
ಪಾತಿಶಯದಿಂದಿದ್ದು ಚೇತನಾ -
ಚೇತನಗಳೊಳು ವ್ಯಾಪ್ತರೆನಿಪರು ತತ್ತದಾಹ್ವಯದಿ || ೮ ||

ಸರಸ್ವತೀ ವೇದಾತ್ಮಿಕಾ ಭುಜಿ
ನರಹರಿ ಗುರುಭಕ್ತಿ ಬ್ರಾಹ್ಮೀ
ಪರಮ ಸುಖ ಬಲ ಪೂರ್ಣೇ ಶ್ರದ್ಧಾ ಪ್ರೀತಿ ಗಾಯತ್ರೀ ||
ಗರುಡ ಶೇಷರ ಜನನಿ ಶ್ರೀ ಸಂ -
ಕರಷಣಾನ ಜಯಾ ತನುಜೆ ವಾಣೀ
ಕರಣನಿಯಾಮಕ ಚತುರ್ದಶ ಭುವನ ಸನ್ಮಾನ್ಯೆ || ೯ ||

ಕಾಳಿ ದ್ರೌಪದಿ ಕಾಶಿಜಾ ಪಾಂ
ಚಾಲಿ ಶಿವಕನ್ಯೇಂದ್ರಸೇನಾ
ಕಾಲಮಾನಿ ಚಂದ್ರ ವಿದ್ಯುನ್ನಾಮ ಭಾರತಿಯು ||
ಗಾಳಿ ಬ್ರಹ್ಮರ ಯುವತಿಯರು ವಿ -
ಕೇಳು ಐವತ್ತೊಂದು ಗುಣದಿಂ
ಕೀಳರೆನಿಪರು ತಮ್ಮ ಪತಿಗಳಿಗಿಂದಲಾವಾಗ || ೧೦ ||

ಹರಿ ಸಮೀರಾವೇಶ ನರ ಸಂ -
ಕರುಷಣಾವೇಶಯುತ ಲಕ್ಷ್ಮಣ
ಪರಮ ಪುರುಷನ ಶುಕ್ಲಕೇಶಾವೇಶ ಬಲರಾಮ ||
ಹರ ಸದಾಶಿವ ತಪ ಅಹಂಕೃತು
ಮರುತಯುಕ್ತ ಶುಕೋದರನ್ವಪಟ ತ -
ತ್ಪುರುಷ, ಜೈಗೀಶೌರ್ವ ದ್ರೌಣೀ ವ್ಯಾಧ ದುರ್ವಾಸ || ೧೧ ||

ಗರುಡ ಶೇಷ ಶಶಾಂಕದಳ ಶೇ -
ಖರರು ತಮ್ಮೊಳು ಸಮರು ಭಾರತಿ
ಸರಸಿಜಾಸನ ಪತ್ನಿಗಧಮರು ನೂರುಗುಣದಿಂದ ||
ಹರಿಮಡದಿ ಜಾಂಬವತಿಯೊಳು ಶ್ರೀ
ತರುಣಿಯಾವೇಶವಿಪದೆಂದಿಗು
ಕೊರತೆಯನಿಪರು ಗರುಡ ಶೇಷರಿಗೈವರೈದು ಗುಣ || ೧೨ ||

ನೀಲಭದ್ರಾ ಮಿತ್ರ ವಿಂದಾ
ಮೇಲೆನಿಪ ಕಾಳಿಂದಿ ಲಕ್ಷಣಾ
ಬಾಲೆಯರಿಗಿಂದಧಮ ವಾರುಣಿ ಸೌಪರಣಿ ಗಿರಿಜಾ ||
ಶ್ರೀ ಲಕುಮಿಯುತ ರೇವತೀ ಸಿರಿ
ಮೂಲ ರೂಪದಿ ಪೇಯಳನಿಪಳು
ಶೈಲಜಾದ್ಯರು ದಶಗುಣಾಧಮ ತಮ್ಮ ಪತಿಗಳಿಗೆ || ೧೩ ||

ನರಹರಿಯ ಆವೇಶ ಸಂಯುತ
ನರ ಪುರಂದರ ಗಾಧಿ ಕುಶ ಮಂ -
ದರದ್ಯುಮ್ನ ವಿಕ್ಷುಕಿ ವಾಲಿ ಇಂದ್ರನವತಾರ ||
ಭರತ ಬ್ರಹ್ಮಾವಿಷ್ಟಸಾಂಬ ಸು -
ದರುಶನ ಪ್ರದ್ಯುಮ್ನ ಸನಕಾ -
ದ್ಯರೊಳಗಿಪ್ಪ ಸನತ್ಕುಮಾರನು ಷಣ್ಮುಖನು ಕಾಮ || ೧೪ ||

ಈರೈದು ಗುಣ ಕಡಿಮೆ ಪಾರ್ವತಿ
ವಾರುಣೀಯುರಗೇಂದ್ರ ಕಾಮ ಶ -
ರೀರಮಾನಿ ಪ್ರಾಣ ದಶಗುಣಾವವರ ಶಕ್ರನಿಗೆ ||

ಮಾರಜಾ ರತಿ ದಕ್ಷ ಗುರು ವೃ -
ತ್ರಾರಿ ಜಾಯಾ ಶಚಿ ಸ್ವಯಂದಿಭುವ -
ರಾರು ಜನ ಸಮ ಪ್ರಾಣಗಧಮರು ಹತ್ತು ಗುಣದಿಂದ || ೧೫ ||

ಕಾಮಪುತ್ರನಿರುದ್ಧ ಸೀತಾ
ರಾಮನಾನುಜ ಶತೃಹನ ಬಲಿ -
ರಾಮನಾನುಜ ಪೌತ್ರನಿರುದ್ಧನೊಳಗನಿರುದ್ಧ ||
ಕಾಮ ಭಾರ್ಯ ರುಗ್ಮವತಿ ಸ -
ನ್ನಾಮ ಲಕ್ಷಣಳೆನಿಸುವಳು ಪೌ
ಲೋಮಿ ಚಿತ್ರಾಂಗದೆಯು ತಾರಾ ಎರಡು ಪೆಸರುಗಳು || ೧೬ ||

ತಾರನಾಮಕ ತ್ರೇತೆಯೊಳು ಸೀ -
ತಾರಮಣನಾರಾಧಿಸಿದನು ಸ -
ಮೀರಯುಕ್ತೋದ್ಧವನು ಕೃಷ್ಣಗೆ ಪ್ರೀಯನೆನಿಸಿದನು ||
ವಾರಿಜಾಸನ ಯುಕ್ತ ದ್ರೋಣನು
ಮೂರು ಇಳೆಯೊಳು ಬ್ರಹಸ್ಪತಿಗವ -
ತಾರವೆಂಬರು ಮಹಾಭಾರತ ತಾತ್ಪರ್ಯದೊಳಗೆ || ೧೭ ||

ಮನು ಮುಖಾದ್ಯರಿಗಿಂತ ಪ್ರವಹ
ಗುಣದಿ ಪಂಚಕ ನೀಚನೆನಿಸುವ
ಇನ ಶಶಾಂಕರು ಧರ್ಮ ಮಾನವಿ ಯರಡು ಗುಣದಿಂದ ||
ಕನಿಯರೆನಿಪರು ಪ್ರವಹಗಿಂದಲಿ
ದಿನಪ ಶಶಿ ಯಮಧರ್ಮರೂಪಗ -
ಳನುದಿನದಿ ಚಿಂತಿಪುದು ಸಂತರು ಸರ್ವಕಾಲದಲಿ || ೧೮ ||

ಮರುತನಾವೇಶಯುತ ಧರ್ಮಜ
ಕರಡಿ ವಿದುರನು ಸತ್ಯಜಿತು ಈ
ರೆರಡು ಧರ್ಮನರೂಪ ಬ್ರಹ್ಮಾವಿಷ್ಟ ಸುಗ್ರೀವ ||
ಹರಿಯ ರೂಪಾವಿಷ್ಟ ಕರ್ಣನು
ತರಣಿಗೆರಡವತಾರ ಚಂದ್ರಮ
ಸುರಪನಾವೇಶಯುತನಂಗದನೆನಿಸಿಕೊಳುತಿಪ್ಪ || ೧೯ ||

ತರಣಿಗಿಂದಲಿ ಪಾದಪಾದರೆ
ವರುಣನೀಚನು ಮಹಾಭಿಷಕ್ ದರ
ದುರ ಸುಷೇಣನು ಶಂತನುವು ನಾಲ್ವರು ವರುಣರೂಪ ||
ಸುರಮುನೀ ನಾರದನು ಕಿಂಚಿತ್
ಕೊರತೆ ವರುಣನಿಗೆ ಅಗ್ನಿ ಭೃಗುವಜ -
ಗೊರಳಪತ್ನಿ ಪ್ರಸೂತಿ ಮೂವರು ನಾರದನಿಗಧಮ || ೨೦ ||

ನೀಲ ಧೃಷ್ಟದ್ಯುಮ್ನ ಲವ ಈ
ಲೀಲಿಹಾನನ ರೂಪಗಳು ಭೃಗು
ಕಾಲಿಲೊದ್ದದ್ದರಿಂದ ಹರಿಯ ವ್ಯಾಧನೆನಿಸಿದನು ||
ಏಳು ಋಷಿಗಳಿಗುತ್ತಮರು ಮುನಿ
ಮೌಳಿ ನಾರದಗಧಮ ಮೂವರು
ಗಾಳಿಯುತ ಪ್ರಲ್ಹಾದ ಬಾಹ್ಲಿಕ ರಾಯನೆನಿಸಿದನು || ೨೧ ||

ಜನಪ ಕರ್ಮಜರೊಳಗೆ ನಾರದ
ಮುನಿಯನುಗ್ರಹ ಬಲದಿ ಪ್ರಹ್ಲಾ -
ದನಲ ಭೃಗುಮುನಿ ದಕ್ಷಪತ್ನಿಗೆ ಸಮನೆನಿಸಿಕೊಂಬ ||
ಮನುವಿವಸ್ವಾನ್ ಗಾಧಿಜೇರ್ವರು
ಅನಲಗಿಂದಲಿ ಕಿಂಚಿತಾಧಮ
ಎಣಿ ಯೆನಿಸುವರು ಸಪ್ತ ಋಷಿಗಳೆಲ್ಲ ಕಾಲದಲಿ || ೨೨ ||

ಕಮಲ ಸಂಭವ ಭವರೆನಿಪ ಸಂ -
ಯಮ ಮರೀಚಿಯು ಅತ್ರಿ ಅಂಗಿರ
ಸುಮತಿಪುಲಹ ಕ್ರತು ವಸಿಷ್ಠ ಪುಲಸ್ತ್ಯಮುನಿ ಸ್ವಾಹಾ ||
ರಮಣಗಧಮರು ಮಿತ್ರನಾಮಕ
ದ್ಯುಮಣಿರಾಹೂಯುಕ್ತ ಭೀಷ್ಮಕ
ಯಮಳರೂಪನು ತಾರನಾಮಕನೆನಿಸಿ ತ್ರೇತೆಯೊಳು || ೨೩ ||

ನಿರ್ಋತಿಗೆರಡವತಾರ ದುರ್ಮುಖ
ಹರಯುತ ಘಟೋತ್ಕಜರು ಪ್ರಾವಹಿ
ಗುರುಮಡದಿ ತಾರಾ ಸಮರು ಪರ್ಜನ್ಯಗುತ್ತಮರು ||

ಕರಿಗೊರಳ ಹರಯುಕ್ತ ಭಗದ -
ತ್ತರನು ಕತ್ಥನ ಧನಪ ರೂಪಗ -
ಳೆರಡು ವಿಷ್ಣುಪ ಚಾರುದೇಷ್ಣನು ಅಶ್ವಿನಿಗಳ ಸಮ || ೨೪ ||

ದ್ರೋಣ ಧ್ರುವ ದೋಷಾರ್ಕನಗ್ನಿ
ಪ್ರಾಣ ದ್ಯು ವಿಭಾವಸುಗಳೆಂಟು ಕೃ -
ಶಾನು ಶ್ರೇಷ್ಠ ದ್ಯುನಾಮವಸು ಭೀಷ್ಮಾರ್ಯ ಬ್ರಹ್ಮಯುತ ||
ದ್ರೋಣನಾಮಕ ನಂದಗೋಪ ಪ್ರ
ಧಾನ ಅಗ್ನಿಯನುಳಿದು ಏಳು ಸ
ಮಾನರೆನಿಪರು ತಮ್ಮೊಳಗೆ ಜ್ಞಾನಾದಿ ಗುಣದಿಂದ || ೨೫ ||

ಭೀಮ ರೈವತ ಓಜಾ ಜೈಕಪಾ
ತ್ ಮಹಾನ್ ಬಹುರೂಪಕನು ಭವ
ವಾಮ ಉಗ್ರ ವೃಷಾಕಪಿಯಹಿಂರ್ಬುಧ್ನಿಎನುತಿಪ್ಪ ||
ಈ ಮಹಾತ್ಮರ ಮಧ್ಯದೊಳಗೆ ಉ
ಮಾ ಮನೋಹರನುತ್ತಮನು ದಶ
ನಾಮಕನು ಸಮರೆನಿಸಿಕೊಂಬರು ತಮ್ಮೊಳೆಂದೆಂದೂ || ೨೬ ||

ಭೂರ್ಯಜೈಕ ಪದಾಹ್ವಹಿಂರ್ಬು -
ಧ್ನೀರಯಿದು ರುದ್ರಗಣ ಸಂಯುತ
ಭೂರಿಶ್ರವನೆಂದೆನಿಪ ಶಲ ವಿರುಪಾಕ್ಷ ನಾಮಕನೂ ||
ಸೂರಿ ಕೃಪ ವಿಷ್ಕಂಭ ಸಹದೇ -
ವಾ ರಣಾಗ್ರಣಿ ಸೋಮದತ್ತನು
ತಾ ರಚಿಸಿದ ದ್ವಿರೂಪ ಧರೆಯೊಳು ಪತ್ರತಾಪಕನೂ || ೨೭ ||

ದೇವ ಶಕ್ರನುರುಕ್ರಮಾ ಮಿ -
ತ್ರಾ ವರುಣ ಪರ್ಜನ್ಯ ಭಗ ಪೂ -
ಷಾ ವಿವಸ್ವನು ಸವಿತೃ ಧಾತಾ ಅರ್ಯಮತ್ವಷ್ಟಾ ||
ದೇವಕೀ ಸುತನಲ್ಲಿ ಸವಿತೃ ವಿ -
ಭಾವಸುಸುತ ಭಾನುಯೆನಿಸುವ
ಚ್ಯಾವನಪಯುತ ವೀರಸೇನನು ತ್ವಷ್ಟೃನಾಮಕ || ೨೮ ||

ಎರಡಧಿಕ ದಶ ಸೂರ್ಯರೊಳು ಮೂ -
ರೆರಡು ಜನರುತ್ತಮರು ವಿವಸ್ವನು
ವರುಣ ಶಕ್ರನುರುಕ್ರಮನು ಪರ್ಜನ್ಯ ಮಿತ್ರಾಖ್ಯಾ ||
ಮರುತನಾವೇಶಯುತ ಪಾಂಡು
ವರ ಪರಾವಹನೆಂದೆನಿಪ ಕೇ -
ಸರಿಮೃಗ ಸಂಪಾತಿ ಶ್ವೇತತ್ರಯರು ಮರುವಂಶ || ೨೯ ||

ಪ್ರತಿಭವಾತನು ಚೇಕಿತಾನ ವಿ
ಪೃಥುವೆನಿಸುವನು ಸೌಮ್ಯ ಮಾರುತ
ವಿತತ ಸರ್ಪೋತುಂಗ ಗಜನಾಮಕರು ಪ್ರಾಣಾಂಶ ||
ದ್ವಿತಿಯಪಾನ ಗವಾಕ್ಷಗವಯನು
ತೃತಿಯ ವ್ಯಾನ ಉದಾನ ವೃಷಪ -
ರ್ವತುಳ ಶರ್ವತ್ರಾತ ಗಂಧ ಸುಮಾದನರು ಸಮಾನ || ೩೦ ||

ಐವರೊಳಗೀ ಕುಂತಿಭೋಜನು
ಅವಿನಾಮಕ ನಾಗ ಕೃಕಳನು
ದೇವದತ್ತ ಧನಂಜಯರು ಅವತಾರವರ್ಜಿತರು ||
ಆವಹೋದ್ವಹ ವಿವಹ ಸಂವಹ
ಪ್ರಾವಹೀಪತಿ ಮರುತ ಪ್ರವಹನಿ -
ಗಾವಕಾಲಕು ಕಿಂಚಿದಧಮರು ಮರದ್ಗಣರೆಲ್ಲಾ || ೩೧ ||

ಪ್ರಾಣಾಪಾನ ವ್ಯಾನೋದಾನ ಸ
ಮಾನ ರೈವರನುಳಿದು ಮರುತರು
ಊನರೆನಿಪರು ಪತ್ತು [1]ವಿಶ್ವೇದೇವರಿವರಿಂದ ||
ಸೂನುಗಳು ಯೆನಿಸುವರು ಐವರು
ಮಾನಿನಿ ದ್ರೌಪದಿಗೆ ಕೆಲವರು
ಕ್ಷೋಣಿಯೊಳು ಕೈಕೇಯರೆನಿಪರು ಎಲ್ಲಕಾಲದಲಿ || ೩೨ ||

ಪ್ರತಿವಿಂಧ್ಯ ಶೃತಿಸೋಮ ಶೃತಿ ಕೀ
ರುತಿ ಶಾತಾನೀಕ ಶೃತಕರ್ಮ ದ್ರೌ -
ಪದಿ ಕುವರರಿವರೊಳಗೆ ಅಭಿತಾಮ್ರ ಪ್ರಮುಖ ಚಿತ್ರ ||

ರಥನು ಗೋಪ ಕಿಶೋರ ಬಲರೆಂ
ಬತುಲರೈ ಗಂಧರ್ವರಿಂದಲಿ
ಯುತರು ಧರ್ಮ ವೃಕೋದರಾದಿಜರೆಂದು ಕರೆಸುವರೂ || ೩೩ ||

ವಿವಿಧ ಮೈಂದರು ನಕುಲ ಸಹದೇವ
ವಿಭು ತ್ರಿಶಿಖಾಶ್ವಿನಿಗಳಿವರೊಳು
ದಿವಿಪಸಾವೇಶ ವಿಹುದೆಂದಿಗು ದ್ಯಾವಾ ಪೃಥ್ವಿ ಋಭು ||
ಪವನಸುತ ವಿಷ್ವಕ್ಸೇನನು ಉಮಾ
ಕುವರ ವಿಘ್ನಪ ಧನಪ ಮೊದಲಾ
ದವರು ಮಿತ್ರಗೆ ಕಿಂಚಿತಾಧಮರೆನಿಸಿಕೊಳುತಿಹರು || ೩೪ ||

ಪಾವಕಾಗ್ನಿ ಕುಮಾರನೆನಿಸುವ
ಚ್ಯಾವನನುಚಥ್ಯಮುನಿ ಚಾಕ್ಷುಷ
ರೈವತ ಸ್ವಾರೋಚಿಷೋತ್ತಮ ಬ್ರಹ್ಮರುದ್ರೇಂದ್ರ ||
ದೇವ ಧರ್ಮನು ದಕ್ಷನಾಮಕ
ಸಾವರಣಿ ಶಶಿಬಿಂದು ಪೃಥು ಪ್ರಿ -
ಯವ್ರತ ಮಾಂಧಾತ ಗಯನು ಕಕುಸ್ಥ ದೌಷ್ಯಂತಿ || ೩೫ ||

ಭರತ ಋಷಭಜ ಹರಿಣಿಜಾ ದ್ವಿಜ
ಭರತ ಮೊದಲಾದಖಿಳರಾಯರೊ -
ಳಿರುತಿಹದು ಶ್ರೀ ವಿಷ್ಣು ಪ್ರಾಣಾವೇಶ ಪ್ರತಿದಿನದಿ ||
ಪರ ದಿವಸ್ಪತಿ ಶಂಭುರದ್ಭುತ
ಕರೆಸುವನು ಬಲಿ ವಿಧೃತ ಶುಚಿತಿ
ಸೆರೆಯೆನಿಪ ಋತಧಾಮ ಮೊದಲಾದಷ್ಟಗಂಧರ್ವ || ೩೬ ||

ಅರಸೆನಿಪ ಕರ್ಮಜರು ವೈಶ್ವಾ
ನರಗಧಮ ಶತಗುಣದಿ ವಿಷ್ಣ್ವೀ
ಶ್ವರಗೆ ಕಿಂಚಿದ್ಗುಣ ಕಡಿಮೆ ಬಲಿ ಮುಖ್ಯಪಾವಕರು ||
ಶರಭ ಪರ್ಜನ್ಯಾಖ್ಯ ಮೇಘ ಪ
ತರಣಿ ಭಾರ್ಯಾ ಸಂಜ್ಞೆ ಶಾರ್ವರಿ
ಕರನ ಪತ್ನಿಯು ರೋಹಿಣೀ ಶಾಮಲೆಯು ದೇವಕಿಯು || ೩೭ ||

ಅರಸಿಯೆನಿಪಳು ಧರ್ಮರಾಜಗೆ
ವರುಣಭಾರ್ಯೋಷಾದಿಷಟ್ಕರು
ಕೊರತೆಯೆನಿಪರು ಪಾವಕಾದ್ಯರಿಗೆರಡು ಗುಣದಿಂದ ||
ಎರಡು ಮೂರ್ಜ್ಜನರಧಮಸ್ವಾಹಾ
ಕರೆಸುವಳುಷಾದೇವಿ ವೈಶ್ವಾ -
ನರನ ಮಡದಿಗೆ ದಶಗುಣಾವರಳಶ್ರಿನೀಬಾರ್ಯಾ || ೩೮ ||

ಸುದರುಶನ ಶಕ್ರಾದಿ ಸುರಯುತ
ಬುಧನು ತಾನಭಿಮನ್ಯುವೆನಿಸುವ
ಬುಧನಿಗಿಂದಾಶ್ವಿನೀಭಾರ್ಯಾ ಶಲ್ಯ ಮಾಗಧರ ||
ಉದರಜೋಷಾದೇವಿಗಿಂತಲ -
ಧಮನೆನಿಪ ಶನೈಶ್ಚರನು ಶನಿ
ಗಧಮ ಪುಷ್ಕರ ಕರ್ಮಪನು ಯನಿಸುವನು ಬುಧರಿಂದ || ೩೯ ||

ಉದ್ವಹಾ ಮಾರುತಾನ್ವಿತ ವಿರಾ -
ಧ ದ್ವಿತಿಯ ಸಂಜಯನು ತುಂಬರು
ವಿದ್ವದುತ್ತಮ ಜನಮೇಜಯ ತಷ್ಟ್ರುಯುತ ಚಿತ್ರರಥ ||
ಸದ್ವಿನುತ ದಮ ಘೋಷಕ ಕದಂಬ
ಧದ್ವಯರು ಗಂಧರ್ವ ದನು ಮನು
ಪದ್ಮಸಂಭವಯುತಾಕ್ರೂರ ಕಿಶೋರರೆನಿಸುವನು || ೪೦ ||

ವಾಯುಯುತ ಧೃತರಾಷ್ಟ್ರ ದಿವಿಜರ
ಗಾಯಕನು ಧೃತರಾಷ್ಟ್ರ ನಕ್ರನು
ರಾಯ ಧೃಪದನವಹ ವಿಶಿಷ್ಟಾ ಹೂಹೂ ಗಂಧರ್ವ ||
ಗಾಯಕ ವಿರಾಡಿವಹಯುತ ಹಾಹಾ
ಗೇಯ ವಿದ್ಯಾಧರನೆ ಅಜಗರ
ತಾನೆನಿಸುವನು ಉಗ್ರಸೇನನೆ ಉಗ್ರಸೇನಾಖ್ಯ || ೪೧ ||

ಬಿಸಜಸಂಭವಯುಕ್ತ ವಿಶ್ವಾ -
ವಸು ಯುಧಾಮನ್ಯುತ್ತಮೌಜಸ
ಬಿಸಜ ಮಿತ್ರಾರ್ಯಮಯುತ ಪರಾವಸು ಯೆನಿಸುತಿಪ್ಪ ||

ಅಸಮ ಮಿತ್ರಾನ್ವಿತನು ಸತ್ಯಜಿ -
ದ್ವಸುಧೆಯೊಳು ಚಿತ್ರಸೇನನಮೃತಾಂ -
ಧಸರ ಗಾಯಕರೆಂದು ಕರೆಸುವರಾವಕಾಲದಲಿ || ೪೨ ||

ಉಳಿದ ಗಂಧರ್ವರುಗಳೆಲ್ಲರೂ
ಬಲಿಮೊದಲು ಗೋಪಾಲರೆನಿಪರು
ಇಳೆಯೊಳಗೆಸ್ಯೆಳೇಂದ್ರಿ ಪಿಂಗಳೆಯಪ್ಸರಸ್ತ್ರೀಯು ||
ತಿಲೋತ್ತಮೆಯು ಪೂರ್ವದಲಿ ನಕುಲನ
ಲಲನೆ ಪಾರ್ವತಿಯೆನಿಸುವಳು ಗೋ
ಕುಲದ ಗೋಪಿಯರೆಲ್ಲ ಶಬರಿ ಮುಖ್ಯರಪ್ಸರರು || ೪೩ ||

ಕೃಷ್ಣವರ್ತ್ಮನ ಸುತರೊಳಗೆ ಶತ
ದ್ವ್ಯಷ್ಟ ಸಾವಿರ ಸ್ತ್ರೀಯರಲ್ಲಿ ಪ್ರ
ವಿಷ್ಟಳಾಗಿ ರಮಾಂಬ ತತ್ತನಾಮ ರೂಪದಲಿ ||
ಕೃಷ್ಣ ಮಹಿಷಿಯರೊಳಗೆ ಯಿಪ್ಪಳು
ತ್ವಷ್ಟೃಪುತ್ರಿ ಕಶೇರು ಇವರೊಳು
ಶ್ರೇಷ್ಠಳೆನಿಪಳು ಉಳಿದ ಋಷಿಗಣ ಗೋಪಿಕಾಸಮರು || ೪೪ ||

ಸೂನುಗಳು ಎನಿಸುವರು ದೇವ ಕೃ -
ಶಾನುವಿಗೆ ಕೃತು ಸಿಂಧು ಶುಚಿ ಪವ -
ಮಾನ ಕೌಶಿಕರೈದು ತುಂಬುರು ಊರ್ವಶೀಶತರು ||
ಮೇನಕಾ ಋಷಿ ರಾಯರುಗಳಾ -
ಜಾನ ಸುರರಿಗೆ ಸಮರೆನಿಪರು ಸು -
ರಾಣಕರನಾಖ್ಯಾತ ದಿವಿಜರ ಜನಕರೆನಿಸುವರು || ೪೫ ||

ಪಾವಕರಗಿಂದಧಮರೆನಿಸುವ
ದೇವಕುಲಜಾನಾಖ್ಯ ಸುರಗಣ
ಕೋವಿದರು ನಾನಾ ಸುವಿದ್ಯದಿ ಸೋತ್ತಮರ ನಿತ್ಯ ||
ಸೇವಿಪರು ಸದ್ಭಕ್ತಿ ಪೂರ್ವಕ
ಸ್ವಾವವರರಿಗುಪದೇಶಿಸುವರು ನಿ -
ರಾವಲಂಬನ ವಿಮಲ ಗುಣಗಳ ಪ್ರತಿ ದಿವಸದಲ್ಲಿ || ೪೬ ||

ಸುರರೊಳಗೆ ವರ್ಣಾಶ್ರಮಗಳೆಂಬ
ಎರಡು ಧರ್ಮಗಳಿಲ್ಲ ತಮ್ಮೊಳು
ನಿರುಪಮರು ಯೆಂದೆನಿಸಿಕೊಂಬರು ತಾರತಮ್ಯದಲಿ ||
ಗುರು ಶಿಷ್ಯತ್ವವು ಈ ಋಷಿಗಳೊಳ
ಗಿರುತಿಹರು ಅಜಾನಸುರರಿಗೆ
ಚಿರಪಿತೃ ಶತಾಧಮರೆನಿಸುವರು ಏಳುಜನರುಳಿದು || ೪೭ ||

ಚಿರಪಿತೃಗಳಿಂದಧಮ ಗಂಧ -
ರ್ವರುಗಳೆನಿಪರು ದೇವನಾಮಕ
ಕೊರತೆ ಎನಿಸುವ ಚಕ್ರವರ್ತಿಗಳಿಂದ ಗಂಧರ್ವ ||
ನರರೊಳುತ್ತಮರೆನಿಸುವರು ಹ -
ನ್ನೆರಡು ಎಂಭತ್ತೆಂಟು ಗುಣದಲಿ
ಹಿರಿಯರೆನಿಪರು ಕ್ರಮದಿ ದೇವಾವೇಶಬಲದಿಂದ || ೪೮ ||

ದೇವತೆಗಳಿಂ ಪ್ರೇಷ್ಯರೆನಿಪರು
ದೇವ ಗಂಧರ್ವಗಳವರಿಂ -
ದಾವಕಾಲಕು ಶಿಕ್ಷಿತರು ನರನಾಮಗಂಧರ್ವ ||
ಕೇವಲತಿ ಸದ್ಭಕ್ತಿ ಪೂರ್ವಕ
ಯಾವದಿಂದ್ರಿಯಗಳ ನಿಯಾಮಕ
ಶ್ರೀವರನೆ ಎಂದರಿತು ಭಜಿಪರು ಮಾನುಷ್ಯೋತ್ತಮರು || ೪೯ ||

ಬಾದರಾಯಣ ಭಾಗವತ ಮೊದ -
ಲಾದ ಶಾಸ್ತ್ರಗಳಲ್ಲಿ ಬಹುವಿಧ
ದ್ವಾದಶ ದಶ ಸುಪಂಚ ವಿಂಶತಿ ಶತ ಸಹಸ್ರಯುತ ||
ಭೇದಗಳ ಪೇಳಿದನು ಸ್ವೋತ್ತಮ
ಆದಿತೇಯಾವೇಶ ಬಲದಿ ವಿ
ರೋಧ ಚಿಂತಿಸಬಾರದಿದು ಸಾಧು ಜನ ಸಮ್ಮತವು || ೫೦ ||

ಇವರು ಮುಕ್ತಿಗೆ ಯೋಗ್ಯರೆಂಬರು
ಶ್ರವಣ ಮನನಾದಿಗಳ ಪರಮೋ -
ತ್ಸವದಿ ಮಾಡುತ ಕೇಳಿ ನಲಿಯುತ ಧರ್ಮಕಾಮಾರ್ಥ ||

ತ್ರಿವಿಧ ಫಲಗಳಪೇಕ್ಷಿಸದೆ ಶ್ರೀ
ಪವನ ಮುಖ ದೇವಾಂತರಾತ್ಮಕ
ಪ್ರವರತಮ ಶಿಷ್ಟೇಷ್ಟದಾಯಕನೆಂದು ಸ್ಮರಿಸುವರು || ೫೧ ||

ನಿತ್ಯ ಸಂಸಾರಿಗಳು ಗುಣ ದೋ
ಷಾತ್ಮಕನು ಬ್ರಹ್ಮಾದಿ ದಿವಿಜರು
ಭೃತ್ಯರೆಂಬರು ರಾಜನೋಪಾದಿಯಲಿ ಹರಿಯೆಂಬ ||
ಕೃತ್ತಿವಾಸನು ಬ್ರಹ್ಮ ಶ್ರೀ ವಿ
ಷ್ಣು ತ್ರಯರು ಸಮ ದುಃಖ ಸುಖ ಉ -
ತ್ಪತ್ತಿ ಮೃತಿಭಯ ಪೇಳುವರು ಅವತಾರಗಳಿಗೆ ಸದಾ || ೫೨ ||

ತಾರತಮ್ಯಜ್ಞಾನವಿಲ್ಲದೆ
ಸೂರಿಗಳ ನಿಂದಿಸುತ ನಿತ್ಯ
ತೋರುತ್ತಿಪ್ಪನು ಸುಜನರೋಪಾದಿಯಲಿ ನರರೊಳಗೆ ||
ಕ್ರೂರ ಕರ್ಮಾಸಕ್ತನಾಗಿ ಶ -
ರೀರ ಪೋಷಣೆ ಗೋಸುಗದಿ ಸಂ -
ಚಾರಮಾಳ್ಪರು ಅನ್ಯ ದೇವತೆ ನೀಚರಾಲಯದಿ || ೫೩ ||

ದಶಪ್ರಮತಿ ಮತಾಬ್ಧಿಯೊಳು ಸುಮ -
ನಸರೆನಿಪ ರತ್ನಗಳನವಲೋ -
ಕಿಸಿ ತೆಗೆದು ಪ್ರಾಕೃತ ಸುಭಾಷಾ ತಂತುಗಳ ರಚಿಸಿ ||
ಅಸುಪತಿ ಶ್ರೀ ರಮಣಗೆ ಸಮ
ರ್ಪಿಸಿದ ಸಜ್ಜನರಿದನು ಸಂತೋ
ಷಿಸಲಿ ದೋಷಗಳೆಣಿಸದಲೆ ಕಾರುಣ್ಯದಲಿ ನಿತ್ಯ || ೫೪ ||

ನಿರುಪಮನು ಶ್ರೀ ವಿಷ್ಣು ಲಕ್ಷ್ಮೀ
ಸರಸಿ ಜೋದ್ಭವ ವಾಯು ವಾಣಿ
ಗರುಡ ಷಣ್ಮಹಿಷಿಯರು ಪಾರ್ವತಿ ಶಕ್ರ ಸ್ಮರ ಪ್ರಾಣ ||
ಗುರು ಸ್ವಾಯಂಭುವ ಪ್ರವಹ ಸೂರ್ಯನು
ವರುಣ ನಾರದ ವಹ್ನಿ ಸಪ್ತಾಂ -
ಗಿರರು ಮಿತ್ರ ಗಣೇಶ ಪೃಥು ಗಂಗಾ ಸ್ವಾಪ ಬುಧನು || ೫೫ ||

ತರಣಿ ತನಯ ಶನೈಶ್ಚರನು ಪು
ಷ್ಕರ ಅಜಾನಜ ಚಿರಪಿತೃರು ಗಂಧರ್ವ -
ರೀರ್ವರು ದೇವ ಮಾನುಷ ಚಕ್ರವರ್ತಿಗಳು ||
ನರರೊಳುತ್ತಮ [1]ಮಧ್ಯಮಾಧಮ
ಕರೆಸುವರು ಮಧ್ಯೋತ್ತಮರು ಈ
ರೆರಡು ಜನ ಕೈವಲ್ಯ ಮಾರ್ಗಸ್ಥರೆಂದಾನಮಿಪೆ || ೫೬ ||

ಸಾರಭಕ್ತಿ ಜ್ಞಾನದಿ ಬ್ರಹ
ತ್ತಾರತಮ್ಯವನರಿತು ಪಠಿಸುವ
ಸೂರಿಗಳಿಗನುದಿನದಿ ಪುರುಷಾರ್ಥಗಳ ಪೂರೈಸಿ ||
ಕಾರಣಿಕ ಮತಾಂತರಾತ್ಮಕ
ಮಾರಮಣ ಜಗನ್ನಾಥವಿಠ್ಠಲ
ತೋರಿಕೊಂಬನು ಹೃತ್ಕಮಲದೊಳು ಯೋಗ್ಯತೆಗಳರಿತು || ೫೭ ||

# ೨೨ ಭಕ್ತಾಪರಾಧ ಸಹಿಷ್ಣು ಸಂಧಿ
## (ಸಕಲ ದುರಿತ ನಿವಾರಣಾ ಸಂಧಿ)

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಶ್ರೀ ಲಕುಮಿವಲ್ಲಭಗೆ ಸಮ ಕರು
ಣಾಳುಗಳ ನಾಕಾಣೆನೆಲ್ಲಿ ಕು
ಚೇಲನವಲಿಗೆ ಮೆಚ್ಚಿ ಕೊಟ್ಟನು ಸಕಲ ಸಂಪದವಾ ||
ಕೇಳಿದಾಕ್ಷಣ ವಸ್ತ್ರಗಳ ಪಾಂ -
ಚಾಲಿಗಿತ್ತ ದೈತ್ಯನುದರವ
ಸೀಳಿ ಸಂತೈಸಿದನು ಪ್ರಹ್ಲಾದನ ಕೃಪಾಸಾಂದ್ರ || ೧ ||

ದೇವಶರ್ಮಾಹ್ವಯ ಕುಟುಂಬಕೆ
ಜೀವನೋಪಾಯವನು ಕಾಣದೆ
ದೇವ ದೇವ ಶರಣ್ಯ ರಕ್ಷಿಸು ರಕ್ಷಿಸೆನೆ ಕೇಳಿ ||

ತಾನೊಲಿದು ಪಾಲಿಸಿದ ಸೌಖ್ಯ ಕೃ -
ಪಾವಲೋಕನದಿಂದ ಈತನ
ಸೇವಿಸದೆ ಸೌಖ್ಯಗಳ ಬಯಸುವರಲ್ಪ ಮಾನವರು || ೨ ||

ಶ್ರೀನಿವಾಸನ ಪೋಲ್ವ ಕರುಣಿ ಗ -
ಳೀ ನಳಿನಜಾಂಡದೊಳು ಕಾಣೆ ಪ್ರ -
ವೀಣರಾದವರರಸಿನೋಳ್ಪುದು ಶೃತಿ ಪುರಾಣದೊಳು ||
ದ್ರೋಣ ಭೀಷ್ಮ ಕೃಪಾದಿಗಳು ಕುರು
ಸೇನೆಯೊಳಗಿರಲವರವ ಗುಣಗ
ಳೇನು ನೋಡದದೆ ಪಾಲಿಸಿದ ಪರಮಾತ್ಮ ಪರಗತಿಯ || ೩ ||

ಚಂಡವಿಕ್ರಮ ಚಕ್ರಶಂಖಿವ
ತೊಂಡಮಾನ ನೃಪಾಲಗಿತ್ತನು
ಭಾಂಡಕಾರಕ ಭೀಮನ ಮೃದಾಭರಣಗಳಿಗೊಲಿವ ||
ಮಂಡೆಯೊಡದಾಕಾಶರಾಯನ
ಹೆಂಡತಿಯ ನುಡಿಕೇಳಿ ಮಗಳಿಗೆ
ಗಂಡನೆನಿಸಿದ ಗಹನ ಮಹಿಮನ ಗದಾಬ್ಜಧರಪಾಣಿ || ೪ ||

ಗೌತಮನ ನಿಜ ಪತ್ನಿಯನು ಪುರು
ಹೂತ ವೈದಿರೆ ಕಾಯ್ದು ವೃತನ
ಘಾತಿಸಿದ ಪಾಪವನು ನಾಲ್ಕು ವಿಭಾಗವ ಮಾಡಿದನು ||
ಶಾತಕುಂಭಾತ್ಮಕ ಕಿರೀಟವ
ಕೈತವದಿ ಕದ್ದೊಯ್ದು ಇಂದ್ರಾ -
ರಾತಿ ಬಾಗಿಲ ಕಾಯ್ದ ಭಕ್ತತ್ವೇನ ಸ್ವೀಕರಿಸಿ || ೫ ||

ನಾರ ನಂದವ್ರಜದ ಸ್ತ್ರೀಯರ
ಜಾರ ಕರ್ಮಕೆ ಒಲಿಯುತಜ ಸುಕು
ಮಾರನೆನಿಸಿದ ನಂದಗೋಪಗೆ ನಳಿನಭವಜನಕ ||
ವೈರ ವರ್ಜಿತ ದೈತ್ಯರನು ಸಂ -
ಹಾರ ಮಾಡಿದ ವಿಷಗಮನ ಪಗ -
ಲೇರಿವನು ಗೋಪಾಲಕರ ವೃಂದಾವನದೊಳಂದು || ೬ ||

ಶ್ರೀ ಕರಾರ್ಜಿತ ಪಾದಪಲ್ಲವ
ಗೋಕುಲದ ಗೊಲ್ಲತಿಯರೊಲಿಸಿದ
ಪಾಕಶಾಸನ ಪೂಜ್ಯ ಗೋ ವತ್ಸಗಳಕಾಯ್ದ ||
ನೀ (ಓ) ಕರಿಸಿ ಕುರುಪತಿಯ ಭೋಜನ
ಸ್ವೀಕರಿಸಿದನು ವಿದುರನೌತನ
ಬಾಕುಲಿಕನಂದದಲಿ ತೋರಿದ ಭಕ್ತವತ್ಸಲನೂ || ೭ ||

ಪುತ್ರನೆನಿಸಿ ಗೋಪಿ ದೇವಿಗೆ
ಭರ್ತೃವೆನಿಸಿದ ವ್ರಜದನಾರಿಯ -
ರುತ್ರ ಲಾಲಿಸಿ ಪರ್ವತವ ನೆಗೆಹಿದ ಕೃಪಾಸಾಂದ್ರ ||
ಶತ್ರು ತಾಪನು ಯಜ್ಞಪುರುಷನ
ಪುತ್ರಿಯರ ತಂದಾಳ್ದ ತ್ರಿಜಗ -
ದ್ಧಾತ್ರ ಮಂಗಳಗಾತ್ರ ಪರಮಪವಿತ್ರ ಸುರಮಿತ್ರ || ೮ ||

ರೂಪನಾಮವಿಹೀನ ಗರ್ಗಾ -
ರೋಪಿತ ಸುನಾಮದಿ ಕರೆಸಿದ
ವ್ಯಾಪಕ ಪರಿಚ್ಛಿನ್ನ ರೂಪದಿ ತೋರ್ದ ಲೋಕರಿಗೆ ||
ದ್ವಾಪರಾಂತದಿ ದೈತ್ಯರನ ಸಂ
ತಾಪನ ಗೊಳಿಸುವೆನೆಂದು ಶ್ವೇತ
ದ್ವೀಪ ಮಂದಿರನವತರಿಸಿ ಸಲಹಿದನು ತನ್ನವರ || ೯ ||

ಶ್ರೀ ವಿರಂಚಾದ್ಯಮರನುತ ನಾ -
ನಾವತಾರ ಮಾಡಿ ಸಲಹಿದ
ದೇವತೆಗಳನು ಋಷಿಗಳನು ಕ್ಷಿತಿಪರನು ಮಾನವರ ||
ಸೇವೆಗಳ ಕೈಕೊಂಡು ಫಲಗಳ -
ನೀವ ನಿತ್ಯಾನಂದಮಯ ಸು -
ಗ್ರೀವ ಧ್ರುವ ಮೊದಲಾದ ಭಕ್ತರಿಗಿತ್ತ ಪುರಾಷಾರ್ಥ || ೧೦ ||

ದುಷ್ಟದಾನವಹರಣ ಸರ್ವೋ -
ತ್ಕೃಷ್ಟ ಸದ್ಗುಣಭರಿತ ಭಕ್ತಾ -
ಭೀಷ್ಟದಾಯಕ ಭವವಿನಾಶಕ ವಿಗತಭಯ ಶೋಕ ||

ನಷ್ಟ ತುಷ್ಟಿಗಳಿಲ್ಲ ಸೃಷ್ಟ್ಯಾ -
ದೃಷ್ಟ ಕರ್ತನಾಗಾವ ಕಾಲದಿ
ಹೃಷ್ಟನಾಗುವ ಸ್ಮರಣೆ ಮಾತ್ರದಿ ಹೃದ್ಗುಹಾವಾಸಿ || ೧೧ ||

ಹಿಂದೆ ಪ್ರಳಯೋದಕದಿ ತಾವರೆ
ಕಂದಗಂಜಸಿ ಕಾಯ್ದ ತಲೆಯೊಳು
ಬಾಂದೊರೆಯ ಪುತ್ತ್ರವಗೊಲಿದು ಪರಿಯಂಕ ಪದವಿತ್ತು ||
ವಂದಿಸಿದ ವೃಂದಾರಕರ ಸ -
ದ್ವೃಂದ ಕರುಣಿಸಿದ ಸುಧೆಯ ಕರುಣಾ
ಸಿಂಧು ಕಮಲಾಕಾಂತ ಬಹುನಿಶ್ಚಿಂತ ಜಯವಂತ || ೧೨ ||

ಸತ್ಯ ಸಂಕಲ್ಪಾನುಸಾರ ಪ್ರ -
ವರ್ತಿಸುವ ಪ್ರಭು ತನಗೆ ತಾನೇ
ಭೃತ್ಯನೆನಿಸುವ ಭೋಕ್ತೃ ಭೋಗ್ಯ ಪದಾರ್ಥಗಳೊಳಗಿದ್ದು ||
ತತ್ತದಾಹ್ವಯನಾಗಿ ತರ್ಪಕ
ತೃಪ್ತಿ ಬಡಿಸುವ ತತ್ವಪತಿಗಳ
ಮತ್ತರಾದಸುರರ್ಗೆ ಅಸಮುಚೀನ ಫಲವೀವ || ೧೩ ||

ಬಿಟ್ಟಿಗಳನೆವದಿಂದಲಾಗಲಿ
ಹೊಟ್ಟೆಗೋಸುಗ ವಾದರಾಗಲಿ
ಕೆಟ್ಟರೋಗ ಪ್ರಯುಕ್ತವಾಗಲಿ ಅಣಕದಿಂದೊಮ್ಮೆ ||
ನಿಟ್ಟು ಸುರಿನಿಂ ಬಾಯ್ದೆರದು ಹರಿ
ವಿಠಲಾ ಸಲಹೆಂದೆನಲು ಕೈ -
ಗೊಟ್ಟು ಕಾವ ಕೃಪಾಳು ಸಂತತ ತನ್ನ ಭಕತರನ || ೧೪ ||

ಈ ವಸುಂಧರೆಯೊಳಗೆ ಶ್ರೀ ಭೂ
ದೇವಿಯರಸನ ಸುಗುಣ ಕರ್ಮಗ -
ಳಾವ ಬಗೆಯಿಂದಾದರಾಗಲಿ ಕೀರ್ತಿಸುವ ನರನ ||
ಕಾವ ಕಮಲದಳಾಯತಾಕ್ಷ ಕೃ -
ಪಾವಲೋಕನದಿಂದ ಕಪಿ ಸು
ಗ್ರೀವಗೊಲಿದಂದದಲಿ ಅವರಭಿಲಾಷೆ ಪೂರೈಪ || ೧೫ ||

ಚೇತನಾಂತರ್ಯಾಮಿ ಲಕ್ಷ್ಮೀ
ನಾಥ ಕರ್ಮಗಳನುಸರಿಸಿ ಜನಿ -
ತೋತವಿಷ್ಣು ಎಂಬ ಪ್ರತಿ ಪಾದ್ಯ ನಮ್ಮೊದನೆ ||
ಜಾತನಾಗುವ ಜನ್ಮರಹಿತಾ -
ಕೂತಿನಂದನ ಭಕ್ತರಿಂದಾ -
ಹೂತನಾಗಿ ಮನೋರಥವ ಬೇಡಿಸಿಕೊಳ್ಳುದಲೀವ || ೧೬ ||

ನೃಷತು ಎನಿಸು ಮನುಜರೊಳು ಸುರ -
ಋಷಭನಿಂದ್ರಿಯಗಳೊಳು ತತ್ತ್ವ -
ದ್ವಿಪಯುಗಳ ಭುಂಜಿಸುವ ಹೋತಾಹ್ವಯನು ತಾನಾಗಿ ||
ವೃಷರಹಿತ ವೇದದೊಳು ಋತು ಸತು
ಪೆಸರಿನಿಂದಲಿ ಕರೆಸುತ ಜಗ -
ತ್ರಸವಿತ ನಿರಂತರದಿ ಸಂತೈಸುವನು ಭಕುತರನು || ೧೭ ||

ಅಬ್ಜಭವಪಿತ ಜಲಧರಾದ್ರಿಯೊ -
ಳಬ್ಜ ಗೋಜಾದ್ರಿಜನೆನಿಸಿ ಜಲ -
ದುಬ್ಬಳಿ ಪೀಯೂಷ ತಾವರೆ ಶ್ರೀ ಶಶಾಂಕದೊಳು ||
ಕಬ್ಬು ಕದಳಿ ಲತಾ ತೃಣ ದ್ರುಮ
ಹೆಬ್ಬುಗೆಯ ಮಾಡುತಿಹ ಗೋಜನು
ಯಿಬ್ಬಗೆಯ ಪ್ರತೀಕದೊಳು ಮಣಿ ಮೃಗ ಸೃಜಿಪನದ್ರಿಜನು || ೧೮ ||

ಶೃತಿ ವಿನುತ ಸರ್ವತ್ರದಲಿ ಭಾ -
ರತಿರಮಣನೊಳಗಿದ್ದು ತಾ ಶುಚಿ -
ಷತುವೆನಿಸಿ ಜಡ ಚೇತನರನು ಪವಿತ್ರ ಮಾಡುತಿಹ ||
ಅತುಳ ಮಹಿಮಾನಂತರೂಪಾ -
ಚ್ಯುತನೆನಿಸಿ ಚಿದ್ದೇಹದೊಳು ಪ್ರಾ -
ಕೃತ ಪುರುಷನಂದದಲಿ ಚೇಷ್ಟೆಗಳ ಮಾಳ್ಪ || ೧೯ ||

ಅತಿಥಿಯೆನಿಸುವನನ್ನಮಯ ಭಾ -
ರತಿರಮಣನೊಳು ಪ್ರಾಣಮಯ ಪ್ರಾ -
ಕೃತ ವಿಷಯ ಚಿಂತನೆಯ ಮಾಡಿಸುವನು ಮನೋಮಯನು ||

ಯತನ ವಿಜ್ಞಾನ ಮಯ ಬರಲದ
ಜತನ ಮಾಡಿಸಿ ಆತ್ಮ ಜಾಯಾ
ಸುತರ ಸಂಗದಿ ಸುಖಪ ನೀಡಾನಂದ ಮಯ ನೆನೆಸಿ || ೨೦ ||

ಇನಿತು ರೂಪಾತ್ಮನಿಗೆ ದೋಷಗ -
ಳೆನಿತು ಬಪ್ಪವು ಪೇಳಿರ್ಮ ಬ್ರಾ -
ಹ್ಮಣ ಕುಲೋತ್ತಮರಾದವರು ನಿಷ್ಕಪಟ ಬುದ್ಧಿಯಲಿ ||
ಗುಣನಿಯಾಮಕ ತತ್ತ್ವದಾಹ್ವಯ
ನೆನಿಸಿ ಕಾರ್ಯವ ಮಾಳ್ಪದೇವನ
ನೆನದ ಮಾತ್ರದಿ ದೋಷರಾಶಿಗಳಲ್ಲ ಕೆಡುತಿಹವು || ೨೧ ||

ಕುಷ್ಠನೆನಿಸುವ ಭೂಮಿಯೊಳು ಅ -
ಶಿಷ್ಟನೆನಿಸುವ ವಿಗ್ನಲಯ ದೊಳು
ಖಷ್ಠನೆನಿಪಾಕಾಶದೊಳು ಒಬ್ಬೊಬ್ಬರೊಳಗಿದ್ದು ||
ವ್ಯಷ್ಟನೆನಿಸು ಸರ್ವರೊಳಗೆ ಸ -
ಮಷ್ಟನೆನಿಸುವ ಬಳಿಯಲಿದ್ದು ಉ -
ಪಷ್ಠ ನೆನಿಪ ವಿಶೋಭನ ವಿಶುದ್ಧಾತ್ಮ ಲೋಕದೊಳು || ೨೨ ||

ಜ್ಞಾನದನು ಎಂದೆನಿಪ ಶಾಸ್ತ್ರದಿ
ಮಾನವರು ಎಂದೆನಿಪ ವಸನದಿ
ದಾನಶೀಲಸುಬುದ್ಧಿಯೊಳಗವದಾನ್ಯನೆನಿಸುವೆನು ||
ವೈನತೇಯವರೂಢ ತತ್ತತ್
ಸ್ಥಾನದಲಿ ತತ್ತದ್ಸ್ವಭಾವಗ -
ಳಾನುಸಾರ ಚರಿತ್ರೆಗಳ ಮಾಡುತಲೆ ನೆಲಸಿಪ್ಪ || ೨೩ ||

ಗ್ರಾಮಪನೊಳಗ್ರಣಿ ಯೆನಿಸುವನು
ಗ್ರಾಮಣಿ ಯನಿಸುವನು ಜನರೊಳು
ಗ್ರಾಮುಪಗ್ರಾಮಗಳೊಳು ಶ್ರೀಮಾನೆನಿಸುತಿಪ್ಪ ||
ಶ್ರೀ ಮನೋರಮ ತಾನೆ ಯೋಗ
ಕ್ಷೇಮ ನಾಮಕನಾಗಿ ಸಲಹುವ
ಈ ಮಹಿಮೆ ಮಿಕ್ಕಾದ ದೈವರಿಗುಂಟೆ ಲೋಕದೊಳು || ೨೪ ||

ವಿಜಯ ಸಾರಥಿಯೆಂದು ಗರುಡ
ಧ್ವಜನ ಮೂರ್ತಿಯ ಭಕ್ತಿ ಪೂರ್ವಕ
ಭಜಿಸುತಿಪ್ಪ ಮಹಾತ್ಮರಿಗೆ ಸರ್ವತ್ರದಲಿಯೊಲಿದು ||
ವಿಜಯದನು ತಾನಾಗಿ ಸಲಹುವ
ಭುಜಗ ಭೂಷಣ ಪೂಜ್ಯ ಚರಣಾಂ -
ಭುಜ ವಿಭೂತಿದ ಭುವನ ಮೋಹನ ರೂಪ ನಿರ್ಲೇಪ || ೨೫ ||

ಅನಭಿಮತ ಕರ್ಮ ಪ್ರವಹದೊಳ
ಗನಿಮಿಷಾದಿ ಸಮಸ್ತ ಚೇತನ
ಗಣವಿಹುದು ತತ್ಫಲಗಳುಣ್ಣದೆ ಸೃಷ್ಟಿಸದ ಮುನ್ನ ||
ವನಿತೆಯಿಂದೊಡಗೂಡಿ ಕರುಣಾ
ವನಧಿನಿರ್ಮಿಸೆ ತಮ್ಮ ತಮ್ಮಯ
ಅನುಚಿತೋಚಿತ ಕರ್ಮ ಫಲಗಳನುಣುತ ಚರಿಸುವರು || ೨೬ ||

ಝಲ್ಲಡಿಯ ನೆಳಲಂತೆ ಭವ ಸುಖ
ತಲ್ಲಣವ ಗೊಳಿಸುವದು ನಿಶ್ಚಯ
ವಲ್ಲ ಸಾಲವ ಮಾಡಿ ಸಕ್ಕರೆ ಮೆದ್ದ ತೆರನಂತೆ ||
ಕ್ಷುಲ್ಲಕರ ಕೊಂಡಾಡದಲೆ ಶ್ರೀ
ವಲ್ಲಭನ ಸದ್ಗುಣಗಣಂಗಳ
ಬಲ್ಲವರ ಕೊಂಡಾಡಿ ಸಂಪಾದಿಸು ಪರಂಪದವ || ೨೭ ||

ಝಲ್ಲಡಿಯ ನೆಳಲಂತೆ ತೋರ್ಪುದು
ಎಲ್ಲಕಾಲದಿ ಭವದ ಸೌಖ್ಯವು
ಎಲ್ಲಿ ಪೊಕ್ಕರು ಬಿಡದೆ ಬೆಂಬತ್ತಿಹದು ಜೀವರಿಗೆ ||
ಒಲ್ಲೆನೆಂದರೆ ಬಿಡದು ಹರಿ ನಿ -
ರ್ಮಾಲ್ಯ ನೈವೇದ್ಯವನೆ ಭುಂಜಿಸಿ
ಬಲ್ಲವರ ಕೊಂಡಾಡು ಭವ ದುಃಖಗಳ ನೀಡಾಡು || ೨೮ ||

ಕುಟ್ಟಿ ಕೊಯ್ದಡನಟ್ಟು ಇಟ್ಟಡ
ಸುಟ್ಟು ಕೊಟ್ಟು ಮುಟ್ಟಲಘು ಹಿಂ -
ಟ್ಟಿಟ್ಟು ಮಾಳ್ಪದು ವಿಠ್ಠಲುಂಡುಚ್ಛಿಷ್ಟ ಸಜ್ಜನರ ||

ಬಿಟ್ಟು ತನ್ನಯ ಹೊಟ್ಟೆ ಗೋಸುಗ
ಘಟ್ಟಿನುಣುತಿಹ ಕೆಟ್ಟ ಮನುಜರ
ಕಟ್ಟಿ ಒಯ್ದೀಮ ಪಟ್ಟಣ ದೊಳೊತ್ತಟ್ಟಲಿಡುತಿಹರು || ೨೯ ||

ಜಾಗು ಮಾಡದೆ ಭೋಗದಾಸೆಯ -
ನೀಗಿ ಪರಮನುರಾಗದಲಿ ವರ -
ಭೋಗಿ ಶಯನನ ಆಗರದ ಹೆಬ್ಬಾಗಿಲಲಿ ನಿಂದು ||
ಕೂಗುತಲಿ ಶಿರ ಬಾಗಿ ಕರುಣಾ
ಸಾಗರನೆ ಭವರೋಗ ಭೇಷಜ
ಕೈಗೊಂಡೆಂದೆನೆ ಬೇಗ ಲೊದಗುವ ಭಾಗವತರರಸ || ೩೦ ||

ಏನು ಕರುಣವೋ ತನ್ನವರಲಿ ದ
ಯಾನಿಧಿಗೆ ಸದ್ಭಕ್ತ ಜನರತಿ
ಹೀನ ಕರ್ಮ ಮಾಡಿದರು ಸರಿ ಸ್ವೀಕರಿಸಿ ಪೊರೆವಾ ||
ಪ್ರಾಣಹಿಂಸಕ ಲುಬ್ಧಕಗೆ ಸು
ಜ್ಞಾನ ಪಾಲಿಸಿ ತನ್ನ ಮಹಿಮೆ ಪು
ರಾಣ ರೂಪದಿ ಪೇಳಿಸಿದ ರಘುಸೂನು ಸುಚರಿತ್ರ || ೩೧ ||

ಮೂಢಮಾನವನೆಲ್ಲಕಾಲದಿ
ಬೇಡಿ ಕೊಂಬನಿತೆಂದು ದೈನ್ಯದಿ
ಬೇಡದಂದದಿ ಮಾಡು ಪುರುಷಾರ್ಥ ಸ್ವಪ್ನದಲಿ ||
ನೀಡವಡೆ ನಿನ್ನಮಲಗುಣ ಕೊಂ
ಡಾಡಿ ಹಿಗ್ಗುವ ಭಾಗವತರೊಡ
ನಾಡಿಸೆನ್ನನು ಜನ್ಮ ಜನ್ಮಗಳಲ್ಲಿ ಮರೆಯದಲೆ || ೩೨ ||

ಚತುರ ವಿಧ ಪುರುಷಾರ್ಥರೂಪನು
ಚತುರ ಮೂರ್ತ್ಯಾತ್ಮಕನಿರಲು ಮ
ತ್ತಿತರ ಪುರುಷಾರ್ಥಗಳ ಬಯಸುವರೇನು ಬಲ್ಲವರು ||
ಮತಿ ವಿಹೀನರು ಐಹಿಕ ಸುಖ ಶಾ
ಶ್ವತ ವಿದೆಂದರಿದನುದಿನದಿ ಗಣ
ಪತಿಯೆ ಮೊದಲಾದನ್ಯ ದೇವತೆಗಳನೆ ಭಜಿಸುವರು || ೩೩ ||

ದ್ರುಹಿಣ ಮೊದಲಾದಮರಗಣ ಸ -
ನ್ಮಹಿತ ಸರ್ವ ಪ್ರಾಣಿಗಳ ಹೃ -
ದ್ಗುಹನಿವಾಸಿ ಗಭೀರ ಹರಿ ಸರ್ವಾರ್ಥ ದಾಯಕನು ||
ಅಹಿಕ ಪಾರತ್ರದಲಿ ವಿಹಿತಾ -
ವಿಹಿತ ಕರ್ಮಗಳರಿತು ಫಲ ಸ -
ನ್ನಿಹಿತನಾದ್ವೆಲ್ಲರಿಗೆ ಕೊಡುತ್ತಿಪ್ಪ ಸರ್ವಜ್ಞ || ೩೪ ||

ಒಮ್ಮೆಗಾದರೂ ಜೀವರೊಳು ವೈ -
ಷಮ್ಯ ದ್ವೇಷಾಸೂಯವಿಲ್ಲ ಸು -
ಧರ್ಮನಾಮಕ ಸಂತಯಿಸುವನ ಸರ್ವರನು ನಿತ್ಯ ||
ಬ್ರಹ್ಮ ಕಲ್ಪಾಂತದಲಿ ವೇದಾ -
ಗಮ್ಯ ಶ್ರೀ ಜಗನಾಥ ವಿಠಲ
ಸುಮ್ಮನೀವನು ತ್ರಿವಿಧರಿಗೆ ಅವರವರ ನಿಜಗತಿಯ || ೩೫ ||

## ೨೩ ಕಲ್ಪಸಾಧನ ಸಂಧಿ
## (ಅಪರೋಕ್ಷತಾರತಮ್ಯಸಂಧಿ)

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಏಕವಿಂಶತಿಮತ ಪ್ರವರ್ತಕ
ಕಾಕು ಮಾಯ್ಗಳ ಕುಹಕಯುಕ್ತಿ ನಿ -
ರಾಕರಿಸಿ ಸರ್ವೋತ್ತಮನು ಹರಿಯಂದು ಸ್ಥಾಪಿಸಿದ ||
ಶ್ರೀ ಕಳತ್ರನ ಸದನ ದ್ವಿಜಪ ಪಿ -
ನಾಕಿಸನ್ನುತ ಮಹಿಮ ಪರಮ ಕೃ -
ಪಾಕಟಾಕ್ಷದಿ ನೋಡು ಮಧ್ವಾಚಾರ್ಯ ಗುರುವರ್ಯ || ೧ ||

ವೇಧ ಮೊದಲಾಗಿಪ್ಪಮಲ ಮೋ -
ಕ್ಷಾಧಿಕಾರಿಗಳಾದ ಜೀವರ
ಸಾಧನಗಳಪರೋಕ್ಷನಂತರ ಲಿಂಗಭಂಗವನು ||

ಸಾಧುಗಳು ಚಿತ್ತೈಪುದೆನ್ನಪ -
ರಾಧಗಳ ನೋಡದಲೆ ಚಕ್ರ ಗ
ದಾಧರನು ಪೇಳಿಸಿದ ತೆರನಂದದಲಿ ಪೇಳುವೆನು || ೨ ||

ತೃಣ ಕ್ರಿಮಿ ದ್ವಿಜ ಪಶು ನರೋತ್ತಮ
ಜನಪ ನರಗಂಧರ್ವ ಗಣರಿವ -
ರೆನಿಪರಂಶವಿಹೀನ ಕರ್ಮ ಸುಯೋಗಿಗಳು ಎಂದು ||
ತನುಪ್ರತೀಕದಿ ಬಿಂಬನ ಉಪಾ -
ಸನವ ಗೈಯುತ ಇಂದ್ರಿಯಜ ಕ -
ರ್ಮನವರತ ಹರಿಗರ್ಪಿಸುತ ನಿರ್ಮಮರು ಎನಿಸುವರು || ೩ ||

ಏಳುವಿಧ ಜೀವಗಣ ಬಹಳ ಸು -
ರಾಳಿ ಸಂಖ್ಯಾನೇಮವುಳ್ಳದು
ತಾಳಿ ನರದೇಹವನು ಬ್ರಾಹ್ಮಣಕುಲದಲುದ್ಭವಿಸಿ ||
ಸ್ಥೂಲಕರ್ಮವ ತೊರೆದು ಗುರುಗಳು
ಪೇಳಿದರ್ಥವ ತಿಳಿದು ತತ್ತ -
ತ್ಕಾಲಧರ್ಮ ಸಮರ್ಪಿಸುತಿಹರು ಕರ್ಮಯೋಗಿಗಳು || ೪ ||

ಹೀನ ಕರ್ಮಗಳಿಂದ ಬಹು ವಿಧ
ಯೋನಿಯಲಿ ಸಂಚರಿಸಿ ಪ್ರಾಂತಕೆ
ಮಾನುಷತ್ವವನೈದಿ ಸರ್ವೋತ್ತಮನು ಹರಿ ಎಂಬ ||
ಜ್ಞಾನ ಭಕ್ತಿಗಳಿಂದ ವೇದೋ -
ಕ್ತಾನುಸಾರ ಸಹಸ್ರ ಜನುಮಾ -
ನ್ಯೂನ ಕರ್ಮವ ಮಾಡಿ ಹರಿಗರ್ಪಿಸಿದ ನಂತರದಿ || ೫ ||

ಹತ್ತು ಜನ್ಮಗಳಲ್ಲಿ ಹರಿ ಸ -
ರ್ವೋತ್ತಮ ಸುರಾಸುರಗಣಾರ್ಚಿತ
ಚಿತ್ರಕರ್ಮ ವಿಶೋಕ ನಂತಾನಂತರೂಪಾತ್ಮಾ ||
ಸತ್ಯ ಸತ್ಸಂಕಲ್ಪ ಜಗದು -
ತ್ಪತ್ತಿ ಸ್ಥಿತಿ ಲಯ ಕಾರಣ ಜರಾ
ಮೃತ್ಯು ವರ್ಜಿತನೆಂದುಪಾಸನೆ ಗೈದ ತರುವಾಯ || ೬ ||

ಮೂರು ಜನ್ಮಗಳಲ್ಲಿ ದೇಹಾ
ಗಾರ ಪಶು ಧನ ಪತ್ನಿ ಮಿತ್ರ ಕು -
ಮಾರ ಮಾತಾ ಪಿತೃಗಳಲ್ಲಿಹ ಸ್ನೇಹಕಿಂತಧಿಕ ||
ಮಾರಮಣನಲ್ಲಿ ಬಿಡದೆ ಮಾಡುವ
ಸೂರಿಗಳು ಈಉಕ್ತ ಜನ್ಮವ
ಮೀರಿ ಪರಮಾತ್ಮನ ಸ್ವದೇಹವ ನೋಡಿ ಸುಖಿಸುವರು || ೭ ||

ದೇವಗಾಯಕಜಾನು ಚಿರಪಿತೃ
ದೇವರೆಲ್ಲರೂ ಜ್ಞಾನಯೋಗಿಗ -
ಳಾವಕಾಲಕು ಪುಷ್ಕರ ಶನ್ಯೈಶ್ಚರ ಉಷಾ ಸ್ವಾಹಾ ||
ದೇವಿ ಬುಧ ಸನಕಾದಿಗಳು ಮೇ
ಘಾವಳಿಪ ಪರ್ಜನ್ಯಸಾಂಶರು
ಈ ಉಭಯಗಣದೊಳಗಿವರು ವಿಜ್ಞಾನಯೋಗಿಗಳು || ೮ ||

ಭರತಖಂಡದಿ ನೂರು ಜನ್ಮವ
ಧರಿಸಿ ನಿಷ್ಕಾಮುಕ ಸುಕರ್ಮಾ -
ಚರಿಸಿದಾನಂತರದಿ ದಶಸಾಹಸ್ರ ಜನ್ಮದಲಿ ||
ಉರುತರ ಜ್ಞಾನವನು ಪಡೆ -
ದೆರಡೊಂದ ಶತದೇಹದಲಿ ಭಕುತಿಯ
ನಿರವಧಿಕನಲಿ ಮಾಡಿ ಕಾಂಬರು ಬಿಂಬರೂಪವನು || ೯ ||

ಸಾಧನಾ ತ್ಪೂರ್ವದಲಿ ಇವರಿಗ -
ನಾದಿಕಾಲಪರೋಕ್ಷವಿಲ್ಲ ನಿ -
ಷೇಧ ಕರ್ಮಗಳಿಲ್ಲ ನರಕಪ್ರಾಪ್ತಿ ಮೊದಲಿಲ್ಲ ||
ವೇದ ಶಾಸ್ತ್ರಗಳಲ್ಲಿಯಿಪ್ಪ ವಿ -
ರೋಧ ವಾಕ್ಯವ ಪರಿಹರಿಸಿ ಮಧು
ಸೂದನನೆ ಸರ್ವೋತ್ತಮನೆಂದು ಸ್ಮರಿಸುವರು || ೧೦ ||

ಸತ್ಯ ಲೋಕಾಧಿಪನ ಪಿಡಿದು ಶ -
ತಸ್ಥ ದೇವಗಣಾಂತ ಎಲ್ಲರು
ಭಕ್ತಿಯೋಗಿಗಳೆಂದು ಕರೆಸುವರಾವಕಾಲದಲಿ ||

ಭಕ್ತಿ ಯೋಗ್ಯರ ಮಧ್ಯದಲಿ ಸ -
ದ್ವ್ಯಕ್ತಿ ವಿಜ್ಞಾನಾದಿ ಗುಣದಿಂ -
ದುತ್ತಮೋತ್ತಮ ಬ್ರಹ್ಮ ವಾಯು ವಾಣಿ ವಾಗ್ದೇವೀ || ೧೧ ||

ಋಜುಗಣಕೆ ಭಕ್ತ್ಯಾದಿ ಗುಣ ಸಾ -
ಹಜವೆನಿಸುವದು ಕ್ರಮದಿ ವೃಧ್ಯಾ -
ಬ್ಜಜ ಪದವಿ ಪರಿಯಂತ ಬಿಂಬೋಪಾಸನವು ಅಧಿಕ ||
ವೃಜಿನ ವರ್ಜಿತರಿವರೊಳಗೆ ತ್ರಿಗು -
ಣಜ ವಿಕಾರಗಳಿಲ್ಲವೆಂದಿಗು -
ದ್ವಿಜ ಫಣಿಪ ಮೃಡ ಶಕ್ರ ಮೊದಲಾದವರೊಳಿರುತಿಹವು || ೧೨ ||

ಸಾದನಾತ್ಪೂರ್ವದಲಿ ಈ ಋಜು -
ಜ್ವಾದಿ ತಾತ್ವಿಕರೆನಿಪ ಸುರಗಣ -
ನಾದಿ ಸಾಮಾನ್ಯಾಪರೋಕ್ಷಿಗಳೆಂದು ಕರೆಸುವರು ||
ಸಾಧನೋತ್ತರ ಸ್ವಸ್ವಬಿಂಬಲು -
ಪಾದಿರಹಿತಾದಿತ್ಯನಂದದಿ
ಸಾದರದಿ ನೋಡುವರು ಅಧಿಕಾರನುಸಾರದಲಿ || ೧೩ ||

ಭಿನ್ನ ಭಕ್ತರು ಎನಿಸುತಿಪ್ಪರು ಸು -
ಪರ್ಣಶೇಷಾದ್ಯ ಮರರೆಲ್ಲಾ -
ಭಿನ್ನಭಕ್ತರು ನಾಲ್ವರೆನಿಪರು ಭಾರತೀ ಪ್ರಾಣ ||
ಸೊನ್ನೊಡಲ ವಾಗ್ದೇವಿಯರು ಪಣೆ -
ಗಣ್ಣ ಮೊದಲಾದವರೊಳಗೆ ತ -
ತ್ತನ್ನಿಯಾಮಕರಾಗಿ ವ್ಯಾಪಾರಗಳ ಮಾಡುವರು || ೧೪ ||

ಹೀನ ಸತ್ಕರ್ಮಗಳೆರಡು ಪವ -
ಮಾನದೇವನು ಮಾಳ್ಪನಿದಕನು -
ಮಾನವಿಲ್ಲೆಂದೆನುತ ದೃಢಭಕ್ತಿಯಲಿ ಭಜಿಪರ್ಗೆ ||
ಪ್ರಾಣಪತಿ ಸುಪ್ರೀತನಾಗಿ ಕು
ಯೋನಿಗಳ ಕೊಡನೆಲ್ಲ ಕರ್ಮಗ -
ಳಾನೆ ಮಾಡುವೆನೆಂಬ ಮನುಜರ ನರಕಕ್ಕೈದಿಸುವ || ೧೫ ||

ದೇವಋಷಿ ಪಿತೃ ನೃಪ ನರರೆನಿಸುವ
ಐವರೊಳು ನೆಲಸಿರ್ದು ಅವರ ಸ್ವ -
ಭಾವ ಕರ್ಮವ ಮಾಡಿ ಮಾಡಿಪನೊಂದು ರೂಪದಲಿ ||
ಭಾವಿ ಬ್ರಹ್ಮನು ಕೂರ್ಮರೂಪದಿ
ಈ ವಿರಿಂಚಾಂಡವನು ಬೆನ್ನಲಿ
ತಾವಹಿಸಿ ಲೋಕಗಳ ಪೊರೆವನು ದ್ವಿತಿಯ ರೂಪದಲಿ || ೧೬ ||

ಗುಪ್ತನಾಗಿದ್ದನಿಲದೇವ ದ್ವಿ -
ಸಪ್ತ ಲೋಕದ ಜೀವರೊಳಗೆ ತ್ರಿ -
ಸಪ್ತ ಸಾವಿರದಾರುನೂರು ಶ್ವಾಸಜಪಗಳನು ||
ಸುಪ್ತಿ ಸ್ವಪ್ನದಿ ಜಾಗ್ರತಿಗಳ -
ಲಾಪ್ತನಂದದಿ ಮಾಡಿ ಮಾಡಿಸಿ
ಕ್ಲುಪ್ತ ಭೋಗಗಳೀವ ಪ್ರಾಂತಕೆ ತೃತೀಯ ರೂಪದಲಿ || ೧೭ ||

ಶುದ್ಧಸತ್ವಾತ್ಮಕ ಶರೀರ ದೊ -
ಳಿದ್ದಕಾಲಕ್ಕೂ ಲಿಂಗದೇಹವು
ಬದ್ಧವಾಗದು ದಗ್ಧಪಟದೋಪಾದಿ ಇರುತಿಹದು ||
ಸಿದ್ಧ ಸಾಧನ ಸರ್ವರೊಳಗನ -
ವದ್ಯನೆನಿಸುವ ಗರುಡ ಶೇಷ ಕ -
ಪರ್ದಿ ಮೊದಲಾದಮರರೆಲ್ಲರು ದಾಸರೆನಿಸುವರು || ೧೮ ||

ಗಣದೊಳಗೆ ತಾನಿದ್ದು ಋಜುಪವೆಂ -
ದೆನಿಸಿಕೊಂಬನು ಕಲ್ಪಶತ ಸಾ -
ಧನವ ಗೈದಾನಂತರದಿ ತಾ ಕಲ್ಕಿಯೆನಿಸುವನು ||
ದ್ವಿನವಶೀತಿಯ ಪ್ರಾಂತಭಾಗದ -
ಲನಿಲ ಹನುಮದ್ಭೀಮ ರೂಪದಿ
ದನುಜರೆಲ್ಲರ ಸದೆದು ಮಧ್ವಾಚಾರ್ಯನೆನಿಸಿದರು || ೧೯ ||

ವಿಶ್ವ ವ್ಯಾಪಕ ಹರಿಗೆ ತಾ ಸಾ -
ದೃಶ್ಯ ರೂಪವ ಧರಿಸಿ ಬ್ರಹ್ಮ ಸ -
ರಸ್ವತೀ ಭಾರತಿಗಳಿಂದೊಡಗೂಡಿ ಪವಮಾನ ||

ಶಾಶ್ವತ ಸುಭಕ್ತಿಯಲಿ ಸುಜ್ಞಾ -
ನ ಸ್ವರೂಪನ ರೂಪಗುಣಗಳ -
ನಶ್ವರವು ಎಂದೆನುತ ಪೊಗಳುವ ಶೃತಿಗಳೊಳಗಿದ್ದು || ೨೦ ||

ಖೇಟ ಕುಕ್ಕುಟ ಜಲಟವೆಂಬ ತ್ರಿ
ಕೋಟಿ ರೂಪವಧರಿಸಿ ಸತತ ನಿ -
ಶಾಟರನು ಸಂಹರಿಸಿ ಸಲಹುವ ಸರ್ವಸಜ್ಜನರ ||
ಕೈಟಭಾರಿಯ ಪುರದ ರಕ್ಷಕ -
ವಾಟವೆನಿಸುವ ಗರುಡ ಶೇಷ ಲ -
ಲಾಟ ಲೋಚನ ಮುಖ್ಯಸುರರಿಗೆ ಆವಕಾಲದಲಿ || ೨೧ ||

ಈ ಖುಜಗಳೊಳಗೊಬ್ಬ ಸಾಧನ
ನೂರು ಕಲ್ಪದಿ ಮಾಡಿ ಕರೆಸುವ
ಚಾರುತರ ಮಂಗಳ ಸುನಾಮದಿ ಕಲ್ಪಕಲ್ಪದಲಿ ||
ಸೂರಿಗಳು ಸಂತುತಿಸಿ ವಂದಿಸೆ
ಘೋರ ದುರಿತಗಳಳಿದು ಪ್ರೋಷವು
ಮಾರಮಣ ಸಂಪ್ರೀತನಾಗುವ ಸರ್ವಕಾಲದಲಿ || ೨೨ ||

ಪಾಹಿ ಕಲ್ಕಿ ಸುತೇಜ ದಾಸನೆ
ಪಾಹಿ ಧರ್ಮಾಧರ್ಮಖಂಡನೆ
ಪಾಹಿ ವರ್ಚಸ್ವಿಯೆ ಖಪಣ ನಮೋ ಸಾದು ಮಹಿಪತಿಯೆ ||
ಪಾಹಿ ಸದ್ಧರ್ಮಜ್ಞ ಧರ್ಮಜ
ಪಾಹಿ ಸಂಪೂರ್ಣ ಶುಚಿ ವೈಕೃತ
ಪಾಹಿ ಅಂಜನ ಸರ್ಷಪನೆ ಖರ್ಪಟನೆ ಶ್ರದ್ಧಾಹ್ವ || ೨೩ ||

ಪಾಹಿ ಸಂಧ್ಯಾತ ವಿಜ್ಞಾನನೆ
ಪಾಹಿ ಮಹಸುಜ್ಞಾನ ಕೀರ್ತನ
ಪಾಹಿ ಸಂಕೀರ್ಣಾಖ್ಯ ಕತ್ಥನೆ ಪಾಹಿ ಬುದ್ಧಿ ಜಯ ||
ಪಾಹಿ ಮಹತ್ತರ ಸುವೀರ್ಯನೆ
ಪಾಹಿ ಮಾಂ ಮೇಧಾವಿ ಜಯಜಯ
ಪಾಹಿ ಮಾಂ ರಂತಿಮ್ನ ಮನು ಮಾಂ ಪಾಹಿ ಮಾಂ ಪಾಹಿ || ೨೪ ||

ಪಾಹಿ ಮೋದ ಪ್ರಮೋದ ಸಂತನೆ
ಪಾಹಿ ಆನಂದ ಸಂತುಷ್ಟನೆ
ಪಾಹಿ ಮಾಂ ಚಾರ್ವಾಂಗ ಚಾರು ಸುಭಾಹು ಚಾರುಪದ ||
ಪಾಹಿ ಪಾಹಿ ಸುಲೋಚನನೆ ಮಾಂ
ಪಾಹಿ ಸಾರಸ್ವತ ಸುವೀರನೆ
ಪಾಹಿ ಪ್ರಾಜ್ಞನೆ ಕಪಿಯ ಅ ಲಂಪಟ ಪಾಹಿ ಸರ್ವಜ್ಞ|| ೨೫ ||

ಪಾಹಿಮಾಂ ಸರ್ವಜನ್ಮಿತ್ರನೆ
ಪಾಹಿ ಪಾಪವಿನಾಶಕನೆ ಮಾಂ
ಪಾಹಿ ಧರ್ಮವಿನೇತ ಶಾರದ ಓಜ ಸುತಪಸ್ವಿ ||
ಪಾಹಿಮಾಂ ತೇಜಸ್ವಿ ನಮೋ ಮಾಂ
ಪಾಹಿ ದಾನ ಸುಶೀಲ ನಮೋ ಮಾಂ
ಪಾಹಿ ಯಜ್ಞಸುಕರ್ತ ಯಜ್ವೀ ಯಾಗವರ್ತಕನೆ || ೨೬ ||

ಪಾಹಿ ಪ್ರಾಣ ತ್ರಾಣ ಆಮರ್ಷಿ
ಪಾಹಿಮಾಂ ಉಪದೇಷ್ಟ ತಾರಕ
ಪಾಹಿ ಕಾಲಕ್ರೀಡನ ಸುಕರ್ತಾ ಸುಕಾಲಜ್ಞ ||
ಪಾಹಿ ಕಾಲಸು ಸೂಚಕನೆ ಮಾಂ
ಪಾಹಿ ಕಲಿ ಸಂಹರ್ತ ಕಲಿ ಮಾಂ
ಪಾಹಿ ಕಾಲ ಶಾಮರೇತ ಸದಾರತ ಸುಬಲನೆ || ೨೭ ||

ಪಾಹಿ ಪಾಹಿ ಸಹೋ ಸದಾ ಕಪಿ
ಪಾಹಿ ಗಮ್ಯ ಜ್ಞಾನ ದಶಕುಲ
ಪಾಹಿ ಮಾಂ ಶ್ರೋತ್ರವ್ಯ ನಮೋ ಸಂಕೀರ್ತವ್ಯ ನಮೋ ||
ಪಾಹಿಮಾಂ ಮಂತವ್ಯ ಕವ್ಯನೆ
ಪಾಹಿ ದ್ರಷ್ಟವ್ಯನೆ ಸುಸಖ್ಯನೆ
ಪಾಹಿಮಾಂ ಗಂತವ್ಯ ಕ್ರವ್ಯನೆ ಪಾಹಿಸ್ಮರ್ತವ್ಯ || ೨೮ ||

ಪಾಹಿ ಸೇವ್ಯ ಸುಭವ್ಯ ನಮೋ ಮಾಂ
ಪಾಹಿ ಸ್ವರ್ಗವ್ಯ ನಮೋ ಭಾವ್ಯನೆ
ಪಾಹಿ ಮಾಂ ಜ್ಞಾತವ್ಯ ನಮೋ ವಕ್ತವ್ಯ ಗವ್ಯ ನಮೋ ||

ಪಾಹಿಮಾಂ ಲಾತವ್ಯ ವಾಯುವೆ
ಪಾಹಿ ಬ್ರಹ್ಮ ಬ್ರಾಹ್ಮಣ ಪ್ರಿಯ
ಪಾಹಿ ಪಾಹಿ ಸರಸ್ವತೀಪತೆ ಜಗದ್ಗುರುವರ್ಯ || ೨೯ ||

ವಾಮನ ಪುರಾಣದಲಿ ಪೇಳಿದ
ಈ ಮಹಾತ್ಮರ ಪರಮಮಂಗಳ
ನಾಮಗಳ ಸಂಪ್ರೀತಿ ಪೂರ್ವಕ ನಿತ್ಯ ಸ್ಮರಿಸುವರ ||
ಶ್ರೀ ಮನೋರಮನವರು ಬೇಡಿದ
ಕಾಮಿತಾರ್ಥಗಳಿತ್ತು ತನ್ನ ತ್ರಿ
ಧಾಮದೊಳಗನುದಿನದಲಿಟ್ಟಾನಂದ ಪಡಿಸುವನು || ೩೦ ||

ಈ ಸಮೀರಗೆ ನೂರು ಜನ್ಮ ಮ -
ಹಾಸುಖ ಪ್ರಾರಬ್ಧ ಭೋಗ ಪ್ರ -
ಯಾಸವಿಲ್ಲದೆಲ್ಯೆದಿದನು ಲೋಕಾಧಿಪತ್ಯವನು ||
ಭೂಸುರನ ಒಪ್ಪಡಿಯುವಲಿಗೆ ವಿ -
ಶೇಷ ಸೌಖ್ಯವನಿತ್ತ ದಾತನ
ದಾಸ ವರ್ಯನು ಲೋಕಪತಿಯೆನಿಸುವದು ಅಚ್ಚರವೆ || ೩೧ ||

ದ್ವಿಶತ ಕಲ್ಪಗಳಲ್ಲಿ ಬಿಡದೀ
ಪೆಸರಿನಿಂದಲಿ ಕರೆಸಿದನು ತ
ನ್ನೊಳಗರಮರರೊಳಿಗಿಟ್ಟು ಮಾಡುವನವರ ಸಾಧನವ ||
ಅಸದುಪಾಸನೆ ಗೈವ ಕಲ್ಯಾ -
ದ್ಯಸುರವರ ಸಂಹರಿಸಿ ತಾ ಪೊಂ -
ಬಸುರ ಪದ ವೈದಿದನು ಗುರು ಪವಮಾನ ಸತಿಯೊಡನೆ || ೩೨ ||

ಅನಿಮಿಷರ ನಾಮದಲಿ ಕರೆಸುವ
ಅನಿಲದೇವನು ಒಂದ ಕಲ್ಪದಿ
ವನಜಸಂಭನೆನಿಸಿ ಎಂಭತ್ತೇಳುವರೆ ವರುಷ ||
ಗುಣತ್ರಯ ವಿವರ್ಜಿತನ ಮಂಗಳ
ಗುಣಕ್ರಿಯಗಳ ಸುರೂಪಗಳು ಪಾ -
ಸನವು ಅವ್ಯಕ್ತಾದಿ ಪೃಥಿವ್ಯಂತರದಿ ಇರುತಿಪದು || ೩೩ ||

ಮಹಿತ ಋಜುಗಣಕ್ಕೊಂದೆ ಪರಮೋ -
ತ್ಸಾಹ ವರ್ಜಿತವೆಂಬ ದೋಷವು
ವಿಹಿತವೇಸರಿ ಇದನು ಪೇಳದೆ ಮುಕ್ತ ಬ್ರಹ್ಮರಿಗೆ ||
ಬಹುದು ಸಾಮ್ಯ ಜ್ಞಾನ ಭಕ್ತಿಯು
ದ್ರುಹಿಣಪದ ಪರ್ಯಂತ ವೃದ್ಧಿಯು
ಬಹಿರುಪಾಸನೆಯುಂಟನಂತರ ಬಿಂಬದರ್ಶನವು || ೩೪ ||

ಜ್ಞಾನರಹಿತ ಭಯತ್ವಪೇಳ್ವ ಪು -
ರಾಣ ದೈತ್ಯರ ಮೋಹಕವು ಚತು
ರಾನನಗೆ ಕೂಡುವದೆ ಮೋಹಾಜ್ಞಾನ ಭಯ ಶೋಕ ||
ಭಾನು ಮಂಡಲ ಚಲಿಸಿದಂದದಿ
ಕಾಣುವದು ದೃಗ್ದೋಷದಿಂದಲಿ
ಶ್ರೀನಿವಾಸನ ಪ್ರೀತಿಗೋಸುಗ ತೋರ್ದನಲ್ಲದಲೆ || ೩೫ ||

ಕಮಲಸಂಭವ ಸರ್ವರೊಳಗು -
ತ್ತಮನೆನಿಸುವನು ಎಲ್ಲಕಾಲದಿ
ವಿಮಲ ಭಕುತಿ ಜ್ಞಾನ ವೈರಾಗ್ಯಾದಿ ಗುಣದಿಂದ ||
ಸಮಭ್ಯಧಿಕವಿವರ್ಜಿತನ ಗುಣ
ರಮೆಯ ಮುಖದಿಂದರಿತು ನಿತ್ಯದಿ
ದ್ಯುಮಣಿ ಕೋಟಿಗಳಂತೆ ಕಾಂಬನು ಬಿಂಬರೂಪವನು || ೩೬ ||

ಜ್ಞಾನ ಭಕ್ತ್ಯಾದಖಿಳ ಗುಣ ಚತು -
ರಾನನೊಳಗಿಪ್ಪಂತೆ ಮುಖ್ಯ -
ಮುಖ್ಯ ಪ್ರಾಣನಲಿ ಚಿಂತಿಪುದು ಯತ್ಕಿಂಚಿತ್ಕೊರತೆಯಾಗಿ ||
ನ್ಯೂನ ಋಜುಗಣ ಜೀವರಲಿ ಕ್ರ -
ಮೇಣ ವೃದ್ಧಿ ಜ್ಞಾನ ಭಕುತಿ ಸ -
ಮಾನ ಭಾರತಿ ವಾಣಿಗಳಲಿ ಪದ ಪ್ರಯುಕ್ತಾಧಿಕ || ೩೭ ||

ಸೌರಿ ಸೂರ್ಯನ ತೆರದಿ ಬ್ರಹ್ಮ ಸ -
ಮೀರ ಗಾಯತ್ರಿ ಗಿರಿಗಳೊಳು
ತೋರುವನು ಅಸ್ಪಷ್ಟರೂಪದಿ ಮುಕ್ತಿಪರಿಯಂತ ||

ವಾರಿಜಾಸನ ವಾಯು ವಾಣೀ
ಭಾರತಿಗಳಿಗೆ ಮಹಾಪ್ರಳಯದಿ
ಬಾರದಜ್ಞಾನಾದಿ ದೋಷವು ಹರಿಕೃಪಾಬಲದಿ || ೩೮ ||

ನೂರುವರ್ಷಾನಂತರದಿ ಸ -
ರೋರುಹಾಸನ ತನ್ನ ಕಲ್ಪದ -
ಲಾರು ಮುಕ್ತಿಯನೈದುವರೋ ಅವರವರ ಕರೆದೊಯ್ದು ||
ಶೌರಿ ಪುರದೊಳಗಿಪ್ಪ ನದಿಯಲಿ
ಕಾರುಣಿಕ ಸುಸ್ನಾನ ನಿಜಪರಿ
ವಾರಸಹಿತದಿ ಮಾಡಿ ಹರಿವುದರ ಪ್ರವೇಶಿಸುವ || ೩೯ ||

ವಾಸುದೇವನ ಉದರದಿ ಪ್ರ -
ವೇಶಗೈದಾನಂತರದಲಿ ನಿ -
ರ್ದೋಷ ಮುಕ್ತರು ಉದರದಿಂ ಪೊರಮಟ್ಟು ಹರುಷದಲಿ ||
ಈಶನಾಜ್ಞೆಯ ಪಡೆದ ಸಂ -
ತಾಸನ ಶ್ವೇತ ದ್ವೀಪ ಮೋಕ್ಷದಿ
ವಾಸವಾಗಿ ವಿಮುಕ್ತ ದುಃಖರು ಸಂಚರಿಸುತಿಹರು || ೪೦ ||

ಸತ್ವ ಸತ್ವ ಮಹಾಸೂಕ್ಷ್ಮವು
ಸತ್ವ ಸತ್ವಾತ್ಮಕ ಕಳೇವರ
ಸತ್ಯ ಲೋಕಾಧಿಪನೆನಿಪಗತ್ಯಲ್ಪವೆರಡುಗುಣ ||
ಮುಕ್ತಿ ಯೋಗ್ಯವಿದಲ್ಲ ಚಾಂಡೋ -
ತ್ಪತ್ತಿಕಾರಣವಲ್ಲ ಹರಿ ಪ್ರೀ -
ತ್ಯರ್ಥವಾಗಿ ಜಗದ್ವ್ಯಾಪಾರಗಳನು ಮಾಡುವನು || ೪೧ ||

ಪಾದನ್ಯೂನಶತಾಬ್ದ ಪರಿಯಂ -
ತೋದಿ ಉಗ್ರತಪಾಖ್ಯಯದಿ ಲವ -
ಣೋದಧಿಯೊಳಗೆ ಕಲ್ಪದಶ ತಪವಿದ್ದನಂತರದಿ ||
ಸಾಧಿಸಿದ ಮಹದೇವಪದವಾ -
ರೈದು ನವಕಲ್ಪಾವಸಾನಕೆ
ಐದುವನು ಶೇಷನ ಪದವ ಪಾರ್ವತಿ ಸಹಿತಾ || ೪೨ ||

ಇಂದ್ರ ಮನುದಶಕಲ್ಪಗಳಲಿ ಸು -
ನಂದನಾಮದಿ ಶ್ರವಣಗೈದು ಮು -
ಕುಂದನಪರೋಕ್ಷಾರ್ಥನಾಲ್ಕು ಸುಕಲ್ಪತಪವಿದ್ದು ||
ನೊಂದು ಪೂಗಯೊಳು ಕೋಟಿ ವರ್ಷ ಪು
ರಂದರನು ಅದನುಂಡನಂತರ
ಹೊಂದಿದನು ನಿಜಲೋಕ ಸುರಪತಿ ಕಾಮನಿದರಂತೆ || ೪೩ ||

ಕರಸುವರು ಪೂರ್ವದಲಿ ಚಂದ್ರಾ
ರ್ಕರತಿ ಶಾಂತ ಸ್ವರೂಪನಾಮದಿ
ಎರಡೆರಡು ಮನು ಕಲ್ಪ ಶ್ರವಣವಗೈದು ಮನುಕಲ್ಪ ||
ಪರತಪೋಬಲದಿಂದಲರ್ವಾಕ್
ಶಿರಗಳಾಗೀರೈದು ಸಾವಿರ
ವರುಷ ದುಃಖವ ನೀಗಿ ಕಾಂಬರು ಬಿಂಬರೂಪವನು || ೪೪ ||

ಸಾಧನಗಳ ಪರೋಕ್ಷನಂತರ -
ವೈದುವರು ಮೋಕ್ಷವನು ಶಿವ ಶ -
ಕ್ರಾದಿ ದಿವಿಜರು ಉತ್ಕ್ರಮದಿಂ ಕಲ್ಪಸಂಖ್ಯೆಯಲಿ ||
ಐದಲೆಯುಗೈವತ್ತು ಉಪೇಂದ್ರ ಸ
ಹೋದರನಿಪ್ಪತ್ತು ದ್ವಿನವ ತ್ವ -
ಗಾಧಿಪತಿ ಪ್ರಾಣನಿಗೆ ಗುರು ಮನುಗಳಿಗೆ ಷೋಡಶವು || ೪೫ ||

ಪ್ರವಹ ಮರುತಗೆ ಹನ್ನೆರಡು ಸ್ಯಂ -
ಧವ ದಿವಾಕರ ಧರ್ಮರಿಗೆ ದಶ
ನವ ಸುಕಲ್ಪವು ಮಿತ್ರರಿಗೆ ಶೇಷಶತಜನಕೆಂಟು ||
ಕವಿಸನಕ ಸನಂದನ ಸನ
ತ್ಕುವರ ಮುನಿಗಳಿಗೇಳು ವರುಣನ
ಯುವತಿ ಪರ್ಜನ್ಯಾದಿ ಪುಷ್ಕರಗಾರು ಕಲ್ಪದಲಿ || ೪೬ ||

ಐದು ಕರ್ಮಜ ಸುರರಿಗಾಜಾ -
ನಾದಿಗಳಿಗೀರೆರಡು ಕಲ್ಪಾ
ರ್ಧಾಧಿಕತ್ರಯ ಗೋಪಿಕಾ ಸ್ತ್ರೀಯರಿಗೆ ಪಿತೃತ್ರಯವು ||

ಈ ದಿವೌಕಸ ಮನುಜಗಾಯಕ -
ರೈದುವರು ಎರಡೊಂದು ಕಲ್ಪನ -
ರಾಧಿಪರಿಗರೆ ಕಲ್ಪದೊಳಗ ಪರೋಕ್ಷ ವಿರುತಿಹುದು || ೪೭ ||

ದೀಪಗಳನನುಸರಿಸಿ ದೀಪ್ತಿಯು
ವ್ಯಾಪಿಸಿ ಮಹಾ ತಿಮಿರ ಕಳೆದು ಪ -
ರೋಪಕಾರವ ಮಾಳ್ಪತೆರದಂದದಲಿ ಪರಮಾತ್ಮ ||
ಆ ಪಯೋಜಾಸನರೊಳಿದ್ದು ಸ್ವ -
ರೂಪ ಶಕ್ತಿಯ ವ್ಯಕ್ತಿ ಗೈಸತ -
ತಾ ಪೊಳೆವನವರಂತೆ ಚೇಷ್ಟೆಯ ಮಾಡಿ ಮಾಡಿಸುತ || ೪೮ ||

ಸ್ವೋದರ ಸ್ಥಿತ ಪ್ರಾಣರುದ್ರೇಂ -
ದ್ರಾದಿ ಸುರರಿಗೆ ದೇಹಗಳ ಕೊ
ಟ್ಟಾದರದಲವರವರ ಸೇವೆಯ ಕೊಂಬನನವರತ ||
ಮೋದ ಬೋಧ ದಯಾಬ್ಧಿತನ್ನವ
ರಾಧಿರೋಗವ ಕಳೆದು ಮಹದಪ -
ರಾಧಗಳ ನೋಡದಲೆ ಸಲಹುವ ಸತತ ಸ್ಮರಿಸುವರ || ೪೯ ||

ಪ್ರತಿ ಪ್ರತೀ ಕಲ್ಪದಲಿ ಸೃಷ್ಟಿ
ಸ್ಥಿತಿಲಯ ಮಾಡುತಲಿ ಮೋದಿಪ
ಚತುರಮುಖ ಪವಮಾನರನ್ನವ ಮಾಡಿ ಭುಂಜಿಸುವ ||
ಘೃತವೆ ಮೃತ್ಯುಂಜಯನೆನಿಸಿ ದೇ -
ವತೆಗಳೆಂಬುಪಸೇಚನರು ಶ್ರೀ -
ಪತಿಗೆ ಮೂಜಗವೆಲ್ಲ ವೋದನತಿಥಿಯೆನಿಸಿಕೊಂಬ || ೫೦ ||

ಗರ್ಭಿಣಿಸ್ತ್ರೀ ಉಂಡ ಭೋಜನ
ಗರ್ಭಗತ ಶಿಶು ಉಂಬತೆರದಲಿ
ನಿರ್ಭಯನು ತಾನುಂಡು ಉಣಿಸುವನು ಸರ್ವಜೀವರಿಗೆ ||
ನಿರ್ಬಲತಿಪರಮಾಣು ಜೀವರಿ
ಗಬ್ಬುಪದೆ ಸ್ಥೂಲಾನ್ನ ಭೋಜನ
ಅರ್ಭಕರು ಪೇಳುವರು ಕೋವಿದರಿದನೊಡಂಬಡರು || ೫೧ ||

ಅಪಚಯಗಳಿಲ್ಲುಂಡುದುದರಿಂ -
ದುಪಚಯಗಳಿಲ್ಲಮರಗಣದೊಳು
ಗುಪಮರೆನಿಸುವರಿಲ್ಲ ಜನುಮಾದಿಗಳು ಮೊದಲಿಲ್ಲ ||
ಅಪರಿಮಿತ ಸನ್ಮಹಿಮ ನರಹರಿ
ಅಪುನರಾವರ್ತರನ ಮಾಡುವ
ಕೃಪಣ ವತ್ಸಲ ಸ್ವಪದಸೌಖ್ಯವನಿತ್ತು ಶರಣರಿಗೆ || ೫೨ ||

ಬಿತ್ತಿ ಬೀಜವ ಭೂಮಿಯೊಳು ನೀ -
ರೇತ್ತಿ ಬೆಳಿಸಿದ ಬೆಳೆಸು ಪ್ರಾಂತಕೆ
ಕಿತ್ತಿ ಮೆಲುವಂದದಲಿ ಲಕ್ಷ್ಮೀರಮಣ ಲೋಕಗಳ ||
ಮತ್ತೆ ಜೀವರ ಕರ್ಮ ಕಾಲೋ -
ತ್ಪತ್ತಿ ಸ್ಥಿತಿಲಯ ಮಾಡುತಲಿ ಸಮ
ವರ್ತಿ ಎನಿಸುವ ಖೇದ ಮೋದಗಳಿಲ್ಲದನವರತ || ೫೩ ||

ಶ್ವಸನರುದ್ರೇಂದ್ರಮುಖ ಸುಮ -
ನಸರೊಳಿದ್ದರು ಕ್ಷುತ್ಪಿಪಾಸಗ
ಳೊಶದಲಿಪ್ಪರವು ಸಕಲ ಭೋಗಕೆ ಸಾಧನಗಳಾಗಿ ||
ಅಸುರ ಪ್ರೇತ ಪಿಶಾಚಗಳ ಬಾ -
ಧಿಸುತಲಿಪ್ಪವು ದಿನದಿನದಿ ಮಾ -
ನಿಸರೊಳಗೆ ಮೃಗಪಕ್ಷಿ ಜೀವರೊಳಿದ್ದು ಪೋಗುವವು || ೫೪ ||

ವಾಸುದೇವನು ಸ್ವಪ್ನ ಸುಪ್ತಿ ಪಿ -
ಪಾಸ ಕ್ಷುದ್ಭಯ ಶೋಕ ಮೋಹಾ -
ಯಾಸ ವಿಸ್ಮೃತಿ ಮಾತ್ಸರ್ಯ ಮದ ಪುಣ್ಯ ಪಾಪಾದಿ ||
ದೋಷವರ್ಜಿತನೆಂದು ಬ್ರಹ್ಮ ಸ -
ದಾಶಿವಾದಿ ಸಮಸ್ತದಿವಿಜರು -
ಪಾಸನೆಯಗೈದೆಲ್ಲಕಾಲದಿ ಮುಕ್ತರಾಗಿಹರು || ೫೫ ||

ಪರಮಸೂಕ್ಷ್ಮ ಕ್ಷಣ ವೈದು ತೃಟಿ
ಕರೆಸುವದು ಐವತ್ತು ತೃಟಿಲವ -
ವೆರಡು ಲವವು ನಿಮಿಷ ನಿಮಿಷಗಳೆಂಟು ಮಾತ್ರಯುಗ ||

ಗುರು ದಶ ಪ್ರಾಣಾರು ಪಳ ಹ -
ನ್ನೆರಡು ಬಾಣಾವು ಘಟಿಕ ತ್ರಿಂಶತಿ
ಇರುಳು ಹಗಲುರವತ್ತು ಘಟಿಕಗಳಹೋರಾತ್ರಿಗಳು || ೫೬ ||

ಈ ದಿನಾರಾತ್ರಿಗಳೆರಡು ಹದಿ
ನೈದು ಪಕ್ಷಗಳೆರಡು ಮಾಸಗ -
ಳಾದುಪವು ಮಾಸದ್ವಯವೆ ಋತು ಋತುತ್ರಯಗಳಯನ ||
ಐದುವವು ಅಯನ ದ್ವಯಾಬ್ದ ಕೃ -
ತಾದಿಯುಗಗಳು ದೇವಮಾನದಿ
ದ್ವಾದಶ ಸಹಸ್ರ ವರ್ಷ ಗಳಹವದನ ಪೇಳುವೆನು || ೫೭ ||

ಚತುಸ್ಸಾವಿರದೆಂಟುನೂರವು
ಕೃತಯುಗಕೆ ತ್ರಿಸಹಸ್ರ ಸಲೆಷಟ್
ಶತವು ತ್ರೈತೆಗೆ ದ್ವಾಪರಕೆ ದ್ವಿಸಹಸ್ರನಾನೂರು ||
ದಿತಿಜ ಪತಿ ಕಲಿಯುಗಕೆ ಸಾವಿರ
ಶತಗಳದ್ವಯ ಕೂಡಿ ಈ ದೇ -
ವತೆಗಳಿಗೆ ಹನ್ನೆರಡು ಸಾವಿರವಹವು ವರುಷಗಳು || ೫೮ ||

ಪ್ರಥಮ ಯುಗಕೇಳಧಿಕವರೆ ವಿಂ -
ಶತಿ ಲಕ್ಷಾಷ್ಟೋತ್ತರ ಮೇಲೆ ವಿಂ -
ಶತಿ ಸಹಸ್ರ ಮನುಷ್ಯ ಮಾನಾಬ್ಧಿಗಳು ಷಣ್ಣವತೀ ||
ಮಿತ ಸಹಸ್ರದ ಲಕ್ಷ ದ್ವಾದಶ
ದ್ವಿತಿಯ ತ್ರೇತಿಯಕೆ ಎಂಟು ಲಕ್ಷದ
ಚತುರ ಷಷ್ಠಿ ಸಹಸ್ರ ಕಲಿಗಿದರರ್ಧ ಚಿಂತಿಪುದು || ೫೯ ||

ಮೂರಧಿಕ ನಾಲ್ವತ್ತು ಲಕ್ಷದ
ಆರು ಮೂರೆರಡಧಿಕ ಸಾವಿರ
ಈರೆರಡು ಯುಗ ವರ್ಷ ಸಂಖ್ಯೆಯುಗ್ಮೆಯಲೆನಿತಿಹದೋ ||
ಸೂರಿ ಪೆಚ್ಚಿಸೆ ಸಾವಿರದಿ ಸ -
ನೂರು ಮೂವತ್ತೆರಡು ಕೋಟಿ ಸ -
ರೋರುಹಾಸನಗಿದು ಹಗಲು ಎಂಬರು ವಿಪಶ್ಚಿತರು || ೬೦ ||

ಶತಧೃತಿಗೆ ಈ ದಿವಸಗಳು ತ್ರಿಂ -
ಶತಿಯು ಮಾಸದ್ವಾದಶಾಬ್ದವು
ಶತವೆರಡರೊಳು ಸರ್ವಜೀವೋತ್ಪತ್ತಿ ಸ್ಥಿತಿ ಲಯವೂ ||
ಶೃತಿಸ್ಮೃತಿಗಳು ಪೇಳುತಿಹವ -
ಚ್ಯುತಗೆ ನಿಮಿಷವಿದೆಂದು ಸುಖಶಾ -
ಶ್ವತಗೆ ಪಾಸಟಿಎಂಬುವರೆ ಬ್ರಹ್ಮಾದಿ ದಿವಿಜರನು || ೬೧ ||

ಆದಿ ಮಧ್ಯಾಂತಗಳು ಇಲ್ಲದ
ಮಾಧವಗಿದುಪಚಾರವೆಂದು ಋ -
ಗಾದಿ ವೇದ ಪುರಾಣಗಳು ಪೇಳುವವು ನಿತ್ಯದಲಿ ||
ಮೋದಮಯನಾನುಗ್ರಹವು ಸಂ -
ಪಾದಿಸಿ ರಮಾ ಬ್ರಹ್ಮ ರುದ್ರೇಂ
ದ್ರಾದಿಗಳು ತಮ್ಮ ತಮ್ಮಪದವಿಯ ನೈದಿ ಸುಖಿಸುವರು || ೬೨ ||

ಈ ಕಥಾಮೃತಪಾನ ಸುಖ ಸುವಿ -
ವೇಕಿಗಳಿಗಲ್ಲದಲೆ ವೈಷಿಕ
ವ್ಯಾಕುಲ ಕುಚಿತ್ತರಿಗೆ ದೊರೆಯುವದೆ ಆವಕಾಲದಲಿ ||
ಲೋಕವಾರ್ತೆಯ ಬಿಟ್ಟು ಇದನವ -
ಲೋಕಿಸುತ ಮೋದಿಪರಿಗೊಲಿದು ಕೃ
ಪಾಕರ ಜಗನ್ನಾಥವಿಠ್ಠಲ ಪೊರೆವನನುದಿನದಿ || ೬೩ ||

## ೨೪ ಬಿಂಬ ಪ್ರತಿಬಿಂಬ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಮುಕ್ತಬಿಂಬನು ತುರ್ಯ ಜೀವ -
ನ್ಮುಕ್ತಬಿಂಬನು ವಿಶ್ವ ಶೃತಿ ಸಂ
ಸಕ್ತಬಿಂಬನು ತೈಜಸನು ಅಸ್ಪೃಶ್ಯರಿಗೆ ಪ್ರಾಜ್ಞ||

ಶಕ್ತನಾದರೂ ಸರಿಯೆ ಸರ್ವೋ -
ದ್ರಿಕ್ತ ಮಹಿಮನು ದುಃಖ ಸುಖಗಳ
ವ್ಯಕ್ತಿ ಮಾಡುತಲಿಪ್ಪ ಕಲ್ಪಾಂತದಲಿ ಬಪ್ಪರಿಗೆ || ೧ ||

ಅನ್ನನಾಮಕ ಪ್ರಕೃತಿಯೊಳಗಾ
ಚ್ಛನ್ನನಾಗಿಹ ಪ್ರಾಜ್ಞನಾಮದಿ
ಸೊನ್ನೊಡಲ ಮೊದಲಾದವರೊಳನ್ನಾದ ತೈಜಸನು ||
ಅನ್ನದಾಂಬುಜನಾಭ ವಿಶ್ವನು
ಭಿನ್ನ ನಾಮ ಕ್ರಿಯಗಳಿಂದಲಿ
ತನ್ನೊಳಗೆ ತಾರಮಿಪ ಪೂರ್ಣಾನಂದ ಜ್ಞಾನಘನ || ೨ ||

ಬೂದಿಯೊಳಗಡಗಿಪ್ಪನಲನೋ -
ಪಾದಿ ಚೇತನ ಪ್ರಕೃತಿಯೊಳಗ -
ನ್ನಾದನನ್ನಾಹ್ವಯದಿ ಕರೆಸುವ ಬ್ರಹ್ಮಶಿವರೂಪಿ ||
ಓದನಪ್ರದ ವಿಷ್ಣು ಪರಮಾ -
ಹ್ಲಾದವೀವುತ ತೃಪ್ತಿಬಡಿಸುವಾ -
ಗಾಧ ಮಹಿಮನ ಚಿತ್ರಕರ್ಮವನಾವ ಬಣ್ಣಿಸುವಾ || ೩ ||

ನಾದ ಭೋಜನ ಶಬ್ದದೊಳು ಬಿಂ -
ದೋದನೋದಕದೊಳಗೆ ಪ್ರೋಷನು
ವಾದದೊಳು ಶಾಂತಾಖ್ಯ ಜಠರಾಗ್ನಿಯಲಿ ಇರುತಿಪ್ಪ ||
ವೈದಿಕಸುಶಬ್ದದೊಳು ಪುತ್ರ ಸ -
ಹೋದರಾನುಗರೊಳತಿಶಾಂತನ
ಪಾದಕಮಲವನನವರತ-ಚಿಂತಿಸು ಈ ಪರಿಯಲೀವ || ೪ ||

ವೇದಮಾನಿ ರಮಾನುಪಾಸ್ಯ ಗು -
ಣೋದಧಿ ಗುಣತ್ರಯವವಿವರ್ಜಿತ
ಸ್ವೋದರಸ್ಥಿತ ನಿಖಿಳ ಬ್ರಹ್ಮಾಂಡಾದ್ವಿಲಕ್ಷಣನು ||
ಸಾಧುಸಮ್ಮತವೆನಿಸುತಿಪನಿಷ -
ತೀದ ಗಣಪತಿ ಎಂಬ ಶ್ರುತಿ ಪ್ರತಿ -
ಪಾದಿಸುವವನನವರತಪನಗುಣ ಪ್ರಾಂತಗಾಣದಲೆ || ೫ ||

ಕರೆಸುವನು ಮಾಯಾರಮಣ ತಾ -
ಪುರುಷರೂಪದಿ ತ್ರಿಸ್ಥಳಗಳೊಳು
ಪರಮ ಸತ್ಪುರುಷಾರ್ಥದ ಮಹತ್ತತ್ವದೊಳಗಿದ್ದು ||
ಸರಸಿಜಭವಾಂಡಸ್ಥಿತ ಸ್ತ್ರೀ
ಪುರುಷ ತನ್ಮಾತ್ರಗಳ ಏಕೋ -
ತ್ತರ ದಶೇಂದ್ರಿಯಗಳ ಮಹಾಭೂತಗಳ ನಿರ್ಮಿಸಿದ || ೬ ||

ಈ ಶರೀರಗ ಪುರುಷ ತ್ರಿ ಗುಣದಿ
ಶ್ರೀ ಸಹಿತ ತಾನಿದ್ದು ಜೀವರಿ -
ಗಾಶ ಲೋಭಾಜ್ಞಾನಮದ ಮತ್ಸರ ಕುಮೋಹ ಕ್ಷುಧಾ ||
ಹಾಸ ಹರುಷ ಸುಷುಪ್ತಿ ಸ್ವಪ್ನ ಪಿ -
ಪಾಸ ಜಾಗ್ರತಿ ಜನ್ಮ ಸ್ಥಿತಿ ಮೃತಿ
ದೋಷ ತೃಷ್ಣಾ ಜಯಾಪಜಯ ದ್ವಂದ್ವಗಳ ಕಲ್ಪಿಸಿದ || ೭ ||

ತ್ರಿವಿಧಗುಣಮಯ ದೇಹ ಜೀವಕೆ
ಕವಚದಂದದಿ ತೊಡಿಸಿ ಕರ್ಮ
ಪ್ರವಹದೊಳು ಸಂಚಾರ ಮಾಡಿಸುತಿಪ್ಪ ಜೀವರನು ||
ಕವಿಸಿ ಮಾಯಾರಮಣ ಮೋಹವ
ಭವಕೆ ಕಾರಣನಾಗುವನು
ಶ್ರವಣ ಮನನವ ಮಾಳ್ಪರಿಗೆ ಮೋಚಕನೆನಿಸುತಿಪ್ಪ || ೮ ||

ನಾಶನಾತ್ಮಯ ಸ್ತ್ರೀ ಪುರುಷರೊಳು
ವಾಸವಾಗಿಹನೆಂದರಿದು ವಿ -
ಶ್ವಾಸ ಪೂರ್ವಕ ಭಜಿಸಿ ತೋಷಿಸು ಸ್ವಾವರೋತ್ತಮರ ||
ಕ್ಲೇಶನಾಶನನಚಲಗಳೊಳು ಪ್ರ -
ಪ್ರಕಾಶಿಸುತಲಿಹನಶನ ರೂಪೊ -
ಪಾಸನವ ಮಾಳ್ಪರಿಗೆ ತೋರ್ಪನು ತನ್ನ ನಿಜರೂಪ || ೯ ||

ಪ್ರಕಾರಾಂತರ ಚಿಂತಿಸುವದೀ
ಪ್ರಕೃತಿಯೊಳು ವಿಶ್ವಾದಿ ರೂಪವ
ಪ್ರಕಟಮಾಳ್ಪನು ಯಥಾಮತಿಯೊಳು ಗುರುಕೃಪಾಬಲದಿ ||

ಮುಕುರ ನಿರ್ಮಿತ ಸದನದೊಳು ಪೊಗೆ
ಸ್ವಕಿಯ ರೂಪವ ಕಾಂಬ ತೆರದಲಿ
ಅಕುಟಿಲಾತ್ಮ ಚರಾಚರದಿ ಸರ್ವತ್ರ ತೋರುವನು || ೧೦ ||

ಪರಿಚ್ಛೇದತ್ರಯ ಪ್ರಕೃತಿಯೊಳ -
ಗಿರುತಿಹನು ವಿಶ್ವಾದಿ ರೂಪವ
ಧರಿಸುತಾತ್ಮಾದಿತ್ರಿರೂಪವ ಈಷಣತ್ರಯದಿ ||
ಸುರುಚಿಜ್ಞಾನಾತ್ಮ ಸ್ವರೂಪದಿ
ತುರ್ಯನಾಮಕ ವಾಸುದೇವನ
ಸ್ಮರಿಸು ಮುಕ್ತಿ ಪ್ರದಾಯಕನೀತನಹುದೆಂದು || ೧೧ ||

ಕಮಲ ಸಂಭವ ಜನಕ ಜಡ ಜಂ -
ಗಮರೊಳಗೆ ನೆಲೆಸಿದ್ದು ಕ್ರಮ ವ್ಯ -
ತ್ಕ್ರಮದಿ ಕರ್ಮವ ಮಾಡಿ ಮಾಡಿಸುತಿಪ್ಪ ಬೇಸರದೇ ||
ಕ್ಷಮಕ್ಷಾಮ ಸಮೀಹನಾಹ್ವಯ
ಸುಮನಸಾಸುರರೊಳಿರುತ ಅಹಂ
ಮಮ ನಮಮ ಎಂದೀಉಪಾಸನೆ ಗೈವ ಪ್ರಾಂತದಲಿ || ೧೨ ||

ಈ ಸಮಸ್ತ ಜಗತ್ತು ಈಶಾ -
ವಾಶ್ಯವೆನಿಪದು ಕಾರ್ಯರೂಪವು
ನಾಶವಾದರು ನಿತ್ಯವೇಸರಿ ಕಾರಣ ಪ್ರಕೃತಿ ||
ಶ್ರೀಶಗೆ ಜಡ ಪ್ರತಿಮೆ ಎನಿಪುದು
ಮಾಸದೊಮ್ಮೆಗೂ ಸನ್ನಿಧಾನವು
ವಾಸವಾಗಿಹ ನಿತ್ಯ ಶಾಲಿಗ್ರಾಮದೋಪಾದಿ || ೧೩ ||

ಏಕಮೇವಾದ್ವಿತಿಯ ರೂಪಾ -
ನೇಕ ಜೀವರೊಳಿದ್ದು ತಾ ಪ್ರ -
ತ್ಯೇಕ ಕರ್ಮವ ಮಾಡಿ ಮೋಹಿಸುತಿಪ್ಪ ತಿಳಿಸದಲೆ ||
ಮೂಕಬಧಿರಾಂಧಾದಿ ನಾಮಕ -
ನೀ ಕಳೇವರದೊಳಗೆ ಕರೆಸುವ
ಮಾಕಳತ್ರನ ಲೌಕಿಕ ಮಹಾಮಹಿಮೆಗೇನೆಂಬೆ || ೧೪ ||

ಲೋಕಬಂಧು ಲೋಕನಾಥ ವಿ -
ಶೋಕ ಭಕ್ತರ ಶೋಕನಾಶನ
ಶ್ರೀಕರಾರ್ಚಿತ ಸೋಕದಂದದಲಿಪ್ಪ ಸರ್ವರೊಳು ||
ಸಾಕುವನು ಸಜ್ಜನರ ಪರಮ ಕೃ -
ಪಾಕರೇಶ ಪಿನಾಕಿ ಸನ್ನುತ
ಸ್ವೀಕರಿಸುವಾನತರು ಕೊಟ್ಟ ಸಮಸ್ತ ಕರ್ಮಗಳ || ೧೫ ||

ಆಹಿತ ಪ್ರತಿಮೆಗಳೆನಿಸುವವು
ದೇಹ ಗೇಹಾಪತ್ಯ ಸತಿ ಧನ
ಲೋಹ ಕಾಷ್ಟ ಶಿಲಾ ಮೃದಾತ್ಮಕವಾದ ದ್ರವ್ಯಗಳು ||
ಸ್ನೇಹದಲಿ ಪರಮಾತ್ಮನೆನಗಿ -
ತೀಹನೆಂದರಿದನುದಿನದಿ ಸಂ -
ಮೋಹಕೊಳಗಾಗದಲೆ ಪೂಜಿಸು ಸರ್ವನಾಮಕನ || ೧೬ ||

ಶ್ರೀ ತರುಣಿವಲ್ಲಭಗೆ ಜೀವರು
ಚೇತನ ಪ್ರತಿಮೆಗಳು ಓತ
ಪ್ರೋತನಾಗಿದ್ದೆಲ್ಲರೊಳು ವ್ಯಾಪಾರ ಮಾಡುತಿಹ ||
ಹೋತ ಸರ್ವೇಂದ್ರಿಯಗಳೊಳು ಸಂ -
ಪ್ರೀತಿಯಿಂದುಂಡುಣಿಸಿ ವಿಷಯ ನಿ -
ರ್ವಾತ ದೇಶಗ ದೀಪದಂದದಲಿಪ್ಪ ನಿರ್ಭಯದಿ || ೧೭ ||

ಭೂತಸೋಕಿದ ಮಾನವನ ಬಹು
ಮಾತನಾಡುವ ತೆರದಿ ಮಹದ -
ದ್ಭುತ ವಿಷ್ಣ್ವಾವೇಶದಿಂದಲಿ ವರ್ತಿಪುದು ಜಗವು ||
ಕೈತವೋಕ್ತಿಗಳಲ್ಲಿ ಶೇಷ ಫ -
ಣಾತಪತ್ರಗೆ ಜೀವ ಪಂಚಕ
ವ್ರಾತವೆಂದಿಗೂ ಭಿನ್ನಪಾದಾತ್ಮ್ಯಯದಿ ಕರೆಸುವುದು || ೧೮ ||

ದಿವಿಯೊಳಿಪ್ಪವು ಮೂರುಪಾದಗ -
ಳವನಿಯೊಳಗಿಹದೊಂದು ಈ ವಿಧ
ಕವಿಬಿರೀಡಿತ ಕರೆಸುವ ಚತುಷ್ಪಾತು ತಾನೆಂದು ||

ಇವನ ಪಾದ ಚತುಷ್ಟಯಗಳನು
ಭವಕೆ ತಂದು ನಿರಂತರದಿ ಉ
ದ್ಭವನ ಸುಖ ಸರ್ವಾಂತರಾತ್ಮಕನೆಂದು ಸ್ಮರಿಸುತಿರು || ೧೯ ||

ವಂಶ ಬಾಗಲು ಬೆಳೆಯೆ ಕಂಡು ನ -
ರಾಂಶದಲಿ ಶೋಭಿಪದು ಬಾಗದ
ವಂಶ ಪಾಶದಿ ಕಟ್ಟಿ ಏರುವ ಡೊಂಬ ಮಸ್ತಕಕೆ ||
ಕಂಸ ಮರ್ದನ ದಾಸರಿಗೆ ನಿ -
ಸ್ಸಂಶಯದಿ ಯರಗದಲೆ ನಾ ವಿ -
ದ್ವಾಂಸನೆಂದಹಂಕರಿಸೆ ಭವಗುಣದಿಂದ ಬಂಧಿಸುವ || ೨೦ ||

ಜ್ಯೋತಿರೂಪಗೆ ಪ್ರತಿಮೆಗಳು ಸಾಂ -
ಕೇತಿಕಾರೋಪಿತ ಸುಪೌರುಷ
ಧಾತು ಸಪ್ತಕ ಧೈರ್ಯ ಶೌರ್ಯದಾರ್ಯ ಚಾತುರ್ಯ ||
ಮಾತು ಮಾನ ಮಹತ್ವ ಸಹನ ಸು -
ನೀತಿ ನಿರ್ಮಲದೇಶ ಬ್ರಾಹ್ಮಣ
ಭೂತ ಪಂಚಕ ಬುದ್ಧಿ ಮೊದಲಾದಿಂದ್ರಿಯ ಸ್ಥಾನ || ೨೧ ||

ಜೀವರಾಶಿಯೊಳಪ್ಪತ ಶಾಶ್ವತ
ಸ್ಥಾವರಗಳೊಳು ಸ್ಥಾಣುನಾಮಕ
ನಾವಕಾಲದಲಿಪ್ಪನಜಿತಾನಂತನೆಂದೆನಿಸಿ ||
ಗೋವಿದಾಂಪತಿ ಗಾಯನ ಪ್ರಿಯ
ಸಾವಯುವ ಸಾಹಸ್ರನಾಮ ಪ -
ರಾವರೇಶ ಪವಿತ್ರ ಕರ್ಮ ವಿಪಶ್ಚಿತ ಸುಧಾಮ || ೨೨ ||

ಮಾಧವನ ಪೂಜಾರ್ಥವಾಗಿ ನಿ -
ಷೇಧ ಕರ್ಮವ ಮಾಡಿ ಧನ ಸಂ -
ಪಾದಿಸಲು ಸತ್ಪುಣ್ಯ ಕರ್ಮಗಳೆನಿಸಿ ಕೊಳುತಿಹವು ||
ಸ್ವೋದರಂಭರಣಾರ್ಥ ನಿತ್ಯದಿ
ಸಾಧು ಕರ್ಮವ ಮಾಡಿದರೂ ಸರಿ
ಐದುವನು ದೇಹಾಂತರವ ಸಂದೇಹವಿನಿತಿಲ್ಲ || ೨೩ ||

ಆಪಗತಾಶ್ರಯ ಎಲ್ಲರೊಳಗಿ -
ದ್ದುಪಮನೆನಿಪಾನುಪಮರೂಪನು
ಶಫರಕೇತನಜನಕ ಮೋಹಿಪ ಮೋಹಕನ ತೆರದಿ ||
ತಪನ ಕೋಟಿ ಸಮ ಪ್ರಭಾಸಿತ -
ವಪು ವೆನಿಪ ಕೃಷ್ಣಾದಿ ರೂಪಕ
ದ್ವಿಪಗಳಂತು ತುಂಡುಣಿಪ ಸರ್ವತ್ರ ನೆಲೆಸಿದ್ದು || ೨೪ ||

ಅಡವಿಯೊಳು ಬಿತ್ತದಲೆ ಬೆಳೆದಿಹ
ಗಿಡದ ಮೂಲಿಕೆ ಸಕಲ ಜೀವರ
ಒಡಲೊಳಿಪ್ಪಾಮಯವ ಪರಿಹರಗೈಸುವಂದದಲಿ ||
ಜಡಜ ಸಂಭವ ಜನಕ ತ್ರಿಜಗ -
ದೃಡೆಯ ಸಂತೈಸೆನಲೂ ಅವರಿ
ದ್ದಡೆಗೆ ಬಂದೊದಗುವ ಭಕ್ತರ ಭಿಡಿಯ ಮೀರದಲೆ || ೨೫ ||

ಶ್ರೀನಿಕೇತನ ತನ್ನವರ ದೇ -
ಹಾನುಬಂಧಿಗಳಂತೆ ಅವ್ಯಪ -
ಧಾನದಲಿ ನೆಲಸಿಪ್ಪ ಸರ್ವದ ಸಕಲಕಾಮದನು ||
ಏನುಕೊಟ್ಟರು ಭುಂಜಿಸುತ ಮ -
ದ್ದಾನೆಯಂದದಿ ಸಂಚರಿಸು ಮ -
ತ್ತೇನು ಬೇಡದೆ ಭಜಿಸುತಿರು ಅವನಂಘ್ರಿ ಕಮಲಗಳ || ೨೬ ||

ಬೇಡದಲೆ ಕೊಡುತಿಪ್ಪ ಸುರರಿಗೆ
ಬೇಡಿದರೆ ಕೊಡುತಿಹನು ನರರಿಗೆ
ಬೇಡಿ ಬಳಲುವ ದೈತ್ಯರಿಗೆ ಕೊಡನೊಮ್ಮೆ ಪುರುಷಾರ್ಥ ||
ಮೂಢರನುದಿನ ಧರ್ಮಕರ್ಮವ
ಮಾಡಿದರೂ ಸರಿ ಅಹಿತ ಫಲಗಳ
ನೀಡಿ ಉನ್ಮತ್ತರನ ಮಾಡಿ ಮಹಾನಿರಯವೀವ || ೨೭ ||

ತರಣಿ ಸರ್ವತ್ರದಲಿ ಕಿರಣವ
ಹರಹಿ ತತ್ತದ್ವಸ್ತುಗಳನನು -
ಸರಿಸಿ ಅದರದರಂತೆ ಛಾಯವು ಕಂಗೊಳಿಪತೆರದಿ ||

ಅರಿಧರೇಜಾನೇಜ ಜಗದೊಳ -
ಗಿರುವ ಛಾಯತಪನೆನಿಸಿ ಸಂ -
ಕರುಷಣಾಹ್ವಯನವರವರ ಯೋಗ್ಯತೆಗಳಂತಿಪ್ಪ || ೨೮ ||

ಈ ವಿಧದ ಸರ್ವತ್ರ ಲಕುಮಿ
ಭೂವನಿತೆಯರ ಕೂಡಿ ತನ್ನ ಕ -
ಳಾವಿಶೇಷಗಳೆಲ್ಲ ಕಡೆಯಲ್ಲಿ ತುಂಬಿ ಸೇವ್ಯತಮ ||
ಸೇವಕನು ತಾನೆನಿಸಿ ಮಾಯಾ
ದೇವಿರಮಣ ಪ್ರವಿಷ್ಟರೂಪಕ
ಸೇವ ಮಾಳ್ಪ ಶರಣ್ಯ ಶಾಶ್ವತ ಕರುಣಿ ಕಮಲಾಕ್ಷ || ೨೯ ||

ಪ್ರಣವ ಕಾರಣ ಕಾರ್ಯ ಪ್ರತಿಪಾ -
ದ್ಯನು ಪರಾತ್ಪರ ಚೇತನಾ ಚೇ -
ತನ ವಿಲಕ್ಷಣನಂತಸತ್ಕಲ್ಯಾಣ ಗುಣ ಪೂರ್ಣ ||
ಅನುಪಮನುಪಾಸಿತ ಗುಣೋದಧಿ
ಅನಘ ಅಜಿತಾನಂತ ನಿಷ್ಕಿಂ -
ಚನಜನಪ್ರಿಯ ನಿರ್ವಿಕಾರ ನಿರಾಶ್ರಯಾವ್ಯಕ್ತ || ೩೦ ||

ಗೋಪಭೀಯಭವಾಂಧಕಾರಕೆ
ದೀಪವಟ್ಟಿಗೆ ಸಕಲಸುಖ ಸದ -
ನೋಪರಿಗ್ರಹವೆನಿಸುತಿಪ್ಪದು ಹರಿಕಥಾಮೃತವು ||
ಗೋಪತಿಜಗನ್ನಾಥ ವಿಠ್ಠಲ ಸ
ಮೀಪದಲಿ ನೆಲಸಿದ್ದು ಭಕ್ತರ
ಅಪವರ್ಗರ ಮಾಡುವನು ಬಹುದುಃಖ ಭವದಿಂದ || ೩೧ ||

# ೨೫ ಆರೋಹಣ ತಾರತಮ್ಯ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಸ್ಥಾವರರ ನೋಡಲ್ಕೆ ತೃಣ ಕ್ರಿಮಿ
ಜೀವರುತ್ತಮ ಕ್ರಿಮಿಗಳಿಂದಾ
ಜಾವಿ ಗೋ ಗಜ ವ್ಯಾಘ್ರ ಸಿಂಹಗಳಿಂದ ಶೂದ್ರಾದಿ ||
ಮೂಪರುತ್ತಮ ಕರ್ಮಕರು ಭೂ
ದೇವರುತ್ತಮ ಕರ್ಮಿ ನೋಡಲು
ಕೋವಿದೋತ್ತಮರು ಕವಿಗಳಿಂದಲಿ ಕ್ಷಿತಿಪರುತ್ತಮರು || ೧ ||

ಧರಣಿಪರ ನೋಡಲ್ಕೆ ನರಗಂ -
ಧರ್ವರುತ್ತಮ ದೇವಗಂಧ
ರ್ವರಗಣೋತ್ತಮರಿವರಿಗಿಂದ ಶತೋನಶತಕೋಟಿ ||
ಪರಮ ಋಷಿಗಳು ಅಪ್ಸರ ಸ್ತ್ರೀ -
ಯರು ಸಮಾನರು ಇವರಿಗಿಂದಲಿ
ಚಿರಪಿತಗಳುತ್ತಮರು ಚಿರನಾಮಕ ಪಿತೃಗಳಿಗೆ || ೨ ||

ಎರಡಯಿದು ಎಂಭತ್ತು ಋಷಿ ತುಂ -
ಬರುಶತೋರ್ವಶಿಯಪ್ಸರ ಸ್ತ್ರೀ -
ಯರು ಶತಾಜಾನಜರುತ್ತಮ ಚಿರಪಿತೃಗಳಿಂದ ||
ಪರರು ಊರ್ವಶಿಗಿಂತ ವೈಶ್ವಾ -
ನರನ ಸುತರೀರೆಂಟು ಸಾವಿರ
ಹರವೆಯರೊಳುತ್ತಮ ಕಶೇರ್ಯರ್ವತ್ತು ನಾಲ್ಕುಜನ || ೩ ||

ಸರಿಯೆನಿಪರು ವ್ರಜೌಕಸ ಸ್ತ್ರೀ -
ಯರು ಸುರಾಸ್ವಾತ್ಮಜರಿಗೆ ಪು -
ಷ್ಕರನು ಕರ್ಮಪ ಪುಷ್ಕರನಿಗೆ ಶನೈಶ್ಚರೋತ್ತಮನು ||
ತರಣಿಜನಿಗುತ್ತಮಳುಷಾಶ್ವಿನಿ
ಸುರರರಸಿಗುತ್ತಮ ಜಲಪ ಬುಧ
ಶರಧಿ ಜಾತ್ಮಜಗುತ್ತಮ ಸ್ವಾಹಾದೇವಿ ಎನಿಸುವಳು || ೪ ||

ಅನಲಭಾರ್ಯರ್ಗಳಿಗಿಂದನಾಖ್ಯಾ -
ತನಿಮಿಷರನಾಖ್ಯಾತರಿಂದಲಿ
ಘನ ಪರ್ಜನ್ಯಾನಿರುದ್ಧನ ಸ್ತ್ರೀಯುಷಾದೇವಿ ||
ದ್ಯುನದಿ ಸಂಜ್ಞಾ ಶಾಮಲಾರೋ -
ಹಿಣಿಗಳೈವರು ಸಮರನಾಖ್ಯಾ -
ತ ನಿಮಿಷೋತ್ತಮರಿವರಿಗಿಂದಲಿ ನೂರು ಕರ್ಮಜರು || ೫ ||

ಪೃಥು ನಹುಷ ಶಶಿಬಿಂದು ಪ್ರಿಯ -
ವ್ರತ ಪರೀಕ್ಷಿತ ನೃಪರು ಭಾಗೀ -
ರಥಿಯ ನೋಡಲ್ಕಧಿಕ ಬಲ್ಯಾದಿಂದ್ರ ಸಪ್ತಕರು ||
ಪಿತೃಗಳೆಂಟೆಂಟಧಿಕವಪ್ಸರ
ಸತಿಯರೀರ್ರೈದೊಂದು ಮನುಗಳು
ದಿತಿಜ ಗುರು ಚಾವನ ಉಚಥ್ಯರು ಕರ್ಮಜರು ಸಮರು || ೬ ||

ಧನಪ ವಿಷ್ವಕ್ಸೇನ ಗಣಪಾ -
ಶ್ವಿನಿಗಳೆಂಬತ್ತೈದು ಶೇಷರಿ -
ಗೆಣೆ ಎನಿಸುವರು ಮಿತ್ರ ತಾರಾ ನಿಋತಿ ಪ್ರವಹೀ ||
ಗುಣಗಳಿಂದೈದಧಿಕ ಎಂಭ -
ತ್ತೆನಿಪ ಶೇಷರಿಗುತ್ತಮರು ಸ
ನ್ಮುನಿ ಮರೀಚಿ ಪುಲಸ್ತ್ಯ ಪುಲಹ ಕ್ರತು ವಶಿಷ್ಠಮುಖ || ೭ ||

ಅತ್ರಿಯಂಗಿರರೇಳು ಬ್ರಹ್ಮನ
ಪುತ್ರರಿವರಿಗೆ ಸಮರು ವಿಶ್ವಾ -
ಮಿತ್ರ ವೈವಸ್ವತರು ಈಶಾವೇಶ ಬಲದಿಂದ ||
ಮಿತ್ರರಿಂದುತ್ತಮರು ಸ್ವಾಹಾ
ಭರ್ತೃ ಭೃಗುವು ಪ್ರಸೂತಿ ವಿಶ್ವಾ -
ಮಿತ್ರ ಮೊದಲಾದವರಿಗಿಂದಲಿ ಮೂವರುತ್ತಮರು || ೮ ||

ನಾರದೋತ್ತಮನಗ್ನಿಗಿಂದಲಿ
ವಾರಿನಿಧಿ ಪಾದೋತ್ತಮನು ಯಮ
ತಾರಕೇಶ ದಿವಾಕರನು ಶತರೂಪರುತ್ತಮರು ||

ಪಾರಿಜಾಪ್ತನಿಗಿಂತ ಪ್ರವಹ
ಮಾರುತೋತ್ತಮ ಪ್ರವಹಗಿಂದಲಿ
ಮಾರ ಪುತ್ರನಿರುದ್ಧ ಗುರು ಮನು ದಕ್ಷಶಚಿ ರತಿಯು || ೯ ||

ಆರುಜನರುಗಳಿಂದಲಾಹಂ -
ಕಾರಿಕ ಪ್ರಾಣೋತ್ತಮಾಖಿಳ ಶ -
ರೀರಮಾನಿ ಪ್ರಾಣಗಿಂದಲಿ ಕಾಮ ಇಂದ್ರರಿಗೆ ||
ಗೌರಿವಾರುಣಿ ಖಗಪರಾಣಿಗೆ
ಶೌರಿ ಮಹಿಷಿಯರೊಳಗೆ ಜಾಂಬುವ -
ತಿ ರಮಾಯುತಳಾದ ಕಾರಣವಧಿಕಳೆನಿಸುವಳು || ೧೦ ||

ಹರ ಫಣಿಪ ವಿಹಗೇಂದ್ರ ಮೂವರು
ಹರಿ ಮಡದಿಯರಿಗುತ್ತಮರು ಸೌ -
ಪರಣಿ ಪತಿಗುತ್ತಮರು ಭಾರತಿ ವಾಣಿ ಇರ್ವರಿಗೆ ||
ಮರುತ ಬ್ರಹ್ಮರು ಉತ್ತಮರು ಇಂ
ದಿರೆಯು ಪರಮೋತ್ತಮಳು ಲಕ್ಷ್ಮೀಗೆ
ಸರಿಯನಿಸುವರಿಲ್ಲವೆಂದಿಗು ದೇಶಕಾಲದೊಳು || ೧೧ ||

ಶ್ರೀ ಮುಕುಂದನ ಮಹಿಳೆ ಲಕುಮಿ ಮ
ಹಾಮಹಿಮೆಗೇನೆಂಬೆ ಬ್ರಹ್ಮೇ -
ಶಾಮರೇಂದ್ರರ ಸೃಷ್ಟಿಸ್ಥಿತಿಲಯಗೈಸಿ ಅವರವರ ||
ಧಾಮಗಳ ಕಲ್ಪಿಸಿಕೊಡುವಳಜ -
ರಾಮರಣಳಾಗಿರ್ದು ಸರ್ವ
ಸ್ವಾಮಿ ಮಮ ಗುರುವೆಂದುಪಾಸನೆ ಮಾಳ್ಪಳಚ್ಯುತನ || ೧೨ ||

ಈಸು ಮಹಿಮೆಗಳುಳ್ಳ ಲಕುಮಿ ಪ -
ರೇಶನಾನಂತಾಂಶಗುಣದೊಳು
ಲೇಶಲೇಶಕೆ ಸರಿಯೆನಿಸಳಾವಾವ ಕಾಲದಲಿ ||
ದೇಶಕಾಲಾತೀತ ಲಕುಮಿಗೆ
ಕೇಶವನ ವಕ್ಷಸ್ಥಳವೆ ಅವ
ಕಾಶವಾಯಿತು ಇವನ ಮಹಿಮೆ ವ್ಯಾಪ್ತಿಗೆಣೆಯುಂಟೆ || ೧೩ ||

ಒಂದು ರೂಪದೊಳೊಂದವಯವದೊ
ಳೊಂದು ರೋಮದೊಳೋಂದುದೇಶದಿ
ಪೊಂದಿಕೊಂಡಿಹರಜಭವಾದಿ ಸಮಸ್ತ ಜೀವಗಣ ||
ಸಿಂಧು ಸಪ್ತ ದ್ವೀಪ ಮೇರು ಸು -
ಮಂದರಾದ್ಯದ್ರಿಗಳು ಬ್ರಹ್ಮ ಪು
ರಂದರಾದಿ ಸಮಸ್ತ ಲೋಕಪರಾಲಯಗಳೆಲ್ಲ || ೧೪ ||

ಸರ್ವದೇವೋತ್ತಮನು ಸರ್ವಗೆ
ಸರ್ವ ಗುಣಸಂಪೂರ್ಣ ಸರ್ವದ
ಸರ್ವತಂತ್ರ ಸ್ವತಂತ್ರ ಸರ್ವಾಧಾರ ಸರ್ವಾತ್ಮ ||
ಸರ್ವತೋಮುಖ ಸರ್ವನಾಮಕ
ಸರ್ವಜನ ಸಂಪೂಜ್ಯ ಶಾಶ್ವತ
ಸರ್ವಕಾಮದ ಸರ್ವಸಾಕ್ಷಿಗ ಸರ್ವಜಿತ್ಸರ್ವ || ೧೫ ||

ತಾರತಮ್ಯಾ ರೋಹಣವ ಬರ -
ದಾರು ಪಠಿಸುವವರ ಲಕ್ಷ್ಮೀ
ನಾರಸಿಂಹ ಸಮಸ್ತದೇವಗಣಾಂತರಾತ್ಮಕನು ||
ಪೂರೈಯಿಸುವ ಮನೋರಥಂಗಳ
ಕಾರುಣಿಕ ಕೈವಲ್ಯದಾಯಕ
ದೂರಗೈವ ಸಮಸ್ತ ದುರಿತವ ವಿಗತಭಯಶೋಕ || ೧೬ ||

ಪ್ರಣತಕಾಮದ ನಂಘ್ರಿ ಸಂದರು -
ಶನದಪೇಕ್ಷೆಗಳುಳ್ಳವಗೆ ನಿ -
ಚ್ಚಣಿಕೆ ಎನಿಪುದು ಜಡಮೊದಲು ಬ್ರಹ್ಮಾಂತ ತರತಮವು ||
ಮನವಚನದಿಂ ಸ್ಮರಿಸುವರ ಭವ
ವನಧಿಶೋಷಿಸಿ ಪೋಲಾಗುವದು ಕಾ -
ರಣವೆನಿಸುವದು ಜ್ಞಾನ ಭಕ್ತಿ ವಿರಕ್ತಿ ಸಂಪದಕೆ || ೧೭ ||

ಅನಲನೊಳು ಹೋಮಿಸುವ ಹರಿಚಂ
ದನವೆ ಮೊದಲಾದದರ ಸುವಾ -
ಸನೆಯು ಪ್ರತ್ಯಪ್ರತ್ಯೇಕ ತೋರ್ಪದು ಎಲ್ಲ ಕಾಲದಲಿ ||

ದನುಜ ಮಾನವ ದಿವಿಜರವರಪ -
ರನುಚಿತೋಚಿತ ಕರ್ಮ ವೃಜನಾ
ರ್ದನನು ವ್ಯಕ್ತಿಯ ಮಾಳ್ಪ ತ್ರಿಗುಣಾತೀತ ವಿಖ್ಯಾತ || ೧೮ ||

ಭಕ್ತವತ್ಸಲ ಭಾಗ್ಯಪುರುಷ ವಿ -
ವಿಕ್ತ ವಿಶ್ವಾಧಾರ ಸರ್ವೋ -
ದ್ರಿಕ್ತ ದೋಷವಿದೂರ ದುರ್ಗಮ ದುರ್ವಿಭಾವ್ಯ ಸ್ವಹಿ ||
ಶಕ್ತ ಶಾಶ್ವತ ಸಕಲ ವೇದ್ಯ -
ಕೋಕ್ತ ಮಾನದ ಮಾನ್ಯ ಮಾಧವ
ಸೂಕ್ತ ಸೂಕ್ಷ್ಮ ಸ್ಥೂಲ ಶ್ರೀ ಜಗನಾಥ ವಿಠ್ಠಲನು || ೧೯ ||

## ೨೬ ಅವರೋಹಣ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಹೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವುದು ||

ಕೇಶವಗೆ ನಾರಾಯಣಿಗೆ ಕಮ -
ಲಾಸನ ಸಮೀರ ವಾಣಿಗೆ
ವೀಶ ಫಣಿಪ ಮಹೇಶರಿಗೆ ಷಣ್ಮಹಿಷಿಯರ ಪದಕೆ ||
ಶೇಷ ರುದ್ರರ ಪತ್ನಿಯರಿಗೆ ಸು -
ವಾಸವ ಪ್ರದ್ಯುಮ್ನರಿಗೆ ಸಂ -
ತೋಷದಲಿ ವಂದಿಸುವೆ ಭಕ್ತಿಜ್ಞಾನ ಕೊಡಲೆಂದು || ೧ ||

ಪ್ರಾಣದೇವರಿಗೆ ನಮಿಪೆ ಕಾಮನ
ಸೂನು ಮನು ಗುರು ದಕ್ಷ ಶಚಿ ರತಿ
ಮಾನನಿಯರಿಗೆ ಪ್ರವಹದೇವಗೆ ಸೂರ್ಯ ಸೋಮ ಯಮ ||
ಮಾನವಿಗೆ ವರುಣನಿಗೆ ವೀಣಾ
ಪಾಣಿ ನಾರದ ಮುನಿಗೆ ನಮಿಸುವೆ
ಜ್ಞಾನ ಭಕ್ತಿ ವಿರಕ್ತಿ ಮಾರ್ಗವ ತಿಳಿಸಲೆನಗೆಂದು || ೨ ||

ಅನಲ ಭೃಗು ದಾಕ್ಷಾಯಣಿಯರಿಗೆ
ಕನಕ ಗರ್ಭಜ ಸಪ್ತ ಋಷಿಗಳಿ -
ಗೆಣೆಎನಿಪ ವೈವಸ್ವತಮನು ಗಾಧಿಸಂಭವಗೆ ||
ದನುಜ ನಿರುಋತಿ ತಾರ ಪ್ರಾವಹಿ
ವನಜ ಮಿತ್ರಗೆ ಅಶ್ವಿನಿ ಗಣಪ
ಧನಪವಿಷ್ವಕ್ಸೇನರಿಗೆ ವಂದಿಸುವೆನನವರತ || ೩ ||

ಉಕ್ತದೇವರ್ಕಳನುಳಿದು ಎಂ -
ಭತ್ತೈದು ಜನರುಗಳ ಮನುಗಳು -
ಚಥ್ಯಚ್ಯಾವನ ಯಮಳರಿಗೆ ಕರ್ಮಜರೆನಿಸುತಿಪ್ಪ ||
ಕಾರ್ತವೀರ್ಯಾರ್ಜುನ ಪ್ರಮುಖ ಶ -
ತಸ್ಥರಿಗೆ ಪರ್ಜನ್ಯ ಗಂಗಾ -
ದಿತ್ಯ ಯಮ ಸೋಮಾನಿರುದ್ಧರ ಪತ್ನಿಯರ ಪದಕೆ || ೪ ||

ಹುತವಹಾರ್ಧಾಂಗಿನಿಗೆ ಚಂದ್ರಮ |
ಸುತ ಬುಧನಾಮಾತ್ಮಿಕೋಷಾ
ಸತಿಗೆ ಛಾಯಾತ್ಮಜ ಶನೈಶ್ಚರಗಾನಮಿಪೆ ಸತತ ||
ಪ್ರತಿದಿವಸದಲಿ ಬಿಡದೆ ಜೀವ
ಪ್ರತತಿ ಮಾಡುವ ಕರ್ಮಗಳಿಗಧಿ
ಪತಿ ಎನಿಪ ಪುಷ್ಕರನ ಪಾದಾಂಬುಜಗಳಿಗೆ ಅಭಿನಮಿಪೆ || ೫ ||

ಆನಮಿಪೆ ಆಜಾನಜರಿಗೆ ಕೃ -
ಶಾನು ಸುತರಿಗೆ ಗೋಪ್ರಜದೊಳಿಹ
ಮಾನಿನಿಯರಿಗೆ ಚಿರಪಿತೃಶತ ನ್ಯೂನ ಶತಕೋಟಿ ||
ಮಾನಿಜನರಿಗೆ ದೇವಮಾನವ
ಗಾನ ಪ್ರೌಢರಿಗೆ ಮನಿಪರಿಗೆ ರ -
ಮಾನಿವಾಸನ ದಾಸವರ್ಗಕೆ ನಮಿಪೆನನವರತ || ೬ ||

ಅನುಕ್ರಮಣಿಕ ತಾರತಮ್ಯ ವ -
ನನುದಿನದಿ ಸದ್ಭಕ್ತಿ ಪೂರ್ವಕ
ನೆನೆವರಿಗೆ ಧರ್ಮಾರ್ಥಕಾಮಾದಿಗಳು ಫಲಿಸುವವು ||

ವನಜಸಂಭವ ಮುಖ್ಯರವರವ -
ರೆನಿಸುವರು ಜಗನ್ನಾಥ ವಿಠ್ಠಲಗೆ
ವಿನಯದಿಂದಲಿ ನಮಿಸಿ ಕೊಂಡಾಡುತಿರು ಮರೆಯದಲೆ || ೭ ||

## ೩೨ ಅನುಕ್ರಮಣಿಕಾ ಸಂಧಿ

ಮಾನುಷೋತ್ತಮ ಪಿಡಿದು ಸಂಕರು
ಷಣನ ಪರಿಯಂತರದಿ ಪೇಳಿರು
ವನುಕ್ರಮಣಿಕೆಯ ಪದ್ಯವನ್ನು ಕೇಳುವುದು ಸಜ್ಜನರು ||

ಶ್ರೀಮದಾಚಾರ್ಯರ ಮತಾನುಗ
ಧೀಮತಾಂವರರಂಘ್ರಿಕಮಲಕೆ
ಸೋಮಪಾನಾರ್ಹರಿಗೆ ತಾತ್ವಿಕ ದೇವತಾ ಗಣಕೆ ||
ಹೈಮವತಿ ಷಣ್ಮಹಿಷಿಯರ ಪದ
ವ್ಯೋಮಕೇಶಗೆ ವಾಣಿ ವಾಯೂ
ತಾಮರಸಭವ ಲಕ್ಷ್ಮೀನಾರಾಯಣರಿಗಾ ನಮಿಪೆ || ೧ ||

ಶ್ರೀಮತಾಂವರ ಶ್ರೀಪತೇ ಸ
ತ್ಕಾಮಿತಪ್ರದ ಸೌಮ್ಯತ್ರಿಕಕು -
ದ್ಧಾಮ ತ್ರಿಚತುಷ್ಪಾದ ಪಾವನ ಚರಿತ ಸಾರಾಂಗ ||
ಗೋಮತಿಪ್ರಿಯ ಗೌಣಗುರು ತಮ
ಸಾಮಗಾಯನ ಲೋಲ
ಸರ್ವಸ್ವಾಮಿ ಮಾಮುಕ್ಕುಲತ್ಯೈವ ಸತ್ಯೈಸುಮದು ಸಜ್ಜನರ || ೨ ||

ರಾಮರಾಕ್ಷಸ ಕುಲ ಭಯಂಕರ
ಸಾಮಜೇಂದ್ರಪ್ರಿಯ ಮನೋ ವಾ
ಚಾಮಗೋಚರ ಚಿತ್ಸುಖಪ್ರದ ಚಾರುತರಚರಿತ ||
ಭೂಮ ಭೂಸ್ವರ್ಗಾಪವರ್ಗದ
ಕಾಮಧೇನು ಸುಕಲ್ಪತರು ಚಿಂ
ತಾಮಣಿ ಎಂದೆನಿಪೆ ನಿಜ ಭಕ್ತರಿಗೆ ಸರ್ವತ್ರ || ೩ ||

ಸ್ವರ್ಣವರ್ಣಸ್ವತಂತ್ರ ಸರ್ವಗ
ಕರ್ಣಹೀನ ಸುಶಯ್ಯ ಶಾಶ್ವತ
ವರ್ಣಚತುರಾಶ್ರಮ ವರ್ಜಿತ ಚಾರುತರ ಸ್ವರತ ||
ಅರ್ಣಸಂಪ್ರತಿಪಾದ್ಯವಾಯು ಸು -
ಪರ್ಣವರವಾಹನ ಪ್ರತಿಮ ಪಟು
ಪರ್ಣಪಯನಾಶ್ಚರ್ಯತಮ ಸಚ್ಚರಿತ ಗುಣಭರಿತ || ೪ ||

ಅಗಣಿತ ಸುಗುಣಧಾಮ ನಿಷ್ಕಲ
ಸ್ವಗತಭೇದ ವಿಶೂನ್ಯ ಶಾಶ್ವತ
ಜಗದಿ ಜೀವಾತ್ಯಂತ ಭಿನ್ನಾಪನ್ನ ಪರಿಪಾಲ ||
ತ್ರಿಗುಣ ವರ್ಜಿತ ತ್ರಿಭುವನೇಶ್ವರ
ಹಗಲಿರುಳು ಸ್ಮರಿಸುತಲಿಹರ ಬಿ -
ಟ್ಟಗಲ ಶ್ರೀ ಜಗನ್ನಾಥವಿಠಲ ವಿಶ್ವವ್ಯಾಪಕನು || ೫ ||

## ೨೮ ಗಣಪತಿ ಸ್ತೋತ್ರ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಶ್ರೀ ಶನಂಘ್ರಿ ಸರೋಜಭೃಂಗ ಮ
ಹೇಶ ಸಂಭವ ಮನ್ಮನದೊಳು ಪ್ರ
ಕಾಶಿಸನುದಿನ ಪ್ರಾರ್ಥಿಸುವೆ ಪ್ರೇಮಾತಿಶಯದಿಂದ ||
ನೀ ಸಲಹೋ ಸಜ್ಜನರ ವೇದ -
ವ್ಯಾಸ ಕರುಣಾಪಾತ್ರ ಮಹದಾ
ಕಾಶಪತಿ ಕರುಣಾಳು ಕೈಪಿಡಿದೆನ್ನನುದ್ಧರಿಸೋ || ೧ ||

ಏಕದಂತ ಇಭೇಂದ್ರ ಮುಖ ಚಾ
ಮೀಕರ ಕೃತವಿಭೂಷಣಾಂಗ ಕೃ -
ಪಾಕಟಾಕ್ಷದಿ ನೋಡು ವಿಜ್ಞಾಪಿಸುವೆನಿನಿತೆಂದು ||

ಸೋಕನೀಯನ ಸ್ತುತಿಸುತಿಪ್ಪ ವಿ
ವೇಕಿಗಳ ಸಹವಾಸ ಸುಖಗಳ
ನೀಕರುಣಿಸುವದೆನಗೆ ಸಂತತ ಪರಮ ಕರುಣದಲಿ || ೨ ||

ವಿಘ್ನರಾಜನೆ ದುರ್ವಿಷಯದೊಳು
ಮಗ್ನವಾಗಿಹ ಮನವು ಮಹದೋ -
ಷಘ್ನನಂಘ್ರಿ ಸರೋಜಯುಗಗಳದಿ ಭಕ್ತಿಪೂರ್ವಕದಿ ||
ಲಗ್ನವಾಗಲಿ ನಿತ್ಯನರಕ ಭ
ಯಾಗ್ನಿಗಳಿಗಾನಂಜೆ ಗುರುವರ
ಭಗ್ನಗೈಸೆನ್ನವಗುಣಗಳನು ಪ್ರತಿದಿವಸದಲ್ಲಿ || ೩ ||

ಧನಪವಿಷ್ವಕ್ಸೇನ ವೈದ್ಯಾ |
ಶ್ವಿನಿಗಳಿಗೆ ಸರಿಯೆನಿಪ ಷಣ್ಮುಖ -
ನನುಜ ಶೇಷ ಶತಸ್ಥದೇವೋತ್ತಮ ವಿಯದ್ಗಂಗಾ ||
ವಿನುತ ವಿಶ್ವೋಪಾಸಕನೆ ಸ
ನ್ಮನದಿ ವಿಜ್ಞಾಪಿಸುವೆ ಲಕುಮಿ
ವನಿತೆಯರಸನ ಭಕ್ತಿಜ್ಞಾನವ ಕೊಟ್ಟು ಸಲಹುವದು || ೪ ||

ಚಾರುದೇಷ್ಣಾಹ್ವಯನೆನಿಸಿ ಅವ -
ತಾರ ಮಾಡಿದೆ ರುಗ್ಮಿಣೀಯಲಿ
ಗೌರಿಯರಸನ ವರದಿ ಉದ್ವೃತರಾದ ರಾಕ್ಷಸರ ||
ಶೌರಿಯಾಜ್ಞಾದಿ ಸಂಹರಿಸಿ ಭೂ -
ಭಾರ ಇಳುಹಿದ ಕರುಣಿ ತ್ವತ್ಪಾ -
ದಾರವಿಂದಕೆ ನಮಿಪೆ ಕರುಣಿಪುದೆಮಗೆ ಸನ್ಮತಿಯಾ || ೫ ||

ಶೂರ್ಪ ಕರ್ಣವಿರಾಜಿತೇಂದುವ
ದರ್ಪವರ ಉದಿತಾರ್ಕಸನ್ನಿಭ
ಸರ್ಪವರ ಕಟಿಸೂತ್ರವೈಕೃತ ಗಾತ್ರಸುಚರಿತ್ರ ||
ಸ್ವರ್ಪಿತಾಂಕುಶ ಪಾಶಕರ ಖಳ
ದರ್ಪಭಂಜನ ಕರ್ಮಸಾಕ್ಷಿಗ
ತರ್ಪಕನು ನೀನಾಗಿ ತೃಪ್ತಿಯ ಬಡಿಸು ಸಜ್ಜನರ || ೬ ||

ಖೇಶ ಪರಮ ಸುಭಕ್ತಿ ಪೂರ್ವಕ
ವ್ಯಾಸಕೃತ ಗ್ರಂಥಗಳನರಿತು ಪ್ರ
ಯಾಸವಿಲ್ಲದೆ ಬರೆದು ವಿಸ್ತರಿಸಿದೆಯೋ ಲೋಕದೊಳು ||
ಪಾಶ ಪಾಣಿಯೆ ಪ್ರಾರ್ಥಿಸುವೆನುಪ
ದೇಶಿಸೆನಗದರರ್ಥಗಳ ಕರು -
ಣಾ ಸಮುದ್ರ ಕೃಪಾಕಟಾಕ್ಷದಿ ನೋಡೋ ಪ್ರತಿದಿನದಿ || ೭ ||

ಶ್ರೀಶನತಿ ನಿರ್ಮಲ ಸುನಾಭಿ
ದೇಶದ ಸ್ಥಿತ ರಕ್ತ ಗಂಧಾ -
ತಿ ಸುಶೋಭಿತ ಗಾತ್ರ ಲೋಕ ಪವಿತ್ರ ಸುರಮಿತ್ರ ||
ಮೂಷಿಕಾಸುರ ವಹನ ಪ್ರಾಣಾ
ವೇಶಯುತ ಪ್ರಖ್ಯಾತ ಪ್ರಭು ಪ್ರೊ -
ರೈಸು ಭಕ್ತರು ಬೇಡಿದಿಷ್ಟಾರ್ಥಗಳ ಪ್ರತಿದಿನದಿ || ೮ ||

ಶಂಕರಾತ್ಮಜ ದೈತ್ಯಗತಿಭ -
ಯಂಕರ ಗತಿಗಳೀಯಲೋಸುಗ
ಸಂಕಟಚತುರ್ಥಿಗನೆನಿಸಿ ಅಹಿತಾರ್ಥಗಳ ಕೊಟ್ಟು ||
ಮಂಕುಗಳ ಮೋಹಿಸುವ ಚಕ್ರಧ -
ರಾಂಕಿತನ ತೋರನುದಿನದಿ ತ್ವತ್ಪದ
ಪಂಕಜಗಳಿಗೆರಗಿ ಬಿನ್ನೈಸುವೆನು ಪಾಲಿಪುದು || ೯ ||

ಸಿದ್ಧ ವಿದ್ಯಾಧರಗಣಸಮಾ -
ರಾಧ್ಯ ಚರಣ ಸರೋಜ ಸರ್ವಸು -
ಸಿದ್ಧಿದಾಯಕ ಶೀಘ್ರದಿಂಪಾಲಿಪುದು ಭಿನ್ನಪವ ||
ಬುದ್ಧಿ ವಿದ್ಯಾ ಜ್ಞಾನ ಬಲ ಪರಿ -
ಶುದ್ಧಭಕ್ತಿ ವಿರಕ್ತಿ ನಿರುತನ -
ವದ್ಯನ ಸ್ಮೃತಿ ಲೀಲೆಗಳ ಸುಸ್ತವನ ವದನದಲಿ || ೧೦ ||

ರಕ್ತವಾಸದ್ವಯ ವಿಭೂಷಣ
ಉಕ್ತಿ ಲಾಲಿಸು ಪರಮ ಭಗವ -

ಸಕ ವಾಗ್ಗೀಃಷುಮುಪ್ಪ ವಿಷಯ ವಿ -
ರಕ್ತಿ ಪಾಲಿಸು ವಿದ್ವದಾರ್ಯ ವಿ -
ಮುಕ್ತನೆಂದೆನಿಸೆನ್ನ ಭವಭಯದಿಂದ ಕರುಣದಲಿ || ೧೧ ||

ಶಕ್ತ ಶಿಷ್ಟರ ಸಂಹರಿಪುದಕೆ
ಶಕ್ರ ನಿನ್ನನು ಪೂಜಿಸಿದನು ಉ -
ರುಕ್ರಮ ಶ್ರೀ ರಾಮಚಂದ್ರನು ಸೇತುಮುಖದಲಿ ||
ಚಕ್ರವರ್ತಿಪ ಧರ್ಮರಾಜನು
ಚಕ್ರಪಾಣಿಯ ನುಡಿಗೆ ಭಜಿಸಿದ
ವಕ್ರತುಂಡನೆ ನಿನ್ನೊಳೆಂತುಂಟೋ ಈಶನುಗ್ರಹವು || ೧೨ ||

ಕೌರವೇಂದ್ರನು ನಿನ್ನ ಭಜಿಸದ
ಕಾರಣದಿ ನಿಜಕುಲ ಸಹಿತ ಸಂ -
ಹಾರವೈದಿದ ಗುರುವರ ವೃಕೋದರನ ಗದೆಯಿಂದ ||
ತಾರಕಾಂತಕನನುಜಯೆನ್ನ ಶ
ರೀರದೊಳು ನೀನಿಂತು ಧರ್ಮ
ಪ್ರೇರಕನು ನೀನಾಗಿ ಸಂತೈಸೆನ್ನ ಕರುಣದಲಿ || ೧೩ ||

ಏಕವಿಂಶತಿ ಮೋದಕೆ ಪ್ರಿಯ
ಮೂಕರನು ವಾಗ್ಮಿಗಳ ಮಾಳ್ಪ ಕೃ -
ಪಾಕರೇಶ ಕೃತಜ್ಞ ಕಾಮದ ಕಾಯೋ ಕೈಪಿಡಿದು ||
ಲೇಖಕಾಗ್ರಣಿ ಮನ್ಮನದ ದು -
ರ್ವ್ಯಾಕುಲವ ಪರಿಹರಿಸು ದಯದಿ ಪಿ -
ನಾಕಿ ಭಾರ್ಯಾ ತನುಜ ಮೃದ್ಭವ ಪ್ರಾರ್ಥಿಸುವೆ ನಿನಗೆ || ೧೪ ||

ನಿತ್ಯಮಂಗಳ ಚರಿತ ಜಗದು
ತ್ಪತ್ತಿ ಸ್ಥಿತಿಲಯ ನಿಯಮನ ಜ್ಞಾ -
ನತ್ರಯ ಪ್ರದ ಬಂಧಮೋಚಕ ಸುಮನಸಾಸುರ ||
ಚಿತ್ತವೃತ್ತಿಗಳಂತೆ ನಡೆವ ಪ್ರ -
ಮತ್ತನಲ್ಲ ಸಹೃಷ್ಟನಾಪ್ತನ
ನಿತ್ಯದಲ್ಲಿ ನೆನೆ ನೆನೆದು ಸುಖಿಸುವ ಭಾಗ್ಯ ಕರುಣಿಪುದು || ೧೫ ||

ಪಂಚವೇದ ಜ್ಞಾನವರುಪು ವಿ -
ರಿಂಚಿ ಜನಕನ ತೋರು ಮನದಲಿ
ವಾಂಛಿತಪ್ರದ ಮಹಿಮೆಯಿಂದಲಿ ದಾಸನೆಂದರಿದು ||
ಪಂಚವಕ್ತ್ರನ ತನಯ ಭವದೊಳು
ಪಂಚಿಸದೆ ಸಂತೈಸು ವಿಷಯದಿ
ಸಂಚರಿಸದಂದದಲಿ ಮಾಡು ಮನಾದಿ ಕರಣಗಳ || ೧೬ ||

ಏನು ಬೇಡುವುದಿಲ್ಲ ನಿನ್ನ ಕು -
ಯೋನಿಗಳು ಬರಲಂಜೆ ಲಕುಮೀ
ಪ್ರಾಣಪತಿ ತತ್ತ್ವೇಶರಿಂದೊಡಗೂಡಿ ಗುಣಕಾರ್ಯ ||
ತಾನೆ ಮಾಡುವನೆಂಬ ಈ ಸು -
ಜ್ಞಾನವೇ ಕರುಣಿಸುವದೆಮಗೆ ಮ -
ಹಾನುಭಾವ ಮುಹು ರ್ಮುಹುಃ ಪ್ರಾರ್ಥಿಸುವೆ ಇನಿತೆಂದು || ೧೭ ||

ನಮೋ ನಮೋ ಗುರುವರ್ಯ ವಿಬುಧೋ -
ತ್ತಮ ವಿವರ್ಜಿತನಿದ್ರ ಕಲ್ಪ -
ದ್ರುಮನೆನಿಪ ಭಜಕರಿಗೆ ಬಹುಗುಣಭರಿತ ಶುಭಚರಿತ ||
ಉಮೆಯ ನಂದನ ಪರಿಹರಿಸಹಂ
ಮಮತೆ ಬುದ್ಧ್ಯಾದಿಂದ್ರಿಯಂಗಳಾ -
ಕ್ರಮಿಸಿ ದಣಿಸುತಲಿಹವು ಭವದೊಳಗಾವಕಾಲದಲಿ || ೧೮ ||

ಜಯ ಜಯತು ವಿಘ್ನೇಶ ತಾಪ
ತ್ರಯವಿನಾಶನ ವಿಶ್ವಮಂಗಳ
ಜಯ ಜಯತು ವಿದ್ಯಾಪ್ರದಾಯಕ ವೀತಭಯಶೋಕ ||
ಜಯ ಜಯತು ಚಾರ್ವಾಂಗ ಕರುಣಾ
ನಯನದಿಂದಲಿ ನೋಡಿ ಜನುಮಾ -
ಮಯ ಮೃತಿಗಳನು ಪರಿಹರಿಸು ಭಕ್ತರಿಗೆ ಭವದೊಳಗೆ || ೧೯ ||

ಕಡುಕರುಣಿ ನೀನೆಂದರಿದು ಹೇ -
ರೊಡಲ ನಮಿಸುವೆ ನಿನ್ನಡಿಗೆ ಜೋ -
ಬಡಿಸದೆ ಪಾಲಿಸು ಪರಮ ಕರುಣಾಸಿಂಧು ಎಂದೆಂದು ||

ನಡುನಡುವೆ ಬರುತಿಪ್ಪ ವಿಘ್ನವ
ತಡೆದು ಭಗವನ್ನಾಮಕೀರ್ತನೆ
ನುಡಿದು ನುಡಿಸೆನ್ನಿಂದ ಪ್ರತಿದಿವಸ ಮರೆಯದಲೆ || ೨೦ ||

ಏಕವಿಂಶತಿ ಪದಗಳೆನಿಸುವ
ಕೋಕನದ ನವಮಾಲಿಕೆಯ ಮೈ -
ನಾಕಿತನಯಾಂತರ್ಗತ ಶ್ರೀ ಪ್ರಾಣಪತಿ ಎನಿಪ ||
ಶ್ರೀ ಕರ ಜಗನ್ನಾಥ ವಿಠ್ಠಲ
ಸ್ವೀಕರಿಸಿ ಸ್ವರ್ಗಾಪವರ್ಗಾದಿ
ತಾ ಕೊಡುವ ಸೌಖ್ಯಗಳ ಭಕ್ತರಿಗಾವಕಾಲದಲಿ || ೨೧ ||

## ೨೯ ಅಣುತಾರತಮ್ಯ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ವಿಷ್ಣು ಸರ್ವೋತ್ತಮನು ಪ್ರಕೃತಿ ಕ -
ನಿಷ್ಠಳೆನಿಪಳನಂತಗುಣ ಪರ -
ಮೇಷ್ಠಿಪವನರು ಕಡಿಮೆವಾಣಿ ಭಾರತಿಗಳಧಮ ||
ವಿಷ್ಣುವಾಹ ಫಣೀಂದ್ರ ಮೃಡರಿಗೆ
ಕೃಷ್ಣಮಹಿಷಿಯರಧಮರಿವರೊಳು
ಶ್ರೇಷ್ಠಳೆನಿಪಳು ಜಾಂಬವತಿಯಾವೇಶ ಬಲದಿಂದ || ೧ ||

ಪ್ಲವಗ ಪನ್ನಗಪಾಹಿಭೂಷಣ
ಯುವತಿಯರು ಸಮ ತಮ್ಮೊಳಗೆ ಜಾಂ
ಬವತಿಗಿಂದಲಿ ಕಡಿಮೆ ಇವರಿಂದಿಂದ್ರ ಕಾಮರಿಗೆ ||
ಅವರ ಪ್ರಾಣನು ಕಡಿಮೆ ಕಾಮನ
ಕುವರ ಶಚಿ ರತಿ ದಕ್ಷ ಗುರು ಮನು
ಪ್ರವಹ ಷಡ್ಯುತ ಕೊರತೆಯೆನಿಸುವರಾರು ಜನರಿಂದ || ೨ ||

ಯಮ ದಿವಾಕರ ಚಂದ್ರಮಾನವಿ
ಸಮರು ಕೋಣ ಪ್ರವಹಗಧಮರು
ದ್ಯುಮಣಿಗಿಂದಲಿ ವರುಣ ನೀಚನು ನಾರದಾಧಮನು ||
ಸುಮನಸಾಸ್ಯ ಪ್ರಸೂತಿ ಭೃಗುಮುನಿ
ಸಮರು ನಾರದಗಧಮರತ್ರಿ
ಪ್ರಮುಖ ವಿಶ್ವಾಮಿತ್ರ ವೈವಸ್ವತರನಲಗಧಮ || ೩ ||

ಮಿತ್ರ ತಾರಾ ನಿರಋತಿ ಪ್ರವಹ
ಪತ್ನಿ ಪ್ರಾವಹಿ ಸಮರು ವಿಶ್ವಾ
ಮಿತ್ರಗಿಂದಲಿ ಕೊರತೆ ವಿಷ್ವಕ್ಸೇನ ಗಣನಾಥ ||
ವಿತ್ತಪತಿ ಅಶ್ವಿನಿಗಳಧಮರು
ಮಿತ್ರ ಮೊದಲಾದವರಿಗಿಂದಲಿ
ಬಿತ್ತರಿಪೆನು ಶತಸ್ಥ ದಿವಿಜರ ವ್ಯೂಹನಾಮಗಳ || ೪ ||

ಮರುತರೊಂಬತ್ತಧಿಕ ನಾಲ್ವ
ತ್ತೆರಡು ಅಶ್ವಿನಿ ವಿಶ್ವೇದೇವರು
ಎರಡೈದು ಹನ್ನೊಂದು ರುದ್ರರು ದ್ವಾದಶಾದಿತ್ಯ ||
ಗುರು ಪಿತೃತ್ರಯವಷ್ಟವಸುಗಳು
ಭರತ ಭಾರತಿ ಪೃಥ್ವಿ ಋಭವೆಂ
ದರಿವದಿವರನು ಸೋಮರಸ ಪಾನಾರ್ಹರಹುದೆಂದು || ೫ ||

ಈ ದಿವೌಕಸರೊಳಗೆ ಉತ್ತಮ
ಐದಧಿಕ ದಶ ಉಳಿದ ಎಂಭ -
ತ್ತೈದು ಶೇಷರಿಗೆಣೆ ಎನಿಸುವರು ಧನಪ ವಿನಾಯಕರು ||
ಸಾಧು ವೈವಸ್ವತ ಸ್ವಯಂಭುವ
ಶ್ರೀದ ತಾಪಸರುಳಿದು ಮನವೇ -
ಕಾದಶರು ವಿಷ್ವಕ್ಸೇನನಿಂದಲಿ ನೀಚರೆನಿಸುವರು || ೬ ||

ಚವನ ನಂದನ ಕವಿ ಬೃಹಸ್ಪತಿ
ಯಮರಜನುಚಿಥ್ಯ ಮುನಿ ಪಾವಕ
ದ್ರವಿಣ ನಹುಷ ಶಶಿಬಿಂದು ಪ್ರಿಯವ್ರತನು ಪ್ರಲ್ಹಾದ ||

ಕುವಲಯಪರುಕ್ಷಿತರಿಂದಲಿ
ಅವರ ರೋಹಿಣಿ ಶಾಮಲಾ ಜಾ
ನ್ಹವಿ ವಿರಾಟ ಪರ್ಜನ್ಯ ಸಂಜ್ಞಾದೇವಿಯರು ಅಧಮ ॥ ೭ ॥

ದ್ಯುನದಿಗಿಂದಲಿ ನೀಚರೆನಿಪರು
ಅನಭಿಮಾನಿ ದಿವೌಕಸರು ಕೇ -
ಚನಮುನಿಗಳಿಗೆ ಕಡಿಮೆ ಸ್ವಾಹಾದೇವಿಗಧಮರು ಬುಧ ॥
ಎನಿಸುವಳುಷಾದೇವಿ ನೀಚಳು
ಶನಿ ಕಡಿಮೆ ಕರ್ಮಾಧಿಪತಿ ಸ -
ದ್ವಿನುತ ಪುಷ್ಕರ ನೀಚನೆನಿಸುವ ಸೂರ್ಯನಂದನಗೆ ॥ ೮ ॥

ಕೊರತೆ ಎನಿಪರಶೀತಿ ಋಷಿ ಪು -
ಷ್ಕರಗೆ ಊರ್ವಶಿ ಮುಖ್ಯ ಶತ ಅ
ಪ್ಸರರು ತುಂಬರು ಮುಖರು ಆಜಾನಜರೆನಿಸುತಿಪರು ॥
ಕರೆಸುವದು ಅನಲಗಣ ನಾಲ್ಕು -
ತ್ತರೆ ಚತುರ್ದಶ ದ್ವ್ಯಷ್ಟಸಾವಿರ
ಹರಿಮಡದಿಯರು ಸಮರೆನಿಸುವರು ಪಿಂತೆ ಪೇಳ್ದತಿಗೆ ॥ ೯ ॥

ತದವರ ರುನಾಖ್ಯಾತ ಅಪ್ಸರ
ಸುದತಿಯರು ಕೃಷ್ಣಾಂಗಸಂಗಿಗ-
ಳಿದರ ತರುವಾಯದಲಿ ಚಿರಪಿತರುಗಳು ಇವರಿಂದ ॥
ತ್ರಿದಶ ಗಂಧರ್ವಗಣ ಇವರಿಂ
ದಧಮ ನರಗಂಧರ್ವರಿವರಿಂ
ದುದಧಿ ಮೇಖಳಪತಿಗಳಧಮರು ನೂರುಗುಣದಿಂದ ॥ ೧೦ ॥

ಪೃಥ್ವಿಪತಿಗಳಿಗಿಂದ ಶತಮನು
ಜೋತ್ತಮರು ಕಡಿಮೆನಿಸುವರಿವರಿಂ -
ದುತ್ತರೋತ್ತರ ನೂರು ಗುಣದಿಂದ್ಧಿಕರಾದವರ ॥
ನಿತ್ಯದಲಿ ಚಿಂತಿಸುತ ನಮಿಸುತ
ಭೃತ್ಯನಾನಹುದೆಂಬ ಭಕುತರ
ಚಿತ್ತದಲಿ ನೆಲೆಗೊಂಡು ಕರುಣಿಪರಖಿಳ ಸೌಖ್ಯಗಳ ॥ ೧೧ ॥

ದ್ರುಮ ಲತಾತೃಣ ಗುಲ್ಮ ಜೀವರು
ಕ್ರಮದಿ ನೀಚರು ಇವರಿಗಿಂದಾ -
ಧಮರೆನಿಸುವರು ನಿತ್ಯ ಬದ್ಧರಿಗಿಂದಲಜ್ಞಾನೀ ||
ತಮೋಯೋಗ್ಯರ ಭೃತ್ಯರಧಮರು
ಅಮರುಷಾದ್ಯಭಿಮಾನಿ ದೈತ್ಯರು
ನಮುಚಿ ಮೊದಲಾದವರಿಗಿಂದಲಿ ವಿಪ್ರಚಿತಿ ನೀಚ || ೧೨ ||

ಅಲಕುಮಿಯು ತಾ ನೀಚಳೆನಿಪಳು
ಕಲಿ ಪರಮನೀಚತಮನವನಿಂ -
ದುಳಿದ ಪಾಪಿಗಳಲ್ಲ ನೋಡಲು ಈ ಜಗತ್ರಯದಿ ||
ಮಲವಿಸರ್ಜನ ಕಾಲದಲಿ ಕ -
ತ್ತಲೆಯೊಳಗೆ ಕಶ್ಮಲ ಕುಮಾರ್ಗ
ಸ್ಥಳಗಳಲಿ ಚಿಂತನೆಯ ಮಾಳ್ಪದು ಬಲ್ಲವರು ನಿತ್ಯ || ೧೩ ||

ಸತ್ತ್ವ ಜೀವರಮಾನಿ ಬ್ರಹ್ಮನು
ನಿತ್ಯ ಬದ್ಧರೊಳಗೆ ಪುರಂಜನು
ದೈತ್ಯ ಸಮುದಾಯಾಧಿ ಪತಿ ಕಲಿ ಎನಿಪ ಪವಮಾನ ||
ನಿತ್ಯದಲಿ ಅವರೊಳಗೆ ಕರ್ಮ ಪ್ರ
ವರ್ತಕನು ತಾನಾಗಿ ಶ್ರೀ ಪುರು
ಷೋತ್ತಮನ ಸುಪ್ರೀತಿ ಗೋಸುಗ ಮಾಡಿ ಮಾಡಿಸುವ || ೧೪ ||

ಪ್ರಾಣದೇವನು ತ್ರಿವಿಧರೊಳಗೆ ಪ್ರ
ವೀಣ ತಾನೆಂದೆನಿಸುತಧಿಕಾ
ರಾನುಸಾರದಿ ಕರ್ಮಗಳ ತಾ ಮಾಡಿ ಮಾಡಿಸುತ ||
ಜ್ಞಾನಸಭಕ್ತಿ ಸುರರ್ಗೆ ಮಿಶ್ರ
ಜ್ಞಾನ ಮಧ್ಯಮ ಜೀವರಿಗೆ ಅ
ಜ್ಞಾನ ಮೋಹ ದ್ವೇಷಗಳ ದೈತ್ಯರಿಗೆ ಕೊಡುತ್ತಿಪ್ಪ || ೧೫ ||

ದೇವದೈತ್ಯರ ತಾರತಮ್ಯವ -
ನೀ ವಿಧದಿ ತಿಳಿದೆಲ್ಲರೊಳು ಲ
ಕ್ಷ್ಮೀ ಪರನೆ ಸರ್ವೋತ್ತಮನು ಎಂದರಿತು ನಿತ್ಯದಲಿ ||

ಸೇವಿಸುವ ಭಕ್ತರಿಗೊಲಿದು ಸುಖ -
ವೀವ ಸರ್ವತ್ರದಲಿ ಸುಖಮಯ
ಶ್ರೀ ವಿರಿಂಚಾದ್ಯಮರನುತ ಜಗನ್ನಾಥವಿಠಲನು || ೧೬ ||

# ೩೦ ದೈತ್ಯತಾರತಮ್ಯ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಶ್ರೀಶಮುಕ್ತಾಮುಕ್ತ ಸುರವರ
ವಾಸುದೇವಗೆ ಭಕ್ತಿಯಲಿ ಕಮ -
ಲಾಸನನು ಪೇಳಿದನು ದೈತ್ಯ ಸ್ವಭಾವ ಗುಣಗಳನು ||

ಎನಗೆ ನಿನ್ನಲ್ಲಿ ಭಕ್ತಿಜ್ಞಾನ ಗ
ಳೆನಿತಿಹವೊ ಪ್ರಾಣನಲಿ ತಿಳಿಯದೆ
ಹನುಮದಾದ್ಯವತಾರಗಳ ಭೇದಗಳ ಪೇಳುವವ ||
ದನುಜ ಘೋರಾಂಧಂತಮಸಿಗ್ಯೋ -
ಗ್ಯನುನ ಸಂಶಯ ನಿನ್ನ ಜೈವರ
ಕೊನೆಯ ನಾಲಿಗೆ ಪಿಡಿದು ಛೇದಿಪೆನೆಂದನಬ್ಜಭವ || ೧ ||

ಜ್ಞಾನ ಬಲ ಸುಖಪೂರ್ಣ ವ್ಯಾಪ್ತಗೆ
ಹೀನ ಗುಣವೆಂಬುವನು ಈಶ್ವರ
ನಾನೆ ಎಂಬುವ ಸಚ್ಚಿದಾನಂದಾತ್ಮಗುತ್ಪತ್ತಿ ||
ಶ್ರೀನಿತಂಬಿನಿಗೀಶಗೆ ವಿಯೋ -
ಗಾನುಚಿಂತನೆ ಭೇದ ಭೇದ ವಿ -
ಹೀನದೇಹಗೆ ಶಸ್ತ್ರಗಳ ಭಯಪೇಳುವವ ದೈತ್ಯ || ೨ ||

ಲೇಶಭಯ ಶೋಕಾದಿ ಶೂನ್ಯಗೆ
ಕ್ಲೇಶಗಳ ಪೇಳುವವ ದಾಮ
ವ [illegible] ||

ದಾಶರಥಿ ಕೃಷ್ಣಾದಿ ರೂಪಕೆ
ಕೇಶಖಂಡನ ಪೇಳ್ವ ಮುಕ್ಕಳಿ -
ಗೋಸುಗ ಶಿವಾರ್ಚನೆಯ ಮಾಡಿದನೆಂಬುವನೆ ದೈತ್ಯ || ೩ ||

ಪಾಪ ಪರಿಹಾರಾರ್ಥ ರಾಮನು |
ಮಾಪತಿಯ ನಿರ್ಮಿಸಿದ ಭಗವ |
ದ್ರೂಪಗೆ ಭೇದ ಚಿಂತನೆ ಮಾಳ ಮಾನವನು ||
ಆಪಗಳು ಸತ್ತೀರ್ಥಗುರು ಮಾ |
ಪೃಥುಪ್ರತಿಮೆ ಭೂತದ |
ಯೂಪರರು ಕಂಡವರೆ ದೇವರುಯೆಂಬುವನೆದೈತ್ಯ || ೪ ||

ಸುಂದರ ಸ್ವಯಂವ್ಯಕ್ತವು ಚಿದಾ -
ನಂದ ರೂಪಗಳೆಂಬುವನು ನರ -
ನಿಂದ ನಿರ್ಮಿತ ಈಶ್ವರಗೆ ಅಭಿನಮಿಸುತಿಪ ನರನು ||
ಕಂದುಗೊರಳ ದಿವಾಕರನು ಹರಿ
ಯೊಂದೆ ಸೂರ್ಯ ಸುರೋತ್ತಮ ಜಗ
ದ್ವಂದ್ಯನೆಂಬುವ ವಿಷ್ಣು ದೂಷಣೆ ಮಾಡುವನೆ ದೈತ್ಯ || ೫ ||

ನೇಮದಿಂದಶ್ವತ್ಥ ತುಲಸೀ
ಸೋಮಧರನಲಿ ವಿಮಲ ಸಾಲಿ
ಗ್ರಾಮಗಳನಿಟ್ಟಭಿನಮಿಪ ನರ ಮುಕ್ತಿಯೋಗ್ಯ ಸದಾ ||
ಭೂಮಿಯೊಳು ಧರ್ಮಾರ್ಥ ಮುಕ್ತಿಸು -
ಕಾಮಪೇಕ್ಷಿಗಳಿಂದ ಸಾಲಿ -
ಗ್ರಾಮಗಳ ವ್ಯತಿರಿಕ್ತ ವಂದಿಸೆ ದುಃಖ ವೈದುವನು || ೬ ||

ವಿತತಿಮಹಿಮನ ಬಿಟ್ಟು ಸುರರಿಗೆ
ಪೃಥಕ್ ವಂದನೆ ಮಾಳ್ಪ ಮಾನವ
ದಿತಿಜನೇಸರಿ ಹರಿಯು ತಾಸಂಸ್ಥಿತನೆನಿಸನಲ್ಲಿ ||
ಚತುರಮುಖ ಮೊದಲಾದಖಿಳ ದೇ -
ವತೆಗಳೊಳಗಿಹನೆಂದು ಲಕ್ಷ್ಮೀ
ಪತಿಗೆ ವಂದಿಸೆ ಒಂದರಕ್ಷಣ ಬಿಟ್ಟಗಲನವರ || ೭ ||

ಶೈವ ಶೂದ್ರ ಕರಾರ್ಚಿತ ಮಹಾ
ದೇವ ವಾಯು ಹರಿ ಪ್ರತಿಮ ವೃಂ
ದಾವನದಿ ಮಾಸದ್ವಯದೊಳಿಹ ತುಲಸಿ ಅಶ್ವತ್ಥ ||
ಗೋ ವಿಪ್ರಾಹವಿಸರ್ಜಿತಾಶ್ವ
ತ್ಥವಿಟಪಿಗಳ ಭಕ್ತಿ ಪೂರ್ವಕ
ಸೇವಿಸುವ ನರದೈತ್ಯ ಶಾಶ್ವತ ದುಃಖ ವೈದುವನು || ೮ ||

ಕಮಲಸಂಭವ ಮುಖ್ಯಮನುಜೋ
ತ್ತಮರ ಪರಿಯಂತರದಿ ಮುಕ್ತದ್ರು
ಸಮ ಶತಾಯುಸ್ಸುಳ್ಳವನು ಕಲಿ ಬ್ರಹ್ಮನೋಪಾದೀ ||
ಕ್ರಮದಿ ನೀಚರು ದೈತ್ಯರು ನರಾ
ಧಮರವಿಡಿದು ಕುಲಕ್ಷ್ಮೀ ಕಲಿಯನು -
ಪಮರೆನಿಸುವವರಸುರರೊಳು ದ್ವೇಷಾದಿಗುಣದಿಂದ || ೯ ||

ವನಜ ಸಂಭವನಬ್ದಶತ ಒ
ಬ್ಬನೆ ಮಹಾಕಲಿ ಶಬ್ದ ವಾಚ್ಯನು
ದಿನದಿನಗಳಲಿ ಬೀಳ್ವರದಂತಮವಿ ಕಲಿಮಾರ್ಗ ||
ದನುಜರೆಲ್ಲ ಪ್ರತೀಕ್ಷಿಸುತ ಬ್ರ
ಹ್ಮನ ಶತಾಬ್ದಾಂತದಲಿ ಲಿಂಗವ
ಅನಿಲನ ಗಧಾ ಪ್ರಹಾರದಿಂದಲಿ ಭಂಗವೈದುವರು || ೧೦ ||

ಮಾರುತನ ಗದೆಯಿಂದ ಲಿಂಗ
ಶರೀರ ಪೋದಾನಂತರ ತಮೋ
ದ್ವಾರವೈದಿ ಸ್ವರೂಪ ದುಃಖಗಳನುಭವಿಸುತಿಹರು ||
ವೈರ ತರಿತಕ ರತಿ ಹರಿಯಲಿ
ತಾರತಮ್ಯದಲಿರುತಿಹರು ಸಂ -
ಸಾರದಲಿ ತಮಸ್ಸಿನಲಿಯುತ್ಯಧಿಕ ಕಲಿಯಲ್ಲಿ || ೧೧ ||

ಜ್ಞಾನವೆಂಬುದು ಮಿಥ್ಯ ಅಸಮೀ
ಚೀನ ದುಃಖ ತರಂಗ ಸಮೀ
ಚೀನ ಬುದ್ಧಿ ನಿರಂತರದಿ ಕಲಿಗಿಪ್ಪವು ದೈತ್ಯರೊಳು ||

ಹೀನಳೆನಿಪಳು ಶತ ಗುಣದಿ ಕಲಿ
ಮಾನವಿಗೆ ಶತ ವಿಪ್ರಚಿತ್ತಿಗೆ
ಊನ ಶತಗುಣ ಕಾಲನೇಮಿಯು ಕಂಸನೆನಿಸಿದನೂ || ೧೨ ||

ಕಾಲನೇಮಿಗೆ ಪಂಚಗುಣದಿಂ
ಕೀಳು ಮಧು ಕೈಟಭರು ಜನ್ಮಾದಿ
ಶಾಳಿ ಇಲ್ವಲ ಷೋಡಶ ಪಂಚವಿಂಶತಿಕಾಷ್ಟ್ವಯಮಿ ಕರೆಸಿದರೂ ||
ಐಳನಾಮಕ ವಿಪ್ರಚಿತ್ತಿ ಸ -
ಮಾಳುವೆನಿಪ ಹಿರಣ್ಯಕಶ್ಯಪು
ಶೂಲ ಪಾಣಿಯ ಭಕ್ತ ನರಕಗೆ ಶತಗುಣಾಧಮನು || ೧೩ ||

ಗುಣಗಳತ್ರಯ ನೀಚನೆನಿಸುವ
ಕನಕ ಕಶಿಪುಗೆ ಹಾಟಕಾಂಬಕ -
ಗೆಣೆಯೆನಿಪ ಮಣಿಮಂತಗಿಂದಲಿ ಕಿರುಚಿದನು ಬಕ ||
ದನುಜವರ ತಾರಕನು ವಿಂಶತಿ
ಗುಣದಿ ನೀಚನು ಲೋಕಕಂಟಕ
ನೆನಿಪ ಶಂಬರ ತಾರಕಾಸುರಗಧಮ ಷಡ್ಗುಣದಿ || ೧೪ ||

ಸರಿಯೆನಿಸುವನು ಸಾಲ್ವನಿಗೆ ಶಂ -
ಕರನಿಗಧಮನು ದಶಗುಣದಿ ಶಂ -
ಬರಗೆ ಷಡ್ಗುಣನೀಚನೆನಿಪ ಹಿಡಿಂಬಕಾ ಬಾಣಾ ||
ಸುರನು ದ್ವಾಪರ ಕೀಚಕನು ನಾ -
ಲ್ವರು ಸಮರು ದ್ವಾಪರನೆ ಶಕುನಿ
ಕರೆಸಿದನು ಕೌರವಗೆ ಸೋದರ ಮಾವನಹುದೆಂದು || ೧೫ ||

ನಮುಚಿ ಇಲ್ವಲ ಪಾಕ ನಾಮಕ
ಸಮರು ಬಾಣಾದ್ಯರಿಗೆ ದಶಗುಣ
ನಮುಚಿ ನೀಚನು ಹೂಹಾ ಗುಣದಿಂದಧಮ ವಾತಾಪಿ ||
ಕುಮತಿ ಧೇನುಕ ನೂರುಗುಣದಿಂ
ದಮರರಿಪು ವಾತಾಪಿಗಧಮನು
ಯಮುನ ಧೇನುಕನಿಂದಲರ್ಧ ಗುಣಾಧಮನು ಕೇಶೀ || ೧೬ ||

ಮತ್ತೆ ಕೇಶೀನಾಮಕ ತೃಣಾ -
ವರ್ತ ಸಮ ಲವಣಾಸುರನು ಒಂ -
ಧತ್ತು ನೀಚಾರಿಷ್ಟ ನಾಮಕ ಪಂಚಗುಣದಿಂದ ||
ದೈತ್ಯ ಸತ್ತಮ ಹಂಸ ಡಿಭಿಕ ಪ್ರ -
ಮತ್ತ ವೇನನು ಪೌಂಡ್ರಕನು ಒಂ -
ಭತ್ತು ಗುಣದಿಂದಧಮ ಮೂವರು ಲವಣನಾಮಕಗೆ || ೧೭ ||

ಈಶನೇ ನಾನೆಂಬ ಖಳ ದು -
ಶ್ಯಾಸನಾ ವೃಷಸೇನ ದೈತ್ಯಾ -
ಗ್ರೇಸರ ಜರಾಸಂಧ ಸಮಪಾಪಿಗಳೊಳತ್ಯಧಿಕ ||
ಕಂಸ ಕೂಪ ವಿಕರ್ಣಸರಿ ರು -
ಗ್ಮೀ ಶತಾಧಮ ರುಗ್ಮಿಗಿಂದ ಮ -
ಹಾಸುರನು ಶತಧನ್ವಿ ಕಿರ್ಮೀರರು ಶತಾಧಮ || ೧೮ ||

ಮದಿರಪಾನೀ ದೈತ್ಯಗಣದೊ -
ಳಧಮರೆನಿಪರು ಕಾಲಿಕೇಯರು
ಅಧಿಕರಿಗೆ ಸಮರಹರು ದೇವಾವೇಶ ಬಲದಿಂದ ||
ವದನ ಪಾಣೀ ಪಾದ ಶ್ರೋತ್ರೀಯು
ಉಪಸ್ಥ ಘ್ರಾಣ ಗುದ ತ್ವಗ್ರಸನ -
ಕಧಿಪ ದೈತ್ಯರು ನೀಚರೆನಿಪರು ಕಾಲಿಕೇಯರಿಗೆ || ೧೯ ||

ಜ್ಞಾನ ಕರ್ಮೇಂದ್ರಿಯಗಳಿಗೆ ಅಭಿ -
ಮಾನಿ ಕಲ್ಯಾದ್ಯಖಿಳ ದಿತಿಜರು
ಹೀನ ಕರ್ಮವ ಮಾಡಿ ಮಾಡಿಸುತಿಪರು ಸರ್ವರೊಳು ||
ವಾಣಿ ಭಾರತಿ ಕಮಲಭವ ಪವ
ಮಾನರಿವರಚ್ಚಿನ್ನ ಭಕ್ತರು
ಪ್ರಾಣ ಅಸುರಾವೇಶ ರಹಿತರು ಅಖಿಣಾತ್ಮಸಮ || ೨೦ ||

ಹುತವಹಾಕ್ಷಾದ್ಯಮರರೆಲ್ಲರು
ಯುತರ ಕಲ್ಯಾವೇಶ ವಿಧಿ ಮಾ -
ರುತ ಸರಸ್ವತಿ ಭಾರತಿಯರವತಾರದೊಳಗಿಲ್ಲ ||

ಕೃತ ಪುಟಾಂಜಲಿಯಿಂದ ತನ್ನಯ
ಪಿತನ ಸನ್ಮುಖದ ನಿಂದಾ -
ನತಿಸಿ ಬಿನ್ನೈಸಿದನು ಎನ್ನೊಳು ಕೃಪೆಯ ಮಾಡೆಂದು || ೨೧ ||

ದ್ವೇಷಿದೈತ್ಯರ ತಾರತಮ್ಯದ
ದೂಷಣೆಯು ಭೂಷಣಗಳೆನ್ನದೆ
ದೋಷವೆಂಬುವ ದ್ವೇಷಿನಿಶ್ಚಯ ವಿವರ ನೋಡಲ್ಕೆ ||
ಕ್ಲೇಶಗಳ ನೈದುವನು ಬಹುವಿಧ
ಸಂಶಯವು ಬಡಸಲ್ಲ ವೇದ -
ವ್ಯಾಸ ಗರುಡ ಪುರಾಣದಲಿ ಪೇಳಿದನು ಋಷಿಗಳಿಗೆ || ೨೨ ||

ಜಾಲಿನೆಗ್ಗಿಲು ಕ್ಷುದ್ರಶಿಲೆ ಬರಿ -
ಗಾಲ ಪುರುಷನ ಬಾಧಿಪವು ಚೆ -
ಮ್ಮೊಳಗೆಯ ಮೆಟ್ಟಿದವಗುಂಟೆ ಕಂಟಕಗಳ ಭಯವು ||
ಚೇಳು ಸರ್ಪವ ಕೊಂದವಾರ್ತೆಯ
ಕೇಳಿಮೋದಿಪಗಿಲ್ಲವಘ ಯಮ -
ನಾಳುಗಳ ಭಯವಿಲ್ಲ ದೈತ್ಯರ ನಿಂದಿಸುವ ನರಗೆ || ೨೩ |

ಪುಣ್ಯಕರ್ಮವ ಪುಷ್ಕರಾದಿ ಹಿ
ರಣ್ಯಗರ್ಭಾಂತರ್ಗತ ಬ್ರ
ಹ್ಮಣ್ಯ ದೇವನಿಗರ್ಪಿಸುತಲಿರು ಪಾಪಕರ್ಮಗಳ ||
ಜನ್ಯ ದುಃಖವ ಕಲಿಮುಖಾದ್ಯರಿ
ಗುಣ್ಣಲೀವನು ಸಕಲ ಲೋಕ ಶ
ರಣ್ಯ ಶಾಶ್ವತ ಮಿತ್ರಜನರಿಗೆ ಮಿಶ್ರಫಲವೀವ || ೨೪ ||

ತ್ರಿವಿಧಗುಣಗಳಭಿಮಾನಿ ಶ್ರೀ ಭಾ
ರ್ಗವಿರಮಣ ಗುಣಗುಣಗಳೊಳವ -
ರವರ ಯೋಗ್ಯತೆ ಕರ್ಮಗಳನನುಸರಿಸಿ ಕರ್ಮಫಲ ||
ಸ್ವವಶರಾದಮರಾಸುರರ ಗಣ -
ಕವಧಿಯಿಲ್ಲದೆ ಕೊಡುವ ದೇವ
ಪ್ರವರವರ ಜಗನ್ನಾಥ ವಿಠ್ಠಲ ವಿಶ್ವವ್ಯಾಪಕನು || ೨೫ ||

# ೩೧ ನೈವೇದ್ಯ ಪ್ರಕರಣ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಲೆಕ್ಕಿಸದೆ ಲಕುಮಿಯನು ಬೊಮ್ಮನ
ಪೊಕ್ಕಳಿಂದಲಿ ಪಡೆದ ಪೊಸ ಪೊಂ -
ಬಕ್ಕಿದೇರನು ಪಡದಪಯುವಗಳಿಂದ ದಿವಿಜರನು ||
ಮಕ್ಕಳಂದದಿ ಪೊರೆವ ಸರ್ವದ
ರಕ್ಕಸಾಂತಕ ರಣದೊಳಗೆ ನಿ -
ರ್ದುಃಖಿ ಸುಖಿ ಮಯ ಕಾಯ್ವ ಪಾರ್ಥನ ಸೂತನೆಂದೆನಿಸಿ || ೧ ||

ದೋಷಗಂಧ ವಿದೂರ ನಾನಾ
ವೇಷಧಾರಿ ವಿಚಿತ್ರ ಕರ್ಮ -
ನೀಷ ಮಾಯಾರಮಣ ಮಧ್ವಾಂತಃಕರಣರೂಢಾ ||
ಶೇಷಶಾಯಿ ಕೌಸ್ತುಭ -
ಭೂಷಣಾಸುಕಂಧರ ಸದಾ ಸಂ
ತೋಷ ಬಲ ಸೌಂದರ್ಯಸಾರನ ಮಹಿಮೆಗೇನೆಂಬೆ || ೨ ||

ಸಾಶನಾನಶನೇ ಅಭಿ ಎಂ -
ಬೀ ಶೃತಿ ಪ್ರತಿಪಾದ್ಯನೆನಿಸುವ
ಕೇಶವನ ರೂಪದ್ವಯವ ಚಿದ್ದೇಹದೊಳಹೊರಗೆ ||
ಬೇಸರದೆ ಸದ್ಭಕ್ತಿಯಿಂದಲಿ ಉ -
ಪಾಸನೆಯಗೈಯುತ ಬುಧರು ಹು -
ತಾಶನನವೋಲಿಪ್ಪನೆಂದನವರತ ತುತಿಸುತಿರು || ೩ ||

ಸಕಲ ಸದ್ಗುಣ ಪೂರ್ಣ ಜನ್ಮಾ -
ದ್ಯಖಿಳ ದೋಷವಿದೂರ ಪ್ರಕಟಾ -
ಪ್ರಕಟ ಸದ್ವ್ಯಾಪಾರಿ ಗತಸಂಸಾರಿ ಕಂಸಾರಿ ||
ನಕುಲ ನಾನಾರೂಪ ನೀಯಾ -
ಮಕ ನಿಯಮ್ಯ ನಿರಾಮಯ ರವಿ
ಪ್ರಕರಸನ್ನಿಭ ಪ್ರಭು ಸದಾ ಮಾಂಪಾಹಿ ಪರಮಾಪ್ತ || ೪ ||

ಚೇತನಾಚೇತನ ಜಗತ್ತಿನೊ -
ಳಾತತನು ತಾನಾಗಿ ಲಕ್ಷ್ಮೀ
ನಾಥ ಸರ್ವರೊಳಿಪ್ಪ ತತ್ತದ್ರೂಪಗಳ ಧರಿಸಿ ||
ಜಾತಿಕಾರನ ತೆರೆದಿ ಎಲ್ಲರ
ಮಾತಿನೊಳಗಿದ್ದಖಿಳ ಕರ್ಮವ
ತಾ ತಿಳಿಸಿ ಕೊಳ್ಳದಲೆ ಮಾಡಿಸಿ ನೋಡಿನಗುತಿಪ್ಪ || ೫ ||

ವೀತಭಯ ವಿಜ್ಞಾನದಾಯಕ
ಭೂತಭವ್ಯ ಭವತ್ಪ್ರಭು ಖಳಾ -
ರಾತಿ ಖಗವರವಹನ ಕಮಲಾ ಕಾಂತ ನಿಶ್ಚಿಂತ ||
ಮಾತರಿಶ್ವಪ್ರಿಯ ಪುರಾತನ
ಪೂತನಾ ಪ್ರಾಣಾಪಹಾರಿ ವಿ -
ಧಾತ ಜನಕ ವಿಪಶ್ಚಿತ ಪ್ರಿಯ ಸಲಹು ಸಲಹೆಮ್ಮ || ೬ ||

ದುಷ್ಟಜನ ಸಾಂಹಾರಿ ಸರ್ವೋ
ತ್ಕೃಷ್ಟ ಮಹಿಮ ಸಮೀರನುತ ಸಕ -
ಲೇಷ್ಟದಾಯಕ ಸ್ವರತ ಸುಖಮಯ ಮಮ ಕುಲಸ್ವಾಮಿ ||
ಹೃಷ್ಟ ಪುಷ್ಟ ಕನಿಷ್ಟ ಸೃಷ್ಟ್ಯಾ -
ದ್ಯಷ್ಟಕರ್ತೃ ಕರೀಂದ್ರವರದ ಯ
ಥೇಷ್ಟದನು ಉನ್ನತಸುಕರ್ಮಾ ನಮಿಪೆ ನನವರತ || ೭ ||

ಪಾಕಶಾಸನ ಪೂಜ್ಯ ಚರಣ ಪಿ -
ನಾಕಿ ಸನ್ನುತ ಮಹಿಮ ಸೀತಾ
ಶೋಕನಾಶನ ಸುಲಭ ಸುಮುಖ ಸುಪರ್ಣ ವರ್ಣನಿಭ ||
ಮಾಕಳತ್ರ ಮನೀಷಿ ಮಧುರಿಪು
ಏಕಮೇವಾ ದ್ವಿತೀಯರೂಪ ಪ್ರ
ತೀಕ ದೇವಗಣಾಂತರಾತ್ಮಕ ಪಾಲಿಸುವುದೆಮ್ಮ || ೮ ||

ಅಪ್ರಮೇಯಾನಂತರೂಪ ಸ -
ದಾ ಪ್ರಸನ್ನ ಮುಖಾಬ್ಜ ಮುಕ್ತಿ ಸು
ಖ ಪ್ರದಾಯಕ ಸುಮನಸಾರಾಧಿತ ಪದಾಂಭೋಜ ||

ಸ್ವಪ್ರಕಾಶ ಸ್ವತಂತ್ರ ಸರ್ವಗ -
ಕ್ಷಿಪ್ರ ಫಲದಾಯಕ ಕ್ಷಿತೀಶ ಯ -
ದುಪ್ರವೀರ ವಿತರ್ಕ ವಿಶ್ವ ಸುತೈಜಸ ಪ್ರಾಜ್ಞ || ೯ ||

ಗಾಳಿ ನಡೆವಂದದಲಿ ನೀಲ ಘ -
ನಾಳಿ ವರ್ತಿಸುವಂತೆ ಬ್ರಹ್ಮ ಶ್ರೀ
ಶೂಲಧರ ಶಕ್ರಾರ್ಕ ಮೊದಲಾದಖಿಳ ದೇವಗಣ ||
ಕಾಲ ಕರ್ಮ ಗುಣಾಭಿಮಾನಿ ಮ -
ಹಾಲಕುಮಿಯನುಸರಿಸಿ ನಡೆವಳು
ಮೂಲಕಾರಣ ಮುಕ್ತಿದಾಯಕ ಹರಿಯೆನಿಸಿಕೊಂಬ || ೧೦ ||

ಮೋಡ ಕೈಬೀಸಣಿಕೆಯಿಂದದಲಿ
ಓಡಿಸುವೆನೆಂಬುವನ ಯತ್ನವು
ಕೂಡುವದೆ ಕಲ್ಪಾಂತಕಾದರು ಲಕ್ಷ್ಮೀವಲ್ಲಭನು ||
ಜೋಡುರ್ಕುವ ಜೀವರೊಳು ತಾ -
ಮಾಡಿ ಮಾಡಿಸಿ ಫಲಗಳುಣಿಸುವ
ಪ್ರೌಢರಾದವರಿವನ ಭಜಿಸಿ ಭವಾಬ್ಧಿದಾಟುವರು || ೧೧ ||

ಕ್ಲೇಶ ಮೋಹಾಜ್ಞಾನ ದೋಷ ವಿ -
ನಾಶಕ ವಿರಿಂಚಾಂಡದೊಳಗಾ -
ಕಾಶದೋಪಾದಿಯಲಿ ತುಂಬಿಹನೆಲ್ಲ ಕಾಲದಲಿ ||
ಘಾಸಿ ಗೊಳಿಸದೆ ತನ್ನವರನಾ -
ಯಾಸವಿಲ್ಲದೆ ರಕ್ಷಿಸುವ ಮಹಾಕರು
ಣಾಸಮುದ್ರ ಪ್ರಸನ್ನವದನಾಂಭೋಜ ವೈರಾಜ || ೧೨ ||

ಕನ್ನಡಿಯ ಕೈಪಿಡಿದು ನೋಳ್ಪನ
ಕಣ್ಣುಗಳು ಕಂಡಲ್ಲಿ ಎರಗವೆ
ತನ್ನವೋಲ್ ಪ್ರತಿಬಿಂಬ ಕಾಂಬುವ ದರ್ಪಣವ ಬಿಟ್ಟು ||
ಧನ್ಯರಿಳೆಯೊಳಗೆಲ್ಲ ಕಡೆಯಲಿ
ನಿನ್ನರೂಪವ ನೋಡಿ ಸುಖಿಸುತ
ಸನ್ಮತಿಸುತಾನಂದವಾರುಧಿಯೊಳಗೆ ಮುಳುಗಿಹರು || ೧೩ ||

ಅನ್ನಮಾನಿ ಶಶಾಂಕದೊಳು ಕಾ -
ರುಣ್ಯಸಾಗರ ಕೇಶವನು ಪರ -
ಮಾನ್ನದೊಳು ಭಾರತಿಯು ನಾರಾಯಣನು ಭಕ್ಷದೊಳು ||
ಸೊನ್ನಗದಿರನು ಮಾಧವನು ಶ್ರುತಿ
ಸನ್ನುತ ಶ್ರೀ ಲಕ್ಷ್ಮೀ ಘೃತದೊಳು
ಮಾನ್ಯ ಗೋವಿಂದಾಭಿದನು ಇರುತಿಪ್ಪನೆಂದೆಂದು || ೧೪ ||

ಕ್ಷೀರಮಾನಿ ಸರಸ್ವತೀ ಜಗ -
ತ್ಸಾರ ವಿಷ್ಣುವ ಚಿಂತಿಸುವದು ಸ -
ರೋರುಹಾಸನ ಮಂಡಿಗೆಯೊಳಿರುತಿಪ್ಪ ಮಧುವೈರಿ ||
ಮಾರುತನು ನವನೀತದೊಳು ಸಂ -
ಪ್ರೇರಕ ತ್ರಿವಿಕ್ರಮನು ದಧಿಯೊಳು
ವಾರಿನಿಧಿ ಚಂದ್ರಮರೊಳಗೆ ಇರುತಿಪ್ಪ ವಾಮನನು || ೧೫ ||

ಗರುಡ ಸೂಪಕೆ ಮಾನಿ ಶ್ರೀ ಶ್ರೀ -
ಧರನು ದೇವನು ಪತ್ರಶಾಕಕೆ
ವರನೆನಿಪ ಮಿತ್ರಾಖ್ಯ ಸೂರ್ಯ ಹೃಷಿಕಪನ ಮೂರ್ತಿ ||
ಉರಗರಾಜನು ಫಲ ಸುಶಾಕಕೆ
ವರನೆನಿಸುವನು ಪದ್ಮನಾಭನ
ಸ್ಮರಿಸಿ ಭುಂಜಿಸುತಿಹರು ಬಲ್ಲವರೆಲ್ಲ ಕಾಲದಲಿ || ೧೬ ||

ಗೌರಿ ಸರ್ವಾಮ್ಲಸ್ಥಳೆನಿಪಳು
ಶೌರಿ ದಾಮೋದರನ ತಿಳಿವುದು
ಗೌರಿಪಾನಾಮ್ಲಸ್ಥ ಸಂಕರ್ಷಣನ ಚಿಂತಿಪುದು ||
ಸಾರ ಶರ್ಕರ ಗುಡದೊಳಗೆ ವೃ -
ತ್ರಾರಿ ಇರುತಿಹ ವಾಸುದೇವನ
ಸೂರಿಗಳು ಧೇನಿಪರು ಪರಮಾದರದಿ ಸರ್ವತ್ರ || ೧೭ ||

ಸ್ಮರಿಸುವಾಚಸ್ಪತಿಯು ಸೋಪ -
ಸ್ಕರ ದೊಳಗೆ ಪ್ರದ್ಯುಮ್ನನಿಪ್ಪನು

ಶರಪಪ ಶ್ರೀ ರಾಮತೇಳದಿ
ಸ್ಮರನ ಶ್ರೀ ಪುರುಷೋತ್ತಮನು ಕ -
ರ್ಪೂರದಿ ಚಿಂತಿಸಿ ಪೂಜಿಸುತಲಿರು ಪರಮ ಭಕುತಿಯಲಿ || ೧೮ ||

ನಾಲಿಗಿಂದಲಿ ಸ್ವಿಕರಿಪ ರಸ
ಪಾಲು ಮೊದಲಾದದರೊಳಗೆ ಘೃತ
ತೈಲ ಪಕ್ವಪದಾರ್ಥದೊಳಗಿಹ ಚಂದ್ರನಂದನನ ||
ಪಾಲಿಸುವದೋಕ್ಷಜನ ಚಿಂತಿಸು
ಸ್ಥೂಲ ಕೂಷ್ಮಾಂಡ ತಿಲ ಮಾಷಜ
ಲಲಿತ ಭಕ್ಷದೊಳು ದಕ್ಷನು ಲಕ್ಷ್ಮೀನರಸಿಂಹ || ೧೯ ||

ಮನುವು ಮಾಷ ಸುಭಕ್ಷದೊಳು ಚಿಂ -
ತನೆಯ ಮಾಡಚ್ಯುತನ ನಿರಋತಿ
ಮನೆ ಎನಿಪ ಲವಣದೊಳು ಮರೆಯದೆ ಶ್ರೀ ಜನಾರ್ದನನ ||
ನೆನೆವುತಿರು ಫಲರಸಗಳೊಳು ಪ್ರಾ
ಣನನುಪೇಂದ್ರನ ವೀಳೆದೆಲೆಯೊಳು
ದ್ಯುನದಿ ಹರಿರೂಪವನೆ ಕೊಂಡಾಡುತಲೆ ಸುಖಿಸುತಿರು. || ೨೦ ||

ವೇದವಿನುತಗೆ ಬುಧನು ಸುಸ್ವಾ
ದೋದಕಾಧಿಪನೆನಿಸಿಕೊಂಬನು
ಶ್ರೀದ ಕೃಷ್ಣನ ತಿಳಿದು ಪೂಜಿಸುತಿರು ನಿರಂತರದಿ ||
ಸಾಧು ಕರ್ಮಪ ಪುಷ್ಕರನು ಸುನಿ -
ವೇದಿತ ಪದಾರ್ಥಗಳ ಶುದ್ಧಿಯ -
ಗೈದು ಗೈಸುತ ಹಂಸನಾಮಕಗರ್ಪಿಸುತಲಿಪ್ಪ || ೨೧ ||

ರತಿ ಸಕಲ ಸುಸ್ವಾದು ರಸಗಳ
ಪತಿ ಎನಿಸುವಳಲ್ಲಿ ವಿಶ್ವನು
ಹುತವಹನ ಚೂಲಿಗಳೊಳಗೆ ಭಾರ್ಗವನ ಚಿಂತಿಪುದು ||
ಕ್ಷಿತಿಜ ಗೋಮಯಜಾದಿಯೊಳು ಸಂ -
ಸ್ಥಿತ ವಸಂತನ ಋಷಭದೇವನ
ತುತಿಸುತಿರು ಸಂತತ ಸದಾ ಸದ್ಭಕ್ತಿ ಪೂರ್ವಕದಿ || ೨೨ ||

ಪಾಕಕರ್ತೃಗಳೊಳು ಚತುರ್ದಶ
ಲೋಕಮಾತೆ ಮಹಾಲಕುಮಿ ಗತ
ಶೋಕವಿಶ್ವಂಭರನ ತಿಳಿವುದು ಎಲ್ಲ ಕಾಲದಲಿ ||
ಚೌಕಶುದ್ಧಿ ಸುಮಂಡಲದಿ ಭೂ
ಸೂಕರಾಹ್ವಯ ಉಪರಿ ಚೈಲಪ
ಏಕದಂತ ಸನತ್ಕುಮಾರನ ಧೇನಿಪುದು ಬುಧರು || ೨೩ ||

ಶ್ರೀನಿವಾಸನ ಭೋಗ್ಯವಸ್ತುವ
ಕಾಣಗೊಡದಂದದಲಿ ವಿಶ್ವ -
ಕ್ಸೇನ ಪರಿಖಾರೂಪನಾಗಿಹನಲ್ಲಿ ಪುರುಷಾಖ್ಯಾ ||
ತಾನೆ ಪೂಜಕ ಪೂಜ್ಯನೆನಿಸಿ ನಿ -
ಜಾನುಗರ ಸಂತೈಪ ಗುರುಪವ -
ಮಾನವಂದಿತ ಸರ್ವಕಾಲಗಳಲ್ಲಿ ಸರ್ವೇಶ || ೨೪ ||

ನೂತನ ಸಮೀಚೀನ ಸುರ ಸೊ -
ಪೇತ ಹೃದ್ಯ ಪದಾರ್ಥದೊಳು ವಿಧಿ
ಮಾತೆ ತತ್ತದ್ರಸಗಳೊಳು ರಸರೂಪ ತಾನಾಗಿ ||
ಪ್ರೀತಿ ಬಡಿಸುತ ನಿತ್ಯದಲಿ ಜಗ
ನ್ನಾಥವಿಠ್ಠಲನ ಕೂಡಿ ತಾ ನಿ -
ರ್ಭೀತಳಾಗಿಹಳೆಂದರಿದು ನೀ ಭಜಿಸಿ ಸುಖಿಸುತಿರು || ೨೫ ||

## ೩.೨ ದೇವತಾ ತಾರತಮ್ಯ ಸ್ತೋತ್ರ ಸಂಧಿ

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಶ್ರೀರಮಣ ಸರ್ವೇಶ ಸರ್ವಗ
ಸಾರ ಭೋಕ್ತ ಸ್ವತಂತ್ರ ದೋಷ ವಿ -
ದೂರ ಜ್ಞಾನಾನಂದ ಬಲ ಐಶ್ವರ್ಯ ಗುಣಪೂರ್ಣ ||

ಮೂರುಗುಣ ವರ್ಜಿತ ಸಗುಣ ಸಾ -
ಕಾರ ವಿಶ್ವ ಸ್ಥಿತಿ ಲಯೋದಯ
ಕಾರುಣ ಕೃಪಾಸಾಂದ್ರ ನರಹರೇ ಸಲಹೋ ಸಜ್ಜನರ || ೧ ||

ನಿತ್ಯ ಮುಕ್ತಳೆ ನಿರ್ವಿಕಾರಳೆ
ನಿತ್ಯ ಸುಖ ಸಂಪೂರ್ಣೆ ನಿತ್ಯಾ
ನಿತ್ಯಜಗದಾಧಾರ ಮುಕ್ತಾ ಮುಕ್ತ ಗುಣವಿನುತೆ ||
ಚಿತ್ತೈಸು ಭಿನ್ನಪವ ಶ್ರೀ ಪುರು -
ಷೋತ್ತಮ ವಕ್ಷೋನಿವಾಸಿನಿ
ಭೃತ್ಯವತ್ಸಲೆ ಕಾಯೆ ತಿಜಗನ್ಮಾತೆ ವಿಖ್ಯಾತೆ || ೨ ||

ರೋಮಕೂಪಗಳೊಳಗೆ ಪೃಥಕ್ಪೃಥ -
ಗಾ ಮಹಾಪುರುಷನ ಸುಮೂರ್ತಿಯು
ತಾಮರಸಜಾಂಡಗಳ ತದ್ಗತ ವಿಶ್ವರೂಪಗಳ ||
ಶ್ರೀ ಮಹಿಳೆ ಸುರೂಪ ಗುಣಗಳ
ಸೀಮೆಗಾಣದೆ ಯೋಚಿಸುತ ಮಮ
ಸ್ವಾಮಿ ಮಹಿಮೆಯದೆಂತುಟೆಂದಡಿಗಡಿಗೆ ಬೆರಗಾದ || ೩ ||

ಒಂದಜಾಂಡದೊಳೊಂದು ರೂಪ ದೊ -
ಳೊಂದವಯವದೊಳೊಂದು ನಖದೊಳ
ಗೊಂದು ಗುಣಗಳ ಪಾರಗಾಣದೆ ಕೃತಪುಟಾಂಜಲಿಯೂ ||
ಮಂದಜಾಸನ ಪುಳಕ ಪುಳಕಾ
ನಂದ ಬಾಷ್ಪತೊದಲುನುಡಿಗಳಿಂ -
ದಿಂದಿರಾವಲ್ಲಭನ ಮಹಿಮೆ ಗಭೀರ ತರವೆಂದ || ೪ ||

ಏನು ಧನ್ಯರೊ ಬ್ರಹ್ಮಗುರು ಪವ -
ಮಾನರೀರ್ವರು ಈ ಪರಿಯಲಿ ರ -
ಮಾನಿವಾಸನ ವಿಮಲಲಾವಣ್ಯಾತಿಶಯಗಳನು ||
ಸಾನುರಾಗದಿ ನೋಡಿ ಸುಖಿಪ ಮ -
ಹಾನುಭಾವರ ಭಾಗ್ಯವೆಂತೋ ಭ -
ಹಾನಿದವನಿಗಸಾದ ವೆನಿಸಲು ಸಗಸ [illegible] || ೫ ||

ಆಪಿತಾಮಹ ನೂರು ಕಲ್ಪ ರ -
ಮಾಪತಿಯ ಗುಣಜಪಿಸಿ ಒಲಿಸಿ ಮ -
ಹಾ ಪರಾಕ್ರಮ ಹನುಮ ಭೀಮಾನಂದ ಮುನಿಯೆನಿಸಿ ||
ಆ ಪದ ಬ್ರಹ್ಮನ ಸುನಾಭೀ
ಕೂಪಸಂಭವ ನಾಮದಲಿ ಮೆರೆ -
ವಾ ಪಯೋಜಾಸನ ಸಮೀರರಿಗಭಿನಮಿಪೆ ಸತತ || ೬ ||

ವಾಸುದೇವನ ಮೂರ್ತಿ ಹೃದಯಾ -
ಕಾಶ ಮಂಡಲ ಮಧ್ಯದಲಿ ತಾ -
ರೇಶನಂದದಲಿ ಕಾಣುತತಿ ಸಂತೋಷದಲಿ ತುತಿಪ ||
ಆ ಸರಸ್ವತಿ ಭಾರತೀಯರಿಗೆ
ನಾ ಸತತ ವಂದಿಸುವೆ ಪರಮೋ -
ಲ್ಲಾಸದಲಿ ಸುಜ್ಞಾನ ಭಕುತಿಯ ಸಲಿಸಲೆಮಗೆಂದು || ೭ ||

ಜಗದುದರನ ಸುರೋತ್ತಮನ ನಿಜ
ಪೆಗಲೊಳಾಂತು ಕರಾಬ್ಜದೊಳ್ಪದ
ಯುಗಧರಿಸಿ ನಖ ಪಂಕ್ತಿಯೊಳು ರಮಣೀಯ ತರವಾದ ||
ನಗಧರನ ಪ್ರತಿಬಿಂಬ ಕಾಣುತ
ಮಿಗೆ ಹರುಷದಿಂ ಪೊಗಳುತ ಹಿಗ್ಗುವ
ಖಗ ಕುಲಾಧಿಪ ಕೊಡಲಿ ಮಂಗಳ ಸಕಲ ಸುಜನರಿಗೆ || ೮ ||

ಯೋಗಿಗಳ ಹೃದಯಕ್ಕೆ ನಿಲುಕನಿಗ
ಮಾಗಮೈಕವಿನುತನ ಪರಮನು
ರಾಗದಲಿ ದ್ವಿಸಹಸ್ರ ಜಿಹ್ವೆಗಳಿಂದ ವರ್ಣಿಸುವ ||
ಭೂಗಗನ ಪಾತಾಳ ವ್ಯಾಪ್ತನ
ಯೋಗ ನಿದ್ರಾಸ್ಪದನೆನಿಪ ಗುರು
ನಾಗರಾಜನ ಪದಕೆ ನಮಿಸುವೆ ಮನದೊಳನವರತ || ೯ ||

ನಂದಿ ವಾಹನ ನಳಿನನಿಧರ ಮೌ -
ಳೀಂದು ಶೇಖರ ಶಿವತ್ರಿಯಂಬಕ
ಅಂಧಕಾಸುರ ಮರ್ದನ ಗಜಶಾರ್ದೂಲ ಚರ್ಮಧರ ||

ಮಂದಜಾಸನ ತನಯ ತ್ರಿಜಗ
ದ್ವಂದ್ಯ ಶುದ್ಧ ಸ್ಫಟಿಕ ಸನ್ನಿಭ
ವಂದಿಸುವೆನನವರತ ಪಾಲಿಸು ಪಾರ್ವತೀರಮಣ || ೧೦ ||

ಫಣಿಪಣಾಂಚಿತ ಮುಕುಟರಂಜಿತ
ಕ್ವಣಿತಡಮರು ತ್ರಿಶೂಲ ಶಿವ ದಿನ -
ಮಣಿ ನಿಶಾಕರ ನೇತ್ರ ಪರಮ ಪವಿತ್ರ ಸುಚರಿತ್ರ ||
ಪ್ರಣತ ಕಾಮದ ಪ್ರಮಥ ಸುರಮುನಿ
ಗಣ ಸುಪ್ಪೂಜಿತ ಚರಣಯುಗ ರಾ -
ವಣ ಮದವಿಭಂಜನ ಸತತ ಮಾಂ ಪಾಹಿ ಮಹದೇವ || ೧೧ ||

ದಕ್ಷಯಜ್ಞವಿಭಂಜನನೆ ವಿರೂ
ಪಾಕ್ಷ ವೈರಾಗ್ಯಾಧಿಪತಿ ಸಂ -
ರಕ್ಷಿಸೆಮ್ಮನು ಸರ್ವಕಾಲದಿ ಸನ್ಮುದವನಿತ್ತು ||
ಯಕ್ಷಪತಿಸಖ ಯಜಪರಿಗೆ ಸುರ
ವೃಕ್ಷ ವೃಕದನುಜಾರಿ ಲೋಕಾ -
ಧ್ಯಕ್ಷ ಶುಕದೂರ್ವಾಸ ಜೈಗಿಷವ್ಯ ಸಂತೈಸು || ೧೨ ||

ಹತ್ತು ಕಲ್ಪದಿ ಲವಣ ಜಲಧಿಯೊ -
ಳುತ್ತಮ ಶ್ಲೋಕನವಲಿಸಿ ಕೃತ
ಕೃತ್ಯನಾಗಿ ಜಗತ್ಪತಿಯನೇಮದಿ ಕುಶಾಸ್ತ್ರಗಳ ||
ಬಿತ್ತರಿಸಿ ಮೋಹಿಸಿ ದುರಾತ್ಮರ
ನಿತ್ಯನಿರಮಯನಿವಾಸರೆನಿಸಿದ
ಕೃತ್ತಿವಾಸನೆ ನಮಿಪೆ ಶೇಷ ಪದಾರ್ಹನಹುದೆಂದು || ೧೩ ||

ಕಂಬು ಪಾಣಿಯ ಪರಮ ಪ್ರೇಮ ನಿ -
ತಂಬನಿಯರೆಂದೆನಿಸಿ ಲಕ್ಷಣ
ಜಾಂಬವತಿ ಕಾಳಿಂದಿ ನೀಲಾಭದ್ರ ಮಿತ್ರವಿಂದಾ ||
ಎಂಬ ಷಣ್ಮಹಿಷಿಯರ ದಿವ್ಯ ಪ -
ದಾಂಬುಜಗಳಿಗೆ ನಮಿಸುವೆ ಮಮ ಹೃದ -
ಯಾಂಬರದಿ ನೆಲಸಲಿ-ಬಿಡದೆ ತಮ್ಮರಸ ನೊಡಗೂಡಿ || ೧೪ ||

ಆಪರಂತಪನೊಲಿಮೆಯಿಂದ ಸ -
ದಾಪರೋಕ್ಷಿಗಳೆನಿಸಿ ಭಗವ -
ದ್ರೂಪಗುಣಗಳ ಮಹಿಮೆ ಸ್ವಪತಿಗಳಾನನದಿ ತಿಳಿವ ||
ಸೌಪರ್ಣಿವಾರುಣಿನಗಾತ್ಮಜ -
ರಾಪನಿತು ಬಣ್ಣಿಸುವೆ ಎನ್ನಮ -
ಹಾ ಪರಾಧಗಳೆನಿಸದೀಯಲಿ ಪರಮ ಮಂಗಳವ || ೧೫ ||

ತ್ರಿದಿವತರುಮಣಿಧೇನು ಗಳಿಗಾ
ಸ್ಪದನೆನಿಪ ತ್ರಿದಶಾಲಯಾಬ್ಧಿಗೆ
ಬದರನಂದದಲೊಪ್ಪುತಿಪ್ಪ ಉಪೇಂದ್ರ. ಚಂದ್ರಮನ ||
ಮೃದು ಮಧುರ ಸುಸ್ತವನದಿಂದಲಿ
ಮಧು ಸಮಯ ಪಿಕನಂತೆ ಪಾಡುವ
ಮುಧಿರ ವಾಹನ ನಂಘ್ರಿಯುಗ್ಮಂಗಳಿಗೆ ನಮಿಸುವೆನು || ೧೬ ||

ಕೃತಿರಮಣ ಪ್ರದ್ಯುಮ್ನ ದೇವನ
ಅತುಳಬಲ ಲಾವಣ್ಯಗುಣ ಸಂ -
ತತ ಉಪಾಸನೆ ಕೇತುಮಾಲಾ ಖಂಡದೊಳು ರಚಿಪಾ ||
ರತಿಮನೋಹರ ನಂಘ್ರಿಕಮಲಕೆ
ನುತಿಸುವೆನು ಭಕುತಿಯಲಿ ಮಮ ದು -
ರ್ಮತಿಯ ಕಳೆದು ಸನ್ಮತಿಯ ನೀಯಲಜಸ್ರನಮಗೊಲಿದು || ೧೭ ||

ಚಾರುತರ ನವವಿಧ ಭಕುತಿ ಗಂ -
ಭೀರ ವಾರಾಸಿಯೊಳು ಪರಮೋ -
ದಾರ ಮಹಿಮನ ಹೃದಯ ಫಣಿಪತಿ ಪೀಠದಲಿ ಭಜಿಪ ||
ಭೂರಿ ಕರ್ಮಾಕರನೆನಿಸುವ ಶ -
ರೀರಮಾನಿ ಪ್ರಾಣ ಪತಿಪದ
ವಾರಿರುಹ ಕಾನಮಿಪೆ ಮದ್ಗುರುರಾಯನಹುದೆಂದು || ೧೮ ||

ವಿತತ ಮಹಿಮನ ವಿಶ್ವತೋಮುಖ
ನತುಳ ಭುಜಬಲ ಕಲ್ಪತರುವಾ -
ಶ್ರಿತರೆನಿಸಿ ಸಕಲೇಷ್ಟ ಪಡೆದನುದಿನದಿ ಮೋದಿಸುವ ||

ರತಿ ಸ್ವಾಯಂಭುವ ದಕ್ಷ ವಾಚ -
ಸ್ಪತಿ ಬಿಡೌಜನ ಮಡದಿ ಶಚಿ ಮ -
ನ್ಮಥ ಕುಮಾರನಿರುದ್ಧರೆಮಗೀಯಲಿ ಸುಮಂಗಳವಾ || ೧೯ ||

ಭವವನಧಿ ನವ ಪ್ರೋತ ಪುಣ್ಯ
ಶ್ರವಣ ಕೀರ್ತನ ಪಾದವ ನರುಹ
ಭವನನಾವಿಕನಾಗಿ ಭಜಕರ ತಾರಿಸುವ ಬಿಡದೆ ||
ಪ್ರವಹ ಮಾರುತದೇವ ಪರಮೋ
ತ್ಸವ ವಿಶೇಷ ನಿರಂತರ ಮಹಾ
ಪ್ರವಹದಂದದಿ ಕೊಡಲಿ ಭಗವದ್ಭಕ್ತ ಸಂತತಿಗೆ || ೨೦ ||

ಜನರನುದ್ಧರಿಸುವೆನೆನುತ ನಿಜ
ಜನಕನನುಮತದಲ್ಲಿ ಸ್ವಯಂಭುವ
ಮನುವಿನಿಂದಲಿ ಪಡೆದ ಸುಕುಮಾರಕರನೊಲಿಮೆಯಲಿ ||
ಜನನಿಶತರೂಪಾನಿತಂಬಿನಿ
ಮನವಚನಕಾಯದಲಿ ಬಿಡದನು
ದಿನನಮಿಸುವೆನು ಕೊಡು ಎಮಗೆ ಸನ್ಮಂಗಳವನೊಲಿಮೆ || ೨೧ ||

ನರ ನಾರಾಯಣನ ಪರಿ ಕೃ -
ಷ್ಣರ ಪಡದೆ ಪುರುಷಾರ್ಥ ತೆರವಲಿ
ತರಣ ಶಶಿ ಶತರೂಪರಿಗೆ ಸಮನೆನಿಸಿ ಪಾಪಿಗಳ ||
ನಿರಯದೊಳು ನೆಲೆಗೊಳಿಸಿ ಸಜ್ಜನ
ನೆರವಿಯನು ಪಾಲಿಸುವ ಔದುಂ -
ಬರ ಸಲಹು ಸಲಹೆಮ್ಮ ಬಿಡದಲೆ ಪರಮ ಕರುಣದಲಿ || ೨೨ ||

ಮಧುವಿರೋಧಿ ಮನೋಜಕ್ಷೀರೋ
ದಧಿ ಮಥನ ಸಮಯದಲುದಿಸಿ ನೆರೆ -
ಕುದರಜಾವಲ್ಲಭನ ಮಸ್ತಕ ಮಂದಿರದಿ ಮೆರೆವೆ ||
ವಿಧುತ ಪಾಂಘ್ರಿ ಪಯೋಜಯುಗಳಕೆ
ಮಧುಪನಂದದಲೆರಗಲೆನ್ನ ಮನ -
[illegible] || ೨೩ ||

ಶ್ರೀವನರುಹಾಂಬಕನ ನೇತ್ರಗ -
ಳೀಮನೆಯೆನಿಸಿ ಸಜ್ಜನರಿಗೆ ಕ -
ರಾವಲಂಬನವೀವ ತೆರದಿ ಮಯೂಖ ವಿಸ್ತರಿಪ ||
ಆ ವಿವಸ್ವಾನೆಂದೆನಿಸುವ ವಿ -
ಭಾವಸು ಹರ್ನಿಶಿಗಳಲಿ ಕೊಡ -
ಲೀ ವಸುಂಧರೆಯೊಳು ವಿಪಶ್ಚಿತರೊಡನೆ ಸುಜ್ಞಾನ || ೨೪ ||

ಲೋಕಮಾತೆಯ ಪಡೆದು ನೀ ಜಗ -
ದೇಕ ಪಾತ್ರನಿಗಿತ್ತ ಕಾರಣ
ಶ್ರೀ ಕುಮಾರಿ ಸಮೇತ ನೆಲಸಿದ ನಿನ್ನ ಮಂದಿರದಿ ||
ಆ ಕಮಲಭವಮುಖರು ಬಿಡದೆ ಪ -
ರಾಕೆನುತನಿಂದಿಹರು ಗುಣ ರ -
ತ್ನಾಕರನೆ ಬಣ್ಣಿಸಲಳವೆ ಕೊಡು ಎಮಗೆ ಸನ್ಮನವ || ೨೫ ||

ಫಣೆಯಲೊಪ್ಪುವ ತಿಲಕ ತುಲಸಿ
ಮಣಿಗಣಾಂಚಿತಕಂಠ ಕರದಲಿ
ಕ್ವಣಿತವೀಣಾಸುಸ್ವರದಿ ಬಹುತಾಳಗತಿಗಳಲಿ ||
ಪ್ರಣವ ಪ್ರತಿಪಾದ್ಯನ ಗುಣಂಗಳ
ಕುಣಿದು ಪಾಡುತ ಪರಮ ಸುಖ ಸಂ -
ದಣಿಯೊಳಾಡುವ ದೇವ ಋಷಿ ನಾರದರಿಗಭಿನಮಿಪೆ || ೨೬ ||

ಆ ಸರಸ್ವತಿ ತೀರದಲಿ ಬಿ -
ನ್ನೈಸಲಾ ಮುನಿಗಳನುಡಿಗೆ ಜಲ -
ಜಾಸನ ಮಹೇಶಾಚ್ಯುತರಲೋಕಂಗಳಿಗೆ ಪೋಗಿ ||
ತಾ ಸಕಲಗುಣಗಳ ವಿಚಾರಿಸೆ
ಕೇಶವನೆ ಪರದೈವನೆಂದು ಪ -
ದೇಶಿಸಿದ ಭೃಗು ಮುನಿಪ ಕೊಡಲಿಮಗಖಿಳ ಪುರುಷಾರ್ಥ || ೨೭ ||

ಬಿಸರುಹಾಂಬಕನಾಜ್ಞೆಯಲಿ ಸುಮ -
ನಸ ಮುಖನು ತಾನೆನಿಸಿ ನಾನಾ -
ರಸಗಳುಳ್ಳ ಹವಿಸ್ಸು ಗಳನವರವರಿಗೆ ಗೊಯ್ದಿವ ||

ವಸುಕುಲಾಧಿಪ ಯಜ್ಞಪುರುಷನ
ಅಸಮಬಲ ರೂಪಂಗಳಿಗೆ ವಂ -
ದಿಸುವೆ ಜ್ಞಾನ ಯಶಸ್ಸು ವಿದ್ಯಾ ಸುಬುದ್ಧಿ ಕೊಡಲೆಮಗೆ || ೨೮ ||

ತಾತನಪ್ಪಣೆಯಿಂದ ನೀ ಪ್ರ -
ಖ್ಯಾತಿಯುಳ್ಳರವತ್ತು ಮಕ್ಕಳೆ
ಪ್ರೀತಿಯಿಂದಲಿ ಪಡದಪರವರಿಗಿತ್ತು ಮನ್ನಿಸಿದೆ ||
ವೀತಿಹೋತ್ರನ ಸಮಳೆನಿಸುವ ಪ್ರ -
ಸೂತಿ ಜನನಿ ತ್ವದಂಘ್ರಿಕಮಲ
ಸಾತುತಿಸಿ ತಲೆಬಾಗುವೆ ಎಮ್ಮ ಕುಟುಂಬ ಸಲಹುವದು || ೨೯ ||

ಶತಧೃತಿಯ ಸುತರ್ಹೀರುಳಿದು -
ಪ್ರತಿಮ ಸುತಪೋನಿಧಿಗಳ ಪರಾ -
ಜಿತನಸು ಸಮಾಧಿಯೊಳೊಲಸಿ ಮೂರ್ಲೋಕದೊಳು ಮೆರೆವ ||
ವ್ರತಿವರ ಮರೀಚ್ಯತ್ರಿ ಪುಲಹ
ಕ್ರತು ವಶಿಷ್ಠ ಪುಲಸ್ತ್ಯ ವೈ -
ವಸ್ವತನು ವಿಶ್ವಾಮಿತ್ರರಂಗಿರರಂಘ್ರಿಗೆರಗುವೆನು || ೩೦ ||

ದ್ವಾದಶಾದಿತ್ಯರೊಳು ಮೊದಲಿಗ
ನಾದ ಮಿತ್ರ ಪ್ರವಹ ಮಾನಿನಿ
ಯಾದ ಪ್ರಾವಹಿ ನಿರುಋುತಿ ನಿರ್ಜರ ಗುರು ಮಹಿಳೆ ತಾರಾ ||
ಈ ದಿವೌಕಸರನು ದಿನಾಧಿ
ವ್ಯಾಧಿರುಪಟಳವಳಿದು ವಿಭುಧರಿ
ಗಾದರದಿ ಕೊಡಲಖಿಳಮಂಗಳವಾವಕಾಲದಲಿ || ೩೧ ||

ಮಾಸನಿಧಿಗಳೆನಿಸುವ ವಿಷ್ವ -
ಕ್ಸೇನ ಧನಪಾದ್ಯ ನಿಮಿಷರಿಗೆ ಸ -
ಮಾನರೆಂಭತ್ತೈದುದು ಶೇಷರತಸ್ಥ ದೇವಗಣ ||
ಅನಮಿಸುವೆನು ಬಿಡದೆ ಮಿಥ್ಯಾ
ಜ್ಞಾನ ಕಳೆದು ಸುಭೋದವಿತ್ತು ಸ -
ದಾನುರಾಗದಲೆಮ್ಮ ಪರಿಪಾಲಿಸಲಿ ಸಂಪದವ || ೩೨ ||

ಭೂತಮಾರುತ ವಾಂತರಭಿಮಾ -
ನಿ ತಪಸ್ವಿ ಮರೀಚಿಮುನಿ ಪುರು -
ಹೂತ ನಂದನ ವಾದಮನಿ ಜಯಂತರೆಮಗೊಲಿದು ||
ಕಾತರವ ಪುಟ್ಟಿಸದೆ ವಿಷಯದಿ
ವೀತಭಯನ ಪದಾಬ್ಜದಲಿ ವಿಪ -
ರೀತ ಬುದ್ಧಿಯನೀಯದೆ ಸದಾಪಾಲಿಸಲಿ ನಮ್ಮ || ೩೩ ||

ಓದಿಸುವ ಗುರುಗಳನು ಜರಿದು ಸ -
ಹೋದರರಿಗುಪದೇಶಿಸಿದ ಮಹ -
ದಾದಿಕಾರಣ ಸರ್ವಗುಣ ಸಂಪೂರ್ಣ ಹರಿಯೆಂದು ||
ವಾದಿಸುವ ತತ್ಪಿತಿಯ ತೋರೆಂ -
ದಾದನುಜ ಬೆಸಗೊಳಲು ಸ್ತಂಭದಿ
ಶ್ರೀದನಾಕ್ಷಣ ತೋರಿಸಿದ ಪ್ರಹ್ಲಾದ ಸಲಹೆಮ್ಮ || ೩೪ ||

ಬಲಿಮೊದಲು ಸಪ್ತೇಂದ್ರರಿವರಿಗೆ
ಕಲಿಕರ್ಮಜದಿವಿಜ ರೆಂಬರು
ಉಳಿದ ಏಕಾದಶಮನುಗಳು ಉಚಥ್ಯಚ್ಯವನ ಮುಖ ||
ಕುಲಋಷಿಗಳೆಂಭತ್ತು ಜೈಷಯ
ನಿಳಯಕಂಪನಸಗೈದ ಪೃಥು ಮುಂ -
ಗಳ ಪರೀಕ್ಷಿತ ನಹುಷನಾಭಿಯುಯಾತಿ ಶಶಿ ಬಿಂದು || ೩೫ ||

ಶತಕಸಂಕೇತುಳ್ಳ ಪ್ರಿಯ
ವ್ರತಭರತ ಮಾಂಧಾತ ಪುಣ್ಯ
ಶ್ರೀತರು ಜಯವಿಜಯಾದಿಗಳು ಗಂಧರ್ವರೆಂಟುಜನ ||
ಹುತವಹಜ ಪಾವಕಸನಾತನ
ಪಿತೃಗಳೇಳ್ವರು ಚಿತ್ರಗುಪ್ತರು
ಪ್ರತಿದಿವಸ ಪಾಲಿಸಲಿ ತಮ್ಮವನೆಂದು ಎಮಗೊಲಿದು || ೩೬ ||

ವಾಸವಾಲಯ ಶಿಲ್ಪಿವಿಮಲ ಜ -
ಲಾಲಯಗಳೊಳು ರಮಿಪ ಊರ್ವಶಿ
ಭೇರವಿಗಳ ರಿಪು ಗಳೆನಿಸುವ ರಾಹು ಕೇತುಗಳ ||

ಶ್ರೀಶಪದ ಪ್ರಧಾನ ಧೂಮಾ
ರ್ಚೀಶದಿವಿಜ ರುಕಮರ್ಣಜರಿಗೆ ಸ -
ದಾಸಮಾನ ದಿವೌಕಸರು ಕೊಡಲಿಮಗೆ ಮಂಗಳವ || ೩೭ ||

ದ್ಯುನದಿ ಶ್ಯಾಮಲ ಸಂಜ್ಞಾರೋಹಿಣಿ
ಧನಪ ಪರ್ಜನ್ಯಾನಿರುದ್ಧನ
ವನಿತೆ ಬ್ರಹ್ಮಾಂಡಾಭಿಮಾನಿ ವಿರಾಟ ದೇವಿಯರ ||
ನೆನೆವ ನಾನಲವಿಂದ ದೇಹಾ -
ನನ ಮಹಿಳೆ ಸ್ವಾಹಾಖ್ಯರಾಲೋ
ಚನೆಗೊಡಲಿ ನಿರ್ವಿಘ್ನದಿಂ ಭಗವದ್ಗುಣಂಗಳಲಿ || ೩೮ ||

ವಿಧಿಪಿತನ ಪಾದಾಂಭುಜಗಳಿಗೆ
ಮಧುಪನಂತೆ ವಿರಾಜಿಪಾ ಮಲ
ಉದಕಗಳಿಗೆ ಸದಾಭಿಮಾನಿ ಎಂದೆನಿಸಿಕೊಂಬ ||
ಬುಧಗೆ ನಾವಂದಿಸುವೆ ಸನ್ಮೋ -
ದದಿ ನಿರಂತರ ವಲಿದ ಎಮಗ
ಭ್ಯುದಯ ಪಾಲಿಸಲೆಂದು ಪರಮೋತ್ಸವದಲ ನುದಿನದಿ || ೩೯ ||

ಶ್ರೀ ವಿರಿಂಚಾದ್ಯರ ಮನಕೆ ನಿಲು -
ಕಾವಕಾಲಕು ಜನನರಹಿತನ
ತಾವಲಿಸಿ ಮಗನೆಂದು ಮುದ್ದಿಸಿ ಲೀಲೆಗಳ ನೋಳ್ಪ ||
ದೇವಕಿಗೆ ವಂದಿಪೆ ಯಶೋದಾ
ದೇವಿಗಾನಮಿಸುವೆನು ಬಿಡದೆ ಕೃ -
ಪಾವಲೋಕನದಿಂದ ಸಲಹುವದೆವು ಸಂತತಿಯ || ೪೦ ||

ಪಾಮರರ ಪವಿತ್ರಗೈಸುವ
ಶ್ರೀ ಮುಕುಂದನ ಪರಮಮಂಗಳ
ನಾಮಗಳಿಗೆಭಿಮಾನಿಯಾದ ಉಷಾಖ್ಯದೇವಿಯರು ||
ಭೂಮಿಯೊಳಗುಳ್ಳಖಿಳ ಸಜ್ಜನ
ರಾಮಯಾದಿಗಳಳಿದು ಸಲಹಲಿ
ಆ ಮರುತ್ತನ ಮನೆಯ ವೈದ್ಯರ ರಮಣಿ ಪ್ರತಿದಿನದಿ || ೪೧ ||

ಪುರುಟ ಲೋಚನ ನಿನ್ನ ಕದ್ದೊ -
ಯ್ದಿರಲು ಪ್ರಾರ್ಥಿಸೆ ದೇವತೆಗಳು
ತ್ವರದಲಾಲಿಸಿ ತಂದ ವರಾಹರೂಪ ತಾನಾಗೀ ||
ಧರಣಿ ಜನನಿ ತತ್ಪಾದಾಬ್ಜ ಕೆ -
ಎರಗಿ ಬಿನ್ನೈಸುವೆನು ಪಾದ -
ಸ್ಪರುಶ ಮೊದಲಾದಖಿಳ ದೋಷಗಳೆಣಿಸದಿರು ಎಂದು || ೪೨ ||

ವಸುಧಿವಸನ ವರಾದ್ರಿನಿಚಯ -
ಸ್ತನ ವಿರಾಜಿತ ಚೇತನಾಚೇ -
ತನ ವಿಧಾರಕ ಗಂಧರಸ ರೂಪಾದಿ ಗುಣವಪುಷೆ ||
ಮನು ಕುಲೋತ್ತಮ ಕಶ್ಯಪನ ನಿಜ
ತನುಜೆ ನಿನಗಾನಮಿಪೆ ವನ್ನಪ
ಗುಣಗಳೆಣಿಸದೆ ಪಾಲಿಪುದು ಪರಮಾತ್ಮನರ್ಧಾಂಗಿ || ೪೩ ||

ವರಗುರುಗಳರ್ಚಿಸದ ಪಾಪಾ -
ತ್ಮರನು ಶಿಕ್ಷಿಸಲೋಸುಗ ದಸ್ಯೆ -
ಶ್ವರನೆನಿಸಿ ದುಷ್ಫಲಗಳೀವ ನಿರಂತರವು ಬಿಡದೆ ||
ತರಣಿ ನಂದನ ನಿನ್ನ ಪಾದಾಂ -
ಬುರುಹಗಳಿಗಾನಮಿಪೆ ಬಹುದು -
ಸ್ತರ ಭವಾರ್ಣವ ಮಗ್ನನಾದೆನ್ನುದ್ಧರಿಸಬೇಕು || ೪೪ ||

ನಿರತಿಶಯ ಸುಜ್ಞಾನ ಪೂರ್ವಕ
ವಿರಚಿಸುವ ನಿಷ್ಕಾಮ್ಯ ಕರ್ಮಗ
ಳರಿತು ತತ್ತತ್ಕಾಲದಲಿ ತಜ್ಜನ್ಯ ಫಲರಸವ ||
ಹರಿಯ ನೇಮದಲುಣಿಸಿ ಬಹು ಜೀ -
ವರಿಗೆ ಕರ್ಮಪ ನೆನಿಪ ಗುರು ಪು -
ಷ್ಕರನು ಸತ್ಕ್ರಿಯಂಗಳಲಿ ನಿರ್ವಿಘ್ನತೆಯ ಕೊಡಲಿ || ೪೫ ||

ಶ್ರೀನಿವಾಸನ ಪರಮ ಕಾರು -
ಣ್ಯಾನಿವಾಸ ಸ್ಥಾನದಲಿಹ ಕೃ -
ಶಾನುವನು ಸಹಸ್ರಜೋದವ ರತನು ಶ್ರೀ ಕೃಷ್ಣ ||

ಮಾನಿಯರೆಪ್ಪತ್ತು ಯಕ್ಷರು
ದಾನವರು ಮೂವತ್ತು ಚಾರಣ
ಜಾನಜಾಪುರರಪ್ಸರರು ಗಂಧರ್ವರಿಗೆ ನಮಿಪೆ || ೪೬ ||

ಆ ಯಮುನೆಯೊಳು ಸಾದರದಿ ಕಾ -
ತ್ಯಾಯನೀವ್ರತ ಧರಿಸಿ ಕೆಲರು -
ದರಾಯುಧನೆ ಪತಿ ಎನಿಸಿ ಕೆಲವರು ಜಾರತನದಲ್ಲಿ ||
ವಾಯು ಪಿತನೊಲಿಸಿದರು ಈರ್ಬಗೆ
ತೋಯಜಾಕ್ಷಿಯರವರ ಪಾದಕೆ
ನಾ ಎರಗುವೆ ಮನೋರಥಂಗಳ ಸಲಿಸಲನುದಿನವು || ೪೭ ||

ಕಿನ್ನರರು ಗುಹ್ಯಕರು ರಾಕ್ಷಸ
ಪನ್ನಗರು ಪಿತರುಗಳು ಸಿದ್ಧರು
ಸನ್ನುತಾಜಾನಜರು ಸಮರಿವರಮರ ಯೋನಿಜರು ||
ಇವರ ಗಣವೆಂತು ಬಣ್ಣಿಸ
ಲೆನ್ನಳವೆ ಕರುಣದಲಿ ಪರಮಾ
ಪನ್ನ ಜನರಿಗೆ ಕೊಡಲಿ ಸನ್ಮುದ ಸುಪ್ರತಾಪವನು || ೪೮ ||

ನೂರು ಮುನಿಗಳನುಳಿದು ಮೇಲಣ
ನೂರುಕೋಟಿ ತಪೋಧನರ ಪ -
ದಾರವಿಂದಕೆ ಮುಗಿವೆಕರಗಳ ಸುದ್ಧರಿಸಲೆಂದು ||
ಮೂರು ಸಪ್ತ ಶತಾಹ್ವಯರ ತೊರ -
ದೀ ಋಷಿಗಳಿಗನಂತರದಲಿಹ
ಭೂರಿ ಪಿತೃಗಳು ಕೊಡಲಿ ನಮಗೆ ಸದಾ ಸುಮಂಗಳವ || ೪೯ ||

ಪಾವನಕೆ ಪಾವನವೆನಿಸುವ ರ -
ಮಾವಿನೋದನ ಗುಣಗಣಂಗಳ
ಸಾವಧಾನದಲೇಕ ಮಾನಸರಾಗಿ ಸುಸ್ವರದಿ ||
ಆ ವಿಬುಧಪತಿ ಸಭೆಯೊಳಗೆ ನಾ -
ನಾ ವಿಲಾಸದಿ ಪಾಡಿಸುಖಿಸುವ
ದೇವಗಂಧರ್ವರು ಕೊಡಲಿ ಎಮಗಖಿಳ ಪುರುಷಾರ್ಥ || ೫೦ ||

ಭುವನಪಾವನ ನೆನಿಪ ಲಕ್ಷ್ಮೀ
ಧವನ ಮಂಗಳ ದಿವ್ಯ ನಾಮ
ಸ್ತವನಗೈವ ಮನುಷ್ಯಗಂಧರ್ವರಿಗೆ ವಂದಿಸುವೆ ||
ಪ್ರವರ ಭೂ ಭೂಪರುಳಿದು ಮಧ್ಯಮ
ಕುವಲಯಪರೆಂದೆನಿಸಿ ಕೊಂಬರ
ದಿವಸ ದಿವಸಗಳಲ್ಲಿ ನೆನೆವೆನು ಕರಣ ಶುದ್ಧಿಯಲ್ಲಿ || ೫೧ ||

ಶ್ರೀ ಮುಕುಂದನ ಮೂರ್ತಿಗಳ ಸೌ -
ದಾಮಿನಿಯ ಓಲ್ ಹೃದಯ ವಾರಿಜ
ವ್ಯೋಮ ಮಂಡಲ ಮಧ್ಯದಲಿ ಕಾಣುತಲಿ ಮೋದಿಸುವ ||
ಆ ಮನುಷ್ಯೋತ್ತಮರ ಪದಯುಗ
ತಾಮರಸಗಳಿಗೆರಗುವೆ ಸದಾ
ಕಾಮಿತಾರ್ಥಗಳಿತ್ತು ಸಲಹಲಿ ಪ್ರಣತಜನತತಿಯ || ೫೨ ||

ಈ ಮಹಿಮಂಡಲದೊಳಿಹ ಗುರು
ಶ್ರೀ ಮಧ್ವಾಚಾರ್ಯರ ಮತಾನುಗ
ರಾಮಹಾ ವೈಷ್ಣವರ ವಿಷ್ಣುಪಾದಬ್ಜ ಮಧುಕರರ ||
ಸ್ತೋಮಕಾ ನಮಿಸುವೆ ನವರವರ
ನಾಮಗಳ ಪೇಳಲಳವೆ ಬಹುವಿಧ
ಯಾಮ ಯಾಮಂಗಳಲಿ ಭೋದಿಸಲೆನಗೆ ಸನ್ಮತಿಯ || ೫೩ ||

ಮಾರನೈಯನ ಕರುಣಾಪಾರಾ
ವಾರ ಮುಖ್ಯ ಸುಪಾತ್ರರೆನಿಪ ಸ -
ರೋರು ಹಾಸನ ವಾಣಿ ರುದ್ರೇಂದ್ರಾದಿ ಸುರನಿಕರ ||
ತಾರತಮ್ಯಾತ್ಮಕ ಸುಪದ್ಯಗ
ಳಾರು ಪಠಿಸುವರಾ ಜನರಿಗೆ ರ -
ಮಾರಮಣ ಪೂರೈಸಲೀಪ್ಸಿತ ಸರ್ವಕಾಲದಲಿ || ೫೪ ||

ಮೂರು ಕಾಲಗಳಲ್ಲಿ ಸ್ತುತಿಸೆ ಶ -
ರೀರ ವಾಙ್ಮನ ಶುದ್ಧಿ ಮಾಳ್ಪುದು
ದೂರಗೈಸುವದ ಖಿಳಪಾಪ ಸಮೂಹ ಪ್ರತಿದಿವಸವು ||

ಚೋರಭಯ ರಾಜಭಯ ನಕ್ರ ಚ -
ಮೂರು ಶಸ್ತ್ರ ಜಲಾಗ್ನಿ ಭೂತಮ -
ಘೋರಗಜ್ವರ ನರಕ ಭಯ ಸಂಭವಿಸದೆಂದೆಂದು || ೫೫ ||

ಜಯಜಯತು ತ್ರಿಜಗದ್ವಿಲಕ್ಷಣ
ಜಯಜಯತು ಜಗದೇಕಕಾರಣ
ಜಯಜಯತು ಜಾನಕೀರಮಣ ನಿರ್ಗತ ಜರಾಮರಣ ||
ಜಯಜಯತು ಜಾಹ್ನವಿಜನಕ ಜಯ
ಜಯತು ದೈತ್ಯಕುಲಾಂತಕ ಭವಾ
ಮಯಹರ ಜಗನ್ನಾಥವಿಠ್ಠಲ ಪಾಹಿಮಾಂ ಸತತ || ೫೬ ||

## ೩೩. ಫಲಸ್ತುತಿ ಸಂಧಿ

( ಶ್ರೀ ಶ್ರೀದ ವಿಠಲ ವಿರಚಿತ )

ಹರಿಕಥಾಮೃತಸಾರ ಗುರುಗಳ ಕರುಣದಿಂದಾಪನಿತು ||
ಪೇಳುವೆ ಪರಮ ಭಗವದ್ಭಕ್ತರಿದನಾದರದಿ ಕೇಳುವದು ||

ಹರಿಕಥಾಮೃತಸಾರ ಶ್ರೀ ಮ -
ದ್ಗುರುವರ ಜಗನ್ನಾಥ ದಾಸರ
ಕರತಳಾಮಲಕವೆನೆ ಪೇಳಿದ ಸಕಲ ಸಂಧಿಗಳ ||
ಪರಮ ಪಂಡಿತ ಮಾನಿಗಳು ಮ -
ತ್ಸರಿಸಲೆದೆಗಿಚ್ಚಾಗಿ ತೋರುವ
ದರಸಿಕರಿಗಿದು ತೋರಿ ಪೇಳುವದಲ್ಲ ಧರೆಯೊಳಗೆ || ೧ ||

ಭಾಮಿನಿ ಷಟ್ಪದಿಯ ರೂಪದ -
ಲೀ ಮಹಾದ್ಭುತ ಕಾವ್ಯದಾದಿ ಯೊ -
ಳಾ ಮನೋಹರ ತರತಮಾತ್ಮಕನಾಂದಿ ಪದ್ಯಗಳ ||
ಯಾಮ ಯಾಮಕೆ ಪಠಿಸುವವರ ಸು -
ಧಾಮ ಸಖ ಕೈಪಿಡಿಯ ಲೋಸುಗ
ಪ್ರೇಮದಿಂದಲಿ ಪೇಳ್ದ ಗುರುಕಾರುಣ್ಯ ಕೇನೆಂಬೆ || ೨ ||

ಸಾರವೆಂದರೆ ಹರಿಕಥಾಮೃತ
ಸಾರಿದೆಂಬುವ ದೆಮ್ಮ ಗುರುವರ
ಸಾರಿದಲ್ಲದೆ ತಿಳಿಯೊದೆನುತ ಮಹೇಂದ್ರ ನಂದನನ ||
ಸಾರಥಿಯ ಬಲಗೊಂಡು ಸಾರಾ -
ಸಾರಗಳ ನಿರ್ಣೈಸಿ ಪೇಳ್ದನು -
ಸಾರನಡೆವ ಮಹಾತ್ಮರಿಗೆ ಸಂಸಾರ ಪೆಲ್ಲಿಪದೊ || ೩ ||

ದಾಸವರ್ಯರ ಮುಖದಿನಿಂದು
ರಮೇಶನನು ಕೀರ್ತಿಸುವ ಮನದ ಭಿ -
ಲಾಷೆಯಲಿ ವರ್ಣಾಭಿಮಾನಿಗ ಳೊಲಿದ್ದು ಪೇಳಿಸಿದ ||
ಈ ಸುಲಕ್ಷಣ ಕಾವ್ಯದೊಳ್ ಯತಿ -
ಪ್ರಾಸಗಳಿಗೆ ಪ್ರಯತ್ನವಿಲ್ಲದೆ
ಲೇಸು ಲೇಸೆನೆ ಶ್ರಾವ್ಯಮಾದುದು ಕುರುಹು ಕವಿಗಳಿಗೆ || ೪ |

ಪ್ರಾಕೃತೋಕ್ತಿಗಳೆಂದು ಬರಿದೆ ಮ -
ಹಾಕೃತಘ್ನರು ಜರಿವರಲ್ಲದೆ
ಸ್ವೀ ಕೃತವ ಮಾಡದಲೆ ಬಿಡುವರೆ ಸುಜನರಾದವರು ||
ಶ್ರೀ ಕೃತೀಪತಿಯಮಲ ಗುಣಗಳು
ಈ ಕೃತಿಯೊಳುಂಟಾದ ಬಳಿಕ
ಪ್ರಾಕೃತವೆ ಸಂಸ್ಕೃತದ ಸಡಗರವೇನು ಸುಗುಣರಿಗೆ || ೫ ||

ಶ್ರುತಿಗೆ ಶೋಭನ ಮಾಗದೊಡೆ ಜಡ
ಮತಿಗೆ ಮಂಗಳ ವೀಯದೊಡೆ ಶ್ರುತಿ
ಸ್ಮೃತಿಗೆ ಸಮ್ಮತವಿಲ್ಲದಿರ್ದೊಡೆ ನಮ್ಮ ಗುರುರಾಯ ||
ಮಥಿಸಿ ಮಧ್ವಾಗಮ ಪಯೋಬ್ಧಿಯ
ಕ್ಷಿತಿಗೆ ತೋರಿದ ಬ್ರಹ್ಮ ವಿದ್ಯಾ
ರತರಿಗೀಪ್ಸಿತ ಹರಿಕಥಾಮೃತ ಸಾರವೆನಿಸುವುದೆ || ೬ ||

ಭಕ್ತಿವಾದದಿ ಪೇಳ್ದನೆಂಬ ಪ್ರ -
ಸಕ್ತಿಸಲ್ಲದು ಕಾವ್ಯದೊಳು ಪುನ -
ರುಕ್ತಿ ಶುಷ್ಕಸಮಾಸ ಪದ ವ್ಯತ್ಯಾಸ ಮೊದಲಾದ ||

ಯುಕ್ತಿ ಶಾಸ್ತ್ರ ವಿರುದ್ಧ ಶಬ್ದ ವಿ -
ಭಕ್ತಿ ವಿಷಮಗಳಿರಲು ಜೀವ -
ನ್ಮುಕ್ತಿ ಯೋಗ್ಯವಿದೆಂದು ಶಿರಿಮದನಂತ ಮೆಚ್ಚುವನೆ || ೭ ||

ಆಶು ಕವಿಕುಲ ಕಲ್ಪತರು ದಿ -
ಗ್ದೇಶವರಿಯುಲು ರಂಗನೊಲಿಮೆಯ
ದಾಸಕೂಟಸ್ಥರಿಗೆರಗಿ ನಾ ಬೇಡಿಕೊಂಬುವೆನು ||
ಈ ಸುಲಕ್ಷಣ ಹರಿಕಥಾಮೃತ
ಮೀಸಲಳಿಯದ ಸಾರ ದೀರ್ಘ
ದ್ವೇಷಿಗಳಿಗೆರಿಯದಲೆ ಸಲಿಸುವದೆನ್ನ ಭಿನ್ನಪವ || ೮ ||

ಪ್ರಾಸಗಳ ಪೊಂದಿಸದೆ ಶಬ್ದ
ಶ್ಲೇಷಗಳ ಶೋಧಿಸದೆ ದೀರ್ಘ
ಹ್ರಾಸಗಳ ಸಲ್ಲಿಸದೆ ಷಟ್ಪದಿಗತಿಗೆ ನಿಲ್ಲಿಸದೆ ||
ದೂಷಕರು ದಿನದಿನದಿ ಮಾಡುವ
ದೂಷಣಾವ ಭೂಷಣಾಗಳೆಂದು ಪ -
ದೇಶಗಮ್ಯವು ಹರಿಕಥಾಮೃತಸಾರ ಸಾಧ್ಯರಿಗೆ || ೯ ||

ಅಶೃತಾಗಮ ಭಾವವಿದರ ಪ -
ರಿಶ್ರಮವು ಬಲ್ಲವರಿಗಾ ನಂ -
ದಾಶ್ರುಗಳು ಮಳೆಗರಿಸಿ ಮೈಮರೆಸುವ ಚಮತ್ಕೃತಿಯ ||
ಮಿತ್ರರಿಗೆ ಮರೆಮಾಡಿ ದಿವಿಜರ -
ಜಸ್ರದಲಿ ಕಾಯ್ದಿಪ್ಪರಿದರೊಳು
ಪಶ್ರುತಿಗಳು ತಪ್ಪುವವೆ ನಿಜ ಭಕ್ತಯುತರಿಗೆ || ೧೦ ||

ನಿಚ್ಚ ನಿಜಜನ ನೆಚ್ಚಿನೆಲೆ ಗೊಂ -
ಡಚ್ಚ ಭಾಗ್ಯವು ಪೆಚ್ಚ ಪೇರ್ಮೆಯು -
ಕೆಚ್ಚ ಕೇಳ್ಮನ ಮೆಚ್ಚಿ ಮಲವರ ಮುಚ್ಚಲೆಂದೆನುತ ||
ಉಚ್ಚವಿಗಳಿಗೆ ಪೊಚ್ಚ ಪೊಸೆದೆನ
ಲುಚ್ಚರಿಸಿದೀ ಸುಚ್ಚರಿತ್ರೆಯ
ನುಚ್ಚರಿಸೆ ಶಿರಿವತ್ಸಲಾಂಛನ ಮೆಚ್ಚಲೇನರಿದು || ೧೧ ||

ಸಾಧು ಸಭೆಯೊಳ್ಮೆರೆಯೆ ಸು -
ಭೋದ ವೃಷ್ಟಿಯಗರೆಯೆ ಕಾಮ -
ಕ್ರೋಧ ಬೀಜವ ಹುರಿಯೆ ಖಳರೆದೆ ಬಿರಿಯೆ ಕರಕರಿಯ ||
ವಾದಿಗಳ ಮೆಲ್ಮುರಿಯೆ ಪರಮ ವಿ -
ನೋದಗಳ ಮೈಮರೆಯ ಲೋಸುಗ
ಹಾದಿ ತೋರಿದ ಹಿರಿಯ ಬಹಚಾತುರ್ಯ ಹೊಸ ಪರಿಯ || ೧೨ ||

ವ್ಯಾಸ ತೀರ್ಥರ ವಲವೊ ವಿಠಲೊ -
ಪಾಸಕ ಪ್ರಭುರ್ಯ ಪುರಂದರ
ದಾಸರಾಯರ ದಯವೊ ತಿಳಿಯದು ವೋದಿ ಕೇಳದಲೆ ||
ಕೇಶವನ ಗುಣ ಮಣಿಗಳನು ಪ್ರಾ -
ಣೇಶಗರ್ಪಿಸಿ ವಾದಿರಾಜರ
ಕೋಶಕೊಪ್ಪುವ ಹರಿಕಥಾಮೃತಸಾರ ಕೇಳಿದರು || ೧೩ ||

ಹರಿಕಥಾಮೃತಸಾರ ನವರಸ
ಭರಿತಗುಣ ಗಂಭೀರ ರತ್ನಾ -
ಕರ ರುಚಿರ ಶೃಂಗಾರ ಸಾಲಂಕಾರ ವಿಸ್ತಾರ ||
ಸರಸನರ ಕಂಠೀರ ವಾಚ್ಯಾ -
ರ್ಯರಜನಿತ ಸುಕುಮಾರ ಸಾತ್ವಿಕ -
ರಿಗೆ ಪರಮೋದಾರ ಮಾಡಿದ ಮರೆಯರುಪಕಾರ || ೧೪ ||

ಅವನಿಯೊಳು ಜ್ಯೋತಿಷ್ಮತಿಯ ತೈ -
ಲವನು ಪಾಮರನುಂಡು ಜೀರ್ಣಿಸ -
ಲವನೆ ಪಂಡಿತನೋಕರಿಸಲ ವಿವೇಕಿ ಯಪ್ಪಂತೆ ||
ಶ್ರವಣ ಮಂಗಳ ಹರಿಕಥಾಮೃತ
ಸವಿದು ನಿರ್ಗುಣಸಾರ ಮಕ್ಕಿಸ -
ಲವನಿಪುಣನ್ಯೆ ಯೋಗ್ಯಗಲ್ಲದೆ ದಕ್ಕಲರಿಯದಿದು || ೧೫ ||

ಅಕ್ಕರದೊಳೀ ಕಾವ್ಯದೊಳು ಗೊಂ -
ದಕ್ಕರವ ಬರದೋದಿದವ ದೇ -
ವರ್ಕಳಿಗೆ ದುಸ್ತ್ಯಜನೆನಿಸಿ ಧರ್ಮಾರ್ಥ ಕಾಮಗಳ ||

ಲೆಕ್ಕಿಸದೆ ಲೋಕೈಕ ನಾಥನ -
ಭಕ್ತಿ ಭಾಗ್ಯವ ಪಡೆದ ಜೀವ -
ಮುಕ್ತಗಲ್ಲದೆ ಹರಿಕಥಾಮೃತಸಾರ ಸೊಗಸುವದೆ || ೧೬ ||

ಒತ್ತಿಬಹ ವಿಘ್ನಗಳ ತಡೆವ ಪ -
ಮೃತ್ಯುವಿಗೆ ಮರೆಮಾಡಿ ಕಾಲನ
ಭೃತ್ಯರಿಗೆ ಭೀಕರವ ಪುಟ್ಟಿಸಿ ಸಕಲ ಸಿದ್ಧಿಗಳ ||
ಪೂರ್ತಿಗೊಳಿಸುವ ವನರುಹೇಕ್ಷಣ
ನೃತ್ಯ ಮಾಡುವನವರ ಮನೆಯೊಳು
ನಿತ್ಯಮಂಗಳ ಹರಿಕಥಾಮೃತಸಾರ ಪಠಿಸುವರಾ || ೧೭ ||

ಆಯುರಾರೋಗ್ಯೈಶ್ವರಿಯ ಯಶ
ಧೈರ್ಯ ಬಲ ವಿಜ್ಞಾನ ಸಮ ಸಾ -
ಹಾಯ ಶೌರ್ಯೋದಾರ್ಯ ಗುಣ ಗಾಂಭೀರ್ಯ ಮೊದಲಾದ ||
ಆಯುತಗಳುಂಟಾಗ ಲೊಂದ -
ಧ್ಯಾಯ ಪಠಿಸಿದ ಮಾತ್ರದಿಂ ಶ್ರವ -
ಣೀಯವಲ್ಲವೆ ಹರಿಕಥಾಮೃತಸಾರ ಸುಜನರಿಗೆ || ೧೮ ||

ಕುರುಡಕಂಗಳ ಪಡೆವ ಬದಿರನಿ -
ಗೆರಡು ಕಿವಿ ಕೇಳ್ಬಹವು ಬೆಳೆಯದ
ಮುರುಡ ಮದನಾ ಕೃತಿಯು ತಾಳ್ವನು ಕೇಳ್ದ ಮಾತ್ರದಲಿ ||
ಬರಡು ಹೈನಾಗುವದು ಕೇಳ್ದರೆ -
ಕೊರಡು ಪಲ್ಲವಿಸುವದು ಪ್ರತಿದಿನ
ಹುರಡಿಲಾದರೂ ಹರಿಕಥಾಮೃತಸಾರವನು ಪಠಿಸೆ || ೧೯ ||

ನಿರ್ಜರ ತರಂಗಿಣಿಯೊಳನು ದಿನ
ಮಜ್ಜನಾದಿ ಸಮಸ್ತ ಕರ್ಮ ವಿ -
ವರ್ಜಿತಾಶಾಪಾಶದಿಂದಲಿ ಮಾಡಿದಧಿಕ ಫಲಾ ||
ಹೆಜ್ಜೆ ಹೆಜ್ಜೆಗೆ ದೊರೆಯದಿಪ್ಪವೆ
ಸಜ್ಜನರು ಶಿರದೂಗುವಂದದಿ
ಗರ್ಜಿಸುತಲೀ ಹರಿಕಥಾಮೃತಸಾರ ಪಠಿಸುವರ || ೨೦ ||

ಸತಿಯರಿಗೆ ಪತಿಭಕುತಿ ಪತ್ನಿ
ವ್ರತ ಪುರುಷರಿಗೆ ಹರುಷ ನೆಲೆ ಗೊಂ -
ಡತಿ ಮನೋಹರರಾಗಿ ಗುರುಹಿರಿಯರಿಗೆ ಜಗದೊಳಗೆ ||
ಸತತ ಮಂಗಳವೀವ ಬಹು ಸು -
ಕೃತಗಳೆನಿಸುವ ಸುಲಭದಿಂ ಸ -
ದ್ಗತಿಯ ಪಡೆವರು ಹರಿಕಥಾಮೃತಸಾರವನು ಪಠಿಸೆ || ೨೧ ||

ಎಂತು ವರ್ಣಿಸಲೆನ್ನಳವೆ ಭಗ -
ವಂತನಮಲ ಗುಣಾನುವಾದಗ -
ಳಿಂತುಪರಿಯಲಿ ಪೂರ್ಣಬೋಧರ ಮತವ ಪೊಂದಿದರಾ ||
ಚಿಂತನೆಗೆ ಬಪ್ಪಂತೆ ಬಹು ದೃ -
ಷ್ಟಾಂತ ಪೂರ್ವಕವಾಗಿ ಪೇಳ್ವ ಮ -
ಹಂತರಿಗೆ ನರರೆಂದು ಬಗುವರೆನಿರಯ ಭಾಗಿಗಳು || ೨೨ ||

ಮಣಿಖಚಿತ ಹರಿವಾಣದಲಿ ವಾ -
ರಣ ಸುಭೋಜ್ಯ ಪದಾರ್ಥ ಕೃಷ್ಣಾ
ರ್ಪಣವೆನುತ ಹಸಿದವರಿಗೋಸುಗ ನೀಡುವಂದದಲಿ ||
ಪ್ರಣತರಿಗೆ ಪೊಂಗನ್ನಡವರ ವಾ -
ಙ್ಮಣಿಗಳಿಂವಿರಚಿಸಿದ ಕೃತಿಯೋ
ಳ್ಗುಣಿಸಿ ನೋಡುವ ಹರಿಕಥಾಮೃತಸಾರವನುದಾರ || ೨೩ ||

ದುಷ್ಟರೆನ್ನದೆ ದುರ್ವಿಷಯದಿಂ
ಪುಷ್ಟರೆನ್ನದೆ ಪೂತಕರ್ಮ
ಭ್ರಷ್ಟರೆನ್ನದೆ ಶ್ರೀದವಿಠ್ಠಲ ವೇಣುಗೋಪಾಲ ||
ಕೃಷ್ಣ ಕೈ ಪಿಡಿಯುವನು ಸತ್ಯ ವಿ -
ಶಿಷ್ಟ ದಾಸತ್ವವನು ಪಾಲಿಸಿ
ನಿಷ್ಠೆಯಿಂದಲಿ ಹರಿಕಥಾಮೃತಸಾರ ಪಠಿಸುವರ || ೨೪ ||



# ಫಲಸ್ತುತಿ ಸಂಧಿ

( ಶ್ರೀ ಗುರುಶ್ರೀಶವಿಠಲ ವಿರಚಿತ )

ದಾಸವರ್ಯರ ದಾಸ ಕರ್ಜಗಿ |
ದಾಸರೆಂಬರ ಈಸುವಾಕ್ಯವು |
ದಾಸಿನವ ಮಾಡದಿರಿ ಶ್ರೀಹರಿದಾಸರಾದವರು ||
ಕಾಶಿ ಮೊದಲಾದ ಸುಕ್ಷೇತ್ರದಿ |
ವಾಸ ಮಾಡಲು ಈ ಸುಜನ ಸಹ |
ವಾಸ ಫಲ ದೊರಕುವದೆ ಶೋಧಿಸೆ ಸಕಲ ಶಾಸ್ತ್ರದಲಿ || ೧ ||

ಶ್ರೀವರನ ದಾಸರಿಗೆ ಭಕುತಿಲಿ |
ಸೇವಕನು ನಾನೆಂದು ಪೇಳುವ |
ಜೀವನವೆ ಸಜ್ಜೀವಿ ಅವ ಹರಿದಾಸನೆಂದರಿದು ||
ಆವನಾದರು ಆದಿಯಲಿ ಇದ |
ಭಾವ ಶುದ್ಧದಿ ಓದಿ ಬರೆಯಲು |
ಕಾವನೈಯ್ಯನು ಕರುಣಿಸುವನು ಸದಾವಕಾಲದಲಿ || ೨ ||

ಹರಿಕಥಾಮೃತಸಾರ ನೋಡುವ |
ಪರಮ ಭಕ್ತರ ಜ್ಞಾನ ದೃಷ್ಟಿಗೆ |
ವರ ಸುಲೋಚನದಂತೆ ಇಪ್ಪವು ಈ ಸುಪದ್ಯಗಳು |
ಅರಸಿಕರಿಗಿದು ಪೇಳಲಾಗದು |
ಮುರಹರನ ದಾಸರಿಗೆ ತಪ್ಪದೆ |
ಹರುಷ ಸುರಿಸುವ ನಿಹಪರದಿ ಗುರು ಶ್ರೀಶವಿಠಲನು || ೩ ||

ಶ್ರೀ

ಶ್ರೀ ಜಗನ್ನಾಥ ವಿಠ್ಠಲಾಯ ನಮಃ

# ಹರಿಕಥಾಮೃತಸಾರ ನಿಘಂಟು

ಶ್ರೀಮದ್ ಹರಿಕಥಾಮೃತಸಾರ ಗ್ರಂಥದಲ್ಲಿ ಉಕ್ತವಾದ ಶಬ್ದಗಳಿಗೆ, ಅರ್ಥ ಹಾಗೂ ವಿವರಣೆಯನ್ನು ಅನುಗ್ರಹಿಸಿ ತಮ್ಮ ಶಿಷ್ಯ ಓರ್ವನಿಗೆ ಬರೆಯಿಸಿದವರು ಪರಮ ಪೂಜ್ಯರಾದ ಶ್ರೀವಾಂಯಿ ಕೃಷ್ಣಚಾರ್ಯರು. ಆ ಶಿಷ್ಯರ ಅನುಮತಿಯಿಂದ ಈಗ ಪ್ರಕಟಿಸಲಾಗುತ್ತದೆ.

ಸಂಪಾದಕರು.

ತಾ 3 - 6 - 1992

|| ಶ್ರೀ.ಭಾ.ಮು.ಲ ||

|| ಶ್ರೀ ಸೀತಾರಾಮ ಚಂದ್ರ ಪ್ರಸೀದ ||

ಗುರು ಶಿರೋಮಣಿ ವಿಜಯರಾಯರ |
ಸರಸ ಶಿಷ್ಯ ಗೋಪಾಲದಾಸರ |
ಚರಣಸೇವಕರೆನಿಪ ಶ್ರೀ ಜಗನ್ನಾಥದಾಸಾರ್ಯ |
ಪರಮ ಕರುಣದಲೆನ್ನ ಶಿರದಲಿ |
ಕರದ ನೀಡುತ ಹರಿಕಥಾಮೃತ |
ಸಾರಭಾವವ ವಿವರಿಸುತ ಪೊರೆಯೋ ಸುತನೆಂದು ||

ಹರಿಕಥಾಮೃತ ಪ್ರಪೀಯೂಷ |
ವಿತರಂತಂ ಮಹಾಮತಿಂ |
ಹರಿಕಥಾಮೃತ ಪ್ರಗಾಯಂತಂ |
ಹನೂಮಾರ್ಯ ಗುರುಂ ಭಜೇ ||

ಹರಿಕಥಾಮೃತ ದುಗ್ಧಾಬ್ಧಿ |
ವಿಹರಂತಂ ತಿಮಿಂಗಲಂ |
ಕೃಷ್ಣಾರ್ಯ ಗುರುನ್ ವಂದೇ |
ತಾಪತ್ರಯ ನಿವಾರಕಂ ||

# ಅಕಾರ ವಾಚ್ಯ
## ಶ್ರೀ ಭಾ. ಮು. ಲ.
## ಶ್ರೀ ಅಜಾಯನಮಃ

ಅಕಾಯ — ನಿರ್ದೇಹಿ, ನಿರಾಕಾರ, ಅಪ್ರಾಕೃತ ಶರೀರ, ಪ್ರಾಕೃತ ಶರೀರ ರಹಿತ.

ಅ — ಮೂಲಸ್ವರ, ಮೂಲಾಕ್ಷರ, ವಾಸುದೇವ. ನಿಷೇದಾರ್ಥಕ.

ಅಕ್ಕರ — ಅಕ್ಷರ, ವರ್ಣ, ಪ್ರೀತಿ, ಭಕ್ತಿ ವಾತ್ಸಲ್ಯ.

ಅಕುಟಿಲಾತ್ಮಕ — ನಿಖಿಲದೋಷದೂರ, ಶ್ರೀಹರಿ (ಕ. ೧ )

ಅಕುಟಿಲ — ನಿಷ್ಕಪಟಿ, ನಿರ್ದೋಷ, ನಿಷ್ಪಾಪ, ನಿರ್ಮತ್ಸರ, ನಿರ್ವಂಚಕನ

ಅಕಟ — ಆಶ್ಚರ್ಯ, ಅಬ್ಬಾ !, ಅಚ್ಚರಿ.

ಅಕರ್ತೃ — ಮಾಡದಿರುವ, ಮಾಡಿ ಮಾಡದಂತಿರುವ, ಶ್ರೀಹರಿ (ಕ. ೧ )

ಅರ್ಕ — ಶ್ರೀ ಅರ್ಕನಾಮಕವಸು (ಕ. ೧೦ ) ಸೂರ್ಯ, ದಿನಕರ, ದಿನಪ.

ಅಕ್ರೂರ — ಶ್ರೀ ಬ್ರಹ್ಮ ಸ್ವಾಯಂಭುವಸ್ವಾವೇಶ ಕಿಶೋರ ಗಂಧರ್ವಾವತಾರ (ಕ.೧ )

ಅಖಂಡ — ಎಲ್ಲ ಕೂಡಿದ, ಸಮೂಹ, ಲಯಕಾಲದಲ್ಲಿ ಎಲ್ಲ ರಸಗಳು ಕೊಡುವಿಕೆ, ಅಚ್ಛಿನ್ನ, ವನ ಸೇನಾದಿಗತರೂಪ, ಶ್ರೀ ಹರಿ ( ಕ.೧)

ಅಖಿಲ — ಎಲ್ಲ, ಅನೇಕ, ಅನೇಕತರಹ.

ಅಗಾಧ — ಅಚ್ಚರಿ, ಆಶ್ಚರ್ಯ, ಅಪಾರ.

ಅಗಾಧ ಮಹಿಮ — ಅಪಾರ ಮಹಿಮೋಪೇತ ಶ್ರೀಹರಿ (ಕ.೧)

ಅಗಲು — ಬಿಟ್ಟಿರು, ವಿಯೋಗ, ತೊಲಗು, ಬಿಡು

ಅಗ್ರ — ತುದಿ, ಎತ್ತರ, ಉದ್ದ, ಶಿಖರ

ಅಗ್ರಣಿ — ಶ್ರೇಷ್ಠ, ಉನ್ನತ, ಉಚ್ಚ, ಉತ್ತಮ ಫಲದಾಯಕ, ವರಿಷ್ಠ, ಪ್ರೇರಕ

ಅಗಳು — ಅನ್ನದ ಒಂದು ಕಾಳು, ಒಂದು ಬೆಂಗಾಳು

ಅಗಜೆ — ಶ್ರೀ ಉಮಾದೇವಿ, ಪಾರ್ವತಿ (ಕ ಪಿ೭)

| | |
|---|---|
| ಅಗಾಧ | ನಿಸ್ಸೀಮ, ನೆಲೆಗಾಣದ, ಅಗಣಿತ, ಅಪಾರ |
| ಅಗಸ್ತ್ಯ | ಸಾಗರವನ್ನು ಒಂದೇ ಆಪೋಶನದಲ್ಲಿ ಶೋಷಿಸಿದ ಮಹಮುನಿ ವರ್ಯರು. |
| ಅಘ | ಪಾಪ, ದುಷ್ಕರ್ಮ, ದುಃಖ, ದುರಿತ |
| ಅರ್ಚನೆ | ಪೂಜೆ, ಉಪಾಸನೆ, ಸೇವೆ |
| ಅರ್ಚಿಸು | ಪೂಜಿಸು, ಉಪಾಸಿಸು, ಸೇವಿಸು |
| ಅಚಲ | ಸ್ಥಿರ, ಸ್ಥಾಪಕ, ಅಚಲ |
| ಅಚೇತನ | ಜಡ, ಸ್ಥಿರ, ಸ್ಥಾವರ |
| ಅಚ್ಯುತ | ಚ್ಯುತಿದೂರ, ಹ್ರಾಸರಹಿತ, ಅವಿಯೋಗಿ, ಎಂದೂ ಕೊರತೆಯಿಲ್ಲದ, ಪತನರಹಿತ, ಮೋಕ್ಷಜನ್ಯ. |
| ಅಚ್ಚು | ಮುದ್ರೆ, ಗುರುತು |
| ಅಚ್ಛಿನ್ನ | ಅಖಂಡ, ಪೂರ್ಣ, ಅವಿರತ, ಅತಿರೋಹಿತ |
| ಅಚ್ಛಿನ್ನಭಕ್ತ | ಅತಿರೋಹಿತ ಭಕ್ತ, ಬ್ರಹ್ಮವಾಯು, ವಾಣಿ,ಭಾರತಿ |
| ಅಚ್ಛ | ಶುದ್ಧ, ಪವಿತ್ರ, ಪಾವನ |
| ಅಜ | ಜನ್ಮರಹಿತ, ಅನಾದಿ, ಶ್ರೀಬ್ರಹ್ಮ (ಕ - ೩) ಆಡು, ಕುರಿ, ಹೋತು ಶ್ರೀ ಹರಿ (ಕ - ೧) |
| ಅಜಗರ | ಶ್ರೀ ವಿದ್ಯಾಧರ ಗಂಧರ್ವಾವತಾರ (ಕ - ೧೯) ಹೆಬ್ಬಾವು ದೊಡ್ಡ ಸರ್ಪ |
| ಅಜೈಕಪಾದ | ಶ್ರೀ ಅಜೈಕನಾಮಕ ರುದ್ರ (ಕ - ೧೯) |
| ಅಜಸ್ರ | ಸಂತತ, ಅನವರತ, ನಿತ್ಯ ಅವಿರತ |
| ಅಟ | ಚರ, ಚಲ, ಅಡ್ಡಾಡುವ, ವ್ಯವಹರಿಸುವ, ಸಂಚರಿಸು. |
| ಅಜಿವಾನ | ಅಜೀರ್ಣಾದಿ ರೋಗೌಷಧ ಸಣ್ಣಕಾಳು. |
| ಅಜಿತ | ಅಜೇಯ, ಅಜಂತ್ಯ, ಯಾರಿಂದಲೂ ಸೋಲಿಸಲು ಶಕ್ಯ ಶ್ರೀ ಹರಿ (ಕ - ೧) |
| ಅಜರಾಮರಣ | ಮುಪ್ಪು ನಾವು ಜನನರಹಿತ |
| ಅಜಗೋರಳ | ಯಜ್ಞಧ್ವಂಸ ಮಾಡಿಕೊಂಡು ಶ್ರೀ ಮಹದೇವರ ತ್ರಿಶೂಲದಿಂದ ಸಿರಕತ್ತರಿಸಿಕೊಂಡು ಹೋತಿನ ಮುಖದವನಾದ ದಕ್ಷ ಪ್ರಜೇಶ್ವರ (ಕ - ೧೦) |
| ಅಜಗೋರಳ ಪತ್ನಿ | ಶ್ರೀ ದಕ್ಷ ಪ್ರಜೇಶ್ವರನ ಪತ್ನಿ - ಪ್ರಸೂತಿದೇವಿ (ಕ -೧೧) |

| | |
|---|---|
| ಅಜಿನ | ಚರ್ಮ, ತೊಗಲು, |
| ಅಜಾಂಡ | ಬ್ರಹ್ಮಾಂಡ |
| ಅಜಾಂಡಜ | ಬ್ರಹ್ಮಾಂಡದಲ್ಲಿ ಜನಿಸಿದ ಸೃಜ್ಯಜೀವರು. |
| ಅಟ್ಟಹಾಸ | ಆನಂದೋದ್ರೇಕ, ಹರ್ಷೋದ್ಗಾರ |
| ಅಟ್ಟುಳಿ | ಉಪದ್ರವ, ತಾಪ, ದುಃಖ |
| ಅಟ್ಟು | ಹೊರದೂಡಿ, ದಬ್ಬು, ನೂಕು, ದೂರ ಮಾಡು |
| ಅಡಗು | ಮರೆಯಾಗು, ಕುಗ್ಗು, ಮುಚ್ಚುಕೊಳ್ಳು, ಮರೆಮಾಚು. |
| ಅಡಗಿಸು | ಮುಚ್ಚುಮರೆಮಾಡು, ಒಳಗೆ ಸೇರಿಸು |
| ಅಡಿ | ಪಾದ, ಹೆಜ್ಜೆ. |
| ಅಡಿಗಡಿಗೆ | ಹೆಜ್ಜೆ ಹೆಜ್ಜೆಗೆ |
| ಅಡವಿ | ಅರಣ್ಯ ಕಾನನ, ಅಟವಿ. |
| ಅಣು | ಕಿರಿ, ಅತಿಸೂಕ್ಷ್ಮ ಕಣ, ಲವ, ಕುದುರೆ ಬಾಲದ ತುದಿಯದ ಭಾಗದಷ್ಟು ಸಣ್ಣ ಜೀವ, ಅದರ ಅಂಗುಟಾಗ್ರದಷ್ಟು ಸೂಕ್ಷ್ಮ ಶ್ರೀವಾಯು (ಕ -೩) |
| ಅಣುನಾಲಿಗೆ | ಕಿರುನಾಲಿಗೆ, ಅಂಗಳನಾಲಿಗೆ. |
| ಅಣುಮಹದ್ಗತ | ಅಣುವಿನಲ್ಲಿ ಅಣು, ಮಹತ್ತಿನಲ್ಲಿ ಮಹತ್, ವಾಯು (ಕ - ೩) |
| ಅಡು | ಬೇಯಿಸು, ಅಡಿಗೆಮಾಡು, ವಾಚಿಕೆ, ಪಾಕಮಾಡು. |
| ಅರ್ಣ | ಅಕ್ಷರಗಳು, ಸಾಗರ, ವಿಶಾಲ, ವಿಪುಲ. |
| ಅಣಕ | ವ್ಯಂಗ್ಯ ಹಾಸ್ಯ. ಕುಚೋದ್ಯ, ಚೇಷ್ಟೆ, ಅನುಕರಣೆ |
| ಅಣುಮಹ ದ್ರೂಪಾತ್ಮಕ | ಅಣೋರಣೀಯ, ಮಹತೋಮಹಿಮ ಶ್ರೀಹರಿ (ಕ - ೧) |
| ಅನುಗ, ಅಣುಗ | ಸೇವಕ, ಅನುಯಾಯಿ, ಪ್ರವರ್ತಕ. |
| ಅಣತಿ | ಹೊಂದಿಸು, ಕೊಡು |
| ಅತುಳಮಹಿಮ | ಮಹಾಮಹಿಮ, ಬ್ರಹ್ಮಚರಿತ. |
| ಅತಿರ್ಥಿ | ಅನಾಮಂತ್ರಿತ, ಕರಿಸಿಕೊಳ್ಳದೆ ಬರುವ, ಅಪ್ರಾಕೃತ, ಆಹಾರ ಭೋಕ್ತ್ಯ, ಆಕಸ್ಮಿಕ ಬಂದವ, ಶ್ರೀಹರಿ (ಕ - ೧) |
| ಅತುಳ | ಬ್ರಹ್ಮ, ಮಹಾ, ವಿಸ್ತೃ, ವಿಶಾಲ, ಊರು, |
| ಅತುಳಶೌರ್ಯ | ಊರುಪರಾಕ್ರಮ |

| | |
|---|---|
| ಅತಳ | ಭೂಲೋಕದ ಕೆಳಗಿನದೊಂದು ಲೋಕ. |
| ಅತಿ | ಬಹು, ಬಹಳ, ವಿಪುಲ, ಸೀಮೆ. |
| ಅತೀತ | ದೂರ, ವರ್ಜಿತ, ರಹಿತ, ನಿರ್ಲಿಪ್ತ |
| ಅತಿರೋಹಿತ | ತಿರೋಹಿತ, ಆಚ್ಛಾದಿತ, ಅದೃಶ್ಯ, ತಿರೋಧಾನ |
| ಅತಿಕ್ರಮಣ | ಸೀಮೋಲ್ಲಂಘನ, ದಾಟುವಿಕೆ. |
| ಅತಿಶ್ಯ | ಬಹು ಬಹಳ, ಬಹು, ವಿಪುಲ. |
| ಅತ್ಯಧಿಕ | ಅತಿ ಬಹಳ, ಬಹಳ ವಿಪುಲ. |
| ಅತಿಶಾಂತ | ಸುಸುಖಪ್ರದ, ಶ್ರೀ ಹರಿ (ಕ.೧) |
| ಅತ್ರಿ | ಉಪಸ್ಥ ತತ್ವಾಮಾನಿ, ಸಪ್ತರ್ಷಿಗಳಲೊಬ್ಬರು (ಕ.೧೬) ಶ್ರೀ ಬ್ರಹ್ಮನ ಮಾನಸಪುತ್ರ. ಶ್ರೀ ಚಂದ್ರ ಜನಕ. |
| ಅರ್ಥ | ಸಂಪತ್ತು ಅಭಿಪ್ರಾಯ, ತಾತ್ಪರ್ಯ, ದ್ರವ್ಯ, ಉದ್ದೇಶ |
| ಅದ್ಭುತ | ನಾಮಕಶ್ರೀ. ಗಂಧರ್ವ, ಇಂದ್ರ (ಕ - ೧೯) ಆಶ್ಚರ್ಯಕಾರಕ |
| ಅದ್ರಿ | ಪರ್ವತ |
| ಅದ್ರಿಜ | ಪರ್ವತದಲ್ಲಿ ಹುಟ್ಟಿದ, ಹುಟ್ಟುವ, ಪರ್ವದಲ್ಲಿ ಹುಟ್ಟಿದ, ಸರ್ವರಕ್ಷ, ಶ್ರೀ ಹರಿ. |
| ಅದ್ರಿಧರ | ಶ್ರೀಕೂರ್ಮ (ಕ - ೧) |
| ಅದ್ವಿತಿಯ | ಏಕಮೇವ, ಅಸದೃಶ, ಅನುಪಮೇಯ. |
| ಅದ್ದು | ಮುಳುಗಿಸು, ಹುದುಗಿಸು. |
| ಅದ್ವೈತ | ಒಂದೇ ಏಕಮೇವಾದ್ವಿತೀಯ, ಒಂದೇ ಎನ್ನುವ ಪರಿಪಾಟಿ |
| ಅದಿತಿ | ಶ್ರೀ ಕಶ್ಯಪನ ಪತ್ನಿ, ದೇವತೆಗಳ ತಾಯಿ |
| ಅಧೋಕ್ಷಜ | ಇಂದ್ರಿಯ ನಿಗ್ರಹಿ, ಚೋದ್ಯಪದಾರ್ಥಸ್ಥ ಶ್ರೀ ಹರಿ (ಕ - ೧) |
| ಅಧಿದೈವ | ದೈವಿಕ, ಅತಿವೃಷ್ಟಿ ಅನಾವೃಷ್ಟಿ, ಸಿಡಿಲು, |
| ಅಧಿಭೂತ | ದೈಹಿಕ, ಶರೀರಕ್ಕಾಗುವ ಜ್ವರರೋಗಾದಿ |
| ಅಧ್ಯಾತ್ಮ | ಸೂಕ್ಷ್ಮ, ಪ್ರಧಾನ, ಪ್ರಥಮ, ಆತ್ಮಿಯ, ಇಂದ್ರಿಯ, ಸ್ತ್ರೀ ಪುತ್ರಾದಿ ವಿಯೋಗ |

| | |
|---|---|
| ನಿರ್ಭೀತ | ಭಯವಿಲ್ಲದ, ಅಂಜಿಕಿಲ್ಲದ, ಭಯದೂರ |
| ನಿಮಿ | ಶ್ರೀ ನೇಮಿರಾಜ (ಕ - ೧೯), ರೆಪ್ಪೆಗಳ ಬಡಿತ, ಎರಡೂ ಕಣ್ಣು ರೆಪ್ಪೆಗಳ ತಾಕಲಾಟ. |
| ನಿಮಿಷ | ಎರಡು ಲವಕಾಲ, ಒಂದು ಕಣ್ಣು ಮುಚ್ಚಾಲೆ. |
| ನಿರ್ಮೂಲ | ಸರ್ವನಾಶ. |
| ನಿರ್ಮಯ | ಅಹಂಕಾರರಹಿತ, ಮಮಕಾರ ವರ್ಜಿತ, ನನ್ನದೆಂಬ ಮೋಹವಿಲ್ಲದ. |
| ನಿರ್ಮಲ | ನಿರ್ದುಷ್ಟ, ನಿಷ್ಪಾಪ, ಸ್ವಚ್ಛ, ನಿಷ್ಕಲುಷ, ನಿರ್ದೋಷ. |
| ನಿರ್ಮತ್ಸರ | ಕಪಟರಹಿತ, ನಿಷ್ಕಪಟ, ಅಸೂಯೆ ಪಡದ , ಹೊಟ್ಟೆಕಿಚ್ಚಿಲ್ಲದ. |
| ನಿಮಿತ್ತ | ಕಾರಣ, ಉದ್ದೇಶ, ಗುರಿ, ಹೇತು, ಗುರುತು, ಚಿಹ್ನೆ. |
| ನಿರ್ಮಲಾತ್ಮ | ತಿಳಿಮನ, ನಿಶ್ಕಲುಷ ಹೃದಯಿ. |
| ನಿರ್ಮಾಣ | ಉತ್ಪತ್ತಿ, ಸೃಷ್ಟಿಸುವಿಕೆ. |
| ನಿರ್ಮಾಲ್ಯ | ಭುಕ್ತಶೇಷ, ಉಂಡುಳಿದ, ಉಪಯೋಗಿಸಿದ. |
| ನಿಯತ | ನಿಜ, ಸ್ವರೂಪದ, ನಿಶ್ಚಿತ, ನಿರ್ಣೀತ. |
| ನಿಯಮ | ಸೇವೆ, ವ್ರತ, ತಪಸ್ಸು, ಉಪಾಸನೆ, ಆಜ್ಞೆ. |
| ನಿಯಮ್ಯ | ಸೇವಕ, ತಪಸ್ವಿ, ಉಪಾಸಕ, ಅಜ್ಞಾಧಾರಕ. |
| ನಿಯಾಮಕ | ಸೇವ್ಯ, ತಪ್ಯ, ಉಪಾಸ್ಯ, ಆಜ್ಞೆ ಮಾಡುವ. |
| ನಿಯಾಮಕತ್ವ | ನಿಯಮಿಸುವಿಕೆ, ಒಡೆತನ |
| ನಿಯೋಜಿಸು | ನಿಯಂತ್ರಿಸು, ನಿಯಮಿಸು, ಅರ್ಪಣೆಮಾಡು, ಏರ್ಪಡಿಸು, ಹಂಚು, ರಚಿಸು. |
| ನಿಯೋಗಿಸು | ಹೊಂದು, ಹೊಂದಿಸು, ಉಪಯೋಗಿಸು, ಬಳಿಸು, ಕೇಂದ್ರೀಕರಿಸು, ಸಂಘಟಿಸು. |
| ನಿರುಪಮ | ಅಸುದೃಶ, ಉಪಮಾರಹಿತ, ಹೋಲಿಸಲಶಕ್ಯ |
| ನಿರುಪಮಳು | ಶ್ರೀ ಮಹಲಕುಮಿ (ಕ - ೨) |
| ನಿರಸ್ತಕಾಮ | ನಿಷ್ಕಾಮ, ನಿರಾಶೆ, ಫಲದಾಶೆಯಿರದ, ನಿರಪೇಕ್ಷೆ. |
| ನಿರವದ್ಯ | ಅನಂತ, ಮಹಿಮ, ಯಾರಿಂದಲೂ ತಿಳಿಯಲಸಾಧ್ಯ, ಶ್ರೀ ಹರಿ. |
| ನಿರುತ ಪಿ ನಿರುತ | ಸದಾ, ಸಂತತ, ಯಾವಾಗಲೂ, ಅವ್ಯಾಹತ |
| ನಿರಂತರ | ಬಿಟ್ಟೂ, ಬಿಡದೆ, ಯಾವಾಗಲೂ, ಅವ್ಯಾಹತ. |

| | |
|---|---|
| ನಿರಾಶೆ | ಆಶೆ ಬಿಟ್ಟ, ಆಶೆ ತೊರೆದ, ಆಶೆಯಿಲ್ಲದ. |
| ನಿರವಧಿಕ | ಹೆಚ್ಚಿನವರಿಲ್ಲದ, ಸರ್ವೋತ್ತಮ ಶ್ರೀ ಹರಿ. |
| ನಿರೋಧ | ತಡೆಯಿಲ್ಲದ, ಕಟ್ಟಿಲ್ಲದ, ನಿರ್ವಿಘ್ನ, ಅನಿರ್ಬಂಧ |
| ನಿರಯ | ನರಕ |
| ನಿರವಕಾಶ | ಶೀಘ್ರ, ವೇಳೆಮಾಡದೆ, ವೇಳೆಯಿಲ್ಲದ, ತ್ವರ, ಒಡನೆ, ಬೇಗ. |
| ನಿರಾಶ್ರಯ | ಸ್ವತಂತ್ರ, ಹಂಗಿಲ್ಲದ, ಪರಾಶ್ರಯ, ಅಪೇಕ್ಷಿರಹಿತ, ಆಶ್ರಯವಿಲ್ಲದ, ಆಸರವಿಲ್ಲದ ಶ್ರೀ ಹರಿ. |
| ನಿರಹರ | ಆಹಾರ ವರ್ಜಿತ, ಅಸಾರ, ಫಲರಸ. |
| ನಿರಂಜನ | ನಿರ್ದೋಷ, ನಿರ್ದುಃಖ, ನಿರ್ದುಷ್ಟ, ನಿರ್ಲಿಪ್ತ. |
| ನಿರಂಶ | ಅಚ್ಛಿನ್ನ, ಅಭಾಗ್ಯ, ಒಂದೇ ಕಡೆ ವ್ಯಾಪ್ತ, |
| ನಿರಾಮಯ | ನಿರೋಗಿ, ನಿರ್ದುಃಖ, ನಿರ್ಜರ |
| ನಿರುಪಮಾನಂದ | |
| ನಿರುಪಮಾನಂದಾತ್ಮ | ಅಸದೃಶಾನಂದ, ಉಪಮೆ ರಹಿತ ಸುಖ -ಶ್ರೀ ಹರಿ. ಭವ ನಿಋುತಿ ಶ್ರೀ ಸಚ್ಚಿದಾನಂತಾಮ್ಮ ಹರಿ ಕುವರ ಶ್ರೀ ಬ್ರಹ್ಮ (ಕ - ೩) ನಿರ್ಋತಿ, ಶ್ರೋತ್ರ ತತ್ವಮಾನಿ, ನೈಋುತ್ಯ ಕೋಣಾಧಿಪ. ರಾಕ್ಷಸಾಧಿಪತಿ ಅಸದೃಶಾನಂದ, ಉಪಮೆ ರಹಿತ ಸುಖ ಶ್ರೀಹರಿ (ಕ)ಸದೃಶಾನಂದ, ಉಪಮೆ ರಹಿತ ಸುಖ ಶ್ರೀ ಹರಿ.೧೭ಅಸದೃಶಾನಂದ, ಉಪಮೆ ರಹಿತ ಸುಖ ಶ್ರೀ ಹರಿಅಸದೃಶಾನಂದ, ಉಪಮೆ ರಹಿತ ಸುಖ ಶ್ರೀ ಹರಿ., ಲವಣಾಭಿಮಾನಿ (ಕ - ೧೭) |
| ನಿರಾಕರಿಸು | ಖಂಡಿಸು, ಒಡಂಬಡದಿರು, ಅಸಮ್ಮತ, ತಿರಸ್ಕರಿಸು, ತಳ್ಳಿಹಾಕು. |
| ನಿರ್ಲೇಪ | ಅಂಟಿಕೊಳ್ಳದಿರುವಿಕೆ, ಹತ್ತಿಕೊಳ್ಳದಿರುವಿಕೆ, |
| ನಿರ್ಲಿಪ್ತ | ಅಂಟಿಕೊಳ್ಳದಿದ್ದ, ಹಚ್ಚಿಕೊಳ್ಳದ, ಭಾದಿಸದ, ರಹಿತ. |
| ನಿರ್ಲಜ್ಜ | ಲಜ್ಜೆಯಿಲ್ಲದ, ನಾಚಿಕೆಯಿಲ್ಲದ, ಎಂದೂ ಕೆಡಕು ಮಾಡದ |
| ನಿಲಯ | ಮನೆ, ಗೃಹ, ವಾಸ. |

| | |
|---|---|
| ನಿರ್ವಿಣ್ಣ | ದುಃಖಿ, ಮನನೊಂದ, ಚಿಂತಾಕ್ರಾಂತ |
| ನಿವಾರಣ | ಹೋಗಲಾಡಿಸುವ, ದೂರಗೈಸುವ, ನಾಶಗೈಸುವ |
| ನಿರ್ವಿಕಾರ | ಬದಲಾವಣೆರಹಿತ, ವಿಕಾರರಹಿತ, ಶ್ರೀ ಹರಿ |
| ನಿರ್ವಾತ | ಗಾಳಿಯಿಲ್ಲದ, ಹವೆಯಾಡದ, |
| ನಿರ್ವಾತದೇಶಗ | ಗಾಳಿ ಸೋಂಕದ ಪ್ರದೇಶ, ಗಾಳಿಯಿಲ್ಲದ ಪ್ರದೇಶ |
| ನಿರ್ವ್ಯಾಜ್ಯ | ಪ್ರತಿಫಲಾಪೇಕ್ಷೆಇಲ್ಲದೆ, ಲಾಭವಿಲ್ಲದ. ನಿರ್ವೈರ ಸ್ನೇಹೋದಾಸೀನ ದ್ವೇಷ ವರ್ಜಿತ ಶ್ರೀ ಹರಿ. |
| ನಿವೇದನ | ಅರ್ಪಣೆ. |
| ನಿರ್ವಾಣ | ನಾದ, ಲಯ, ಅಂತ, ವಿಮೋಚನೆ, ಮುಕ್ತಿ. |
| ನಿವಹ | ಗುಂಪು, ಸಮೂಹ. |
| ನಿವಾಸಿ | ವಾಸ ಮಾಡಿದ, ವ್ಯಾಪ್ತ |
| ನಿಶಾ | ರಾತ್ರಿ |
| ನಿಶಾಚರ | ರಾತ್ರಿ ವ್ಯಾಪಾರಿ, ಸಂಚಾರಿ, ರಾಕ್ಷಸ |
| ನಿಷಾಟಿರ | " " |
| ನಿಶಾಕರ | ಶ್ರೀ ಚಂದ್ರ (ಕ - ೧೨) ಚಂದ್ರಮ |
| ನಿಶಾಕರನೇತ್ರ | ಶ್ರೀ ರುದ್ರದೇವ (ಕ - ೫) |
| ನಿಶಾಚರಧ್ವಂಸಿ | ರಾಕ್ಷಸಾಂತಕ ಶ್ರೀ ಹರಿ |
| ನಿಶ್ಚಿಂತ | ಅಚಿಂತ್ಯ, ಚಿಂತಾದೂರ. |
| ನಿಸ್ಸೀಮ | ದೇಶಕಾಲ ಗುಣಗಳಿಂದ ಪರಿಮಿತಿ ಇಲ್ಲದವ, ಅಪರಿಮಿತ |
| ನಿಶ್ಚಲ | ಧೃಡ, ಅಲುಗಾಡದ, ಸ್ಥಿರವಾದ, |
| ನಿಷ್ಪಾಪಿ | ಪಾಪರಹಿತ, ನಿರ್ದುಃಖಿ |
| ನಿಷ್ಕಪಟ | ನಿರ್ವಂಚನೆ. |
| ನಿಷ್ಕಲುಷ | ನಿರ್ಮಲ, ನಿರ್ದುಷ್ಟ, ನಿರ್ದೋಷ. |
| ನಿಷೇಧ | ಪ್ರತಿವಾದನೆ, ತಡೆಗಟ್ಟು, ನಾಶಮಾಡು, ಪ್ರತಿರೋಧಿಸು. |
| ನಿಷಾದ | ಬೇಡ, ಬೇಟೆಗಾರ, ಭಿಲ್ಲ, ಶಬರ |
| ನಿಷ್ಠುರ | ಅವಾಚ್ಯ, ಕರ್ಕಶ, ಕರ್ಣಕಠೋರ. |
| ನಿಸ್ಪಬದ್ಧ | ಯಾರಿಂದಲೂ ಬಂಧಿತನಾಗದ, ಸ್ವತಂತ್ರ ಶ್ರೀ ಹರಿ. |

| | |
|---|---|
| ನಿಷೇಚಕ | ಪಾಪ ತೊಳೆಯುವವ, ಅಭೀಷ್ಟವರ್ಷಿಸುವವ, ಶ್ರೀ ಹರಿ. |
| ನಿಸ್ಸಾರ | ತಮೋಯೋಗ್ಯರಸ, ಬಣ, ಸಪ್ಪೆ, ರುಚಿಯಿಲ್ಲದ, ಸತ್ವರಹಿತ |
| ನಿಷುಸೀದಗಣಪತಿ | ಸರ್ವಗುಣಗಳಲ್ಲಿ ಸಮ್ಯಗುಪವಿಷ್ಟ ಶ್ರೀ ಹರಿ. |
| ನಿಷ್ಕಿಂಚನ | ಅನಪೇಕ್ಷಿತ, ನಿರ್ವ್ಯಾಜ, ಶ್ರೀ ಹರಿ. |
| ನಿಷ್ಕಾಮನೆ | ನಿರ್ವ್ಯಾಜ, ನಿಸ್ವಾರ್ಥ, ಅನಪೇಕ್ಷಿತ. |
| ನಿಷೇಧಶೇಷ | ಅಪ್ರತಿರುದ್ಧ್ಯ, ಲಯನಂತರ, ಉಳಿದವನೊಬ್ಬನೇ, ಪ್ರತಿವಾದ ರಹಿತ. |
| ನಿಕ | ವೃಂದ, ಸಮೂಹ, ಗುಂಪು. |
| ನೀಕರಿಸು | ನಿಷೇಧಿಸು, ನಿರಾಕರಿಸು. |
| ನೀಗು | ತೊಲಗು, ತ್ಯಜಿಸು, ಬಿಡು, ಬಿಡಿಸು, ತೊಲಗಿಸು. |
| ನೀಚ | ಕೆಳಗೆ, ಅವರ, ಅಧಮ, ದುಷ್ಟ, ದೋಷಿ, ಪಾಪಿ |
| ನಿಷ್ಠೆ | ಆಸಕ್ತಿ, ಭಕ್ತಿ |
| ನೀಟು | ಸರಳ, ಸರಿ, ಹಿತ, ಸ್ವಾಭಾವಿಕ, ಸುಕ್ಕದ,ಸರಳರೇಖೆ, |
| ನೀಡ | ಪಕ್ಷಿಗಳ ಗೂಡು |
| ನೀಡು | ಕೊಡು, ದಯಾಮಾಡು, ಅನುಗ್ರಹಿಸು,ದಾನಮಾಡು. |
| ನೀಢಾಡು | ಬೀಸಾಡು, ಬಗದಾಡು, ಚೆಲ್ಲು, ಬಿಟ್ಟುಬಿಡು. ನಾಶಗೊಳಿಸು, ಇಲ್ಲದಂತೆ ಮಾಡು. |
| ನೀತ | ರಜೋಯೋಗ್ಯರಸ, ನಿತ್ಯ ಸಂಸಾರಿಗಳಿಗೆ ಯೋಗ್ಯ ನಿಯತ, ನಿತ್ಯ, ನಿಜ, ಮತ್ಸ್ಯಾದಿ ಅವತಾರರೂಪ, ಶ್ರೀ ಹರಿ, |
| ನೀಯು | ಕೊಡು, ತಂದು ಕೊಡು, ಫಲಿಸು |
| ನೀರು | ಪ್ರಳಯೋದಕ. |
| ನೀರಜ | (ಪ್ರಳಯೋದಕದಲ್ಲಿ) ಹುಟ್ಟಿದ ಕಮಲ (ಶ್ರೀ ಹರಿಯ ನಾಭಿಯಲ್ಲಿ) |
| ನೀರಜಭವಾಂಡ | ನೀರಜಭವ = ಶ್ರೀ ಹರಿಯ ನಾಭಿಯಲ್ಲಿ ಹುಟ್ಟಿದ ಕಮಲದಿಂದ ಉದ್ಭವಿಸಿದ ಬ್ರಹ್ಮ + ಅಂಡ = ಬ್ರಹ್ಮಾಂಡ |

| | |
|---|---|
| ನೀಲ | ಶ್ರೀ ಅಗ್ನಿಯ ಅವತಾರ, ತ್ರೇತೆಯಲ್ಲಿ ರಾಮಭಕ್ತ (ಕ - ೧೫) |
| ನೀಲಾ | ಶ್ರೀ ಕೃಷ್ಣನೇ ಪತಿಯಾಗಬೇಕೆಂದು ನಂದಗೋಪನ ಶಾಲಕ ಕುಂಭಕನಲ್ಲಿ ಅವತರಿಸಿದ ಶ್ರೀ ಕೃಷ್ಣಪತ್ನಿ (ಕ - ೬) |
| ನೀಲಾಬ್ದವರ್ಣ | ನೀಲ ಮೇಘ ಶ್ಯಾಮ ಶ್ರೀ ಹರಿ. |
| ನಿಂದಾ | ತೆಗಳಿಕೆ, ಬೈಗಳು, ದೂಷಣೆ, ಖಂಡನೆ, ಆಕ್ಷೇಪ, ದೂರುವಿಕೆ. |
| ನಿಂದಿಸು | " " (ಮಾಡು, ಮಾಡಿಸು) |
| ನಿಂದ್ಯ | " " " (ಮಾಡಲ್ಪಟ್ಟ) |
| ನುತ | ಸಂಪ್ರಾರ್ಥಿತ, ಸ್ತುತ್ಯ |
| ನುಡಿ | ವಾಕ್, ಶಬ್ದ, ಮಾತು, ಭಾಷೆ |
| ನುಡಿವೆಣ್ಣು | ವಾಗಾಭಿಮಾನಿ, ಶ್ರೀ ಸರಸ್ವತಿದೇವಿ (ಕ - ೪) |
| ನುಡಿವೆಣ್ಣನಾಣ್ಮ | ಶ್ರೀ ವಾಣೀಶ ಬ್ರಹ್ಮದೇವ |
| ನುಂಗು | ಕಚ್ಚದೇ ಹೊಟ್ಟೆಗೆ ಹಾಕುವದು, ಭಕ್ಷಿಸು, ತಿನ್ನು. |
| ನ್ಯೂನ | ಹಾನಿ, ಕೊರತೆ, ದ್ವಂದ್ವ, ದ್ವಯ, ಹ್ರಾಸ, ಕುಂದು, ಅಪೂರ್ಣ |
| ನೂತನ | ಹೊಸದು |
| ನೆಗಹು | ಎತ್ತು, ಎತ್ತಿಕೊಳ್ಳು, ಹೊರು, ಹೊತ್ತುಕೊಳ್ಳು. |
| ನೆಂಟ | ಆಪ್ತ, ಪರಮಾಪ್ತ, ಬೀಗ. |
| ನೆಚ್ಚು | ನಂಬು, ವಿಶ್ವಾಸವಿಡು |
| ನೆಲಿಸು | ವ್ಯಾಪಿಸು, ಇರು. |
| ನೆಲೆ | ಅಂತ, ಆಳ, ಸೀಮೆ, ಕೊನೆ. |
| ನೆವನ ಪಿನೆವ | ಕಾರಣ. ಕ್ಷುಲ್ಲಕ ಕಾರಣ, ಯಿಂದ, ಯಿಂದಾಗಿ, |
| ನೆರೆ | ಪಕ್ಕದ, ಸಂದಣಿಸು, ಕೂಡು, ಕಲೆ, ಒಸಗೆ, ಮುಪ್ಪಾಗು, ಹಣ್ಣಾಗು |
| ನೆಲೆ | ಭೂ, ಭೂಮಿ, ಭೂಲೋಕ |
| ನೂನ | ನಿಶ್ಚಿತ, ಅಗತ್ಯ, ಅವಶ್ಯ |
| ನೆನಹು | ಸ್ಮರಣೆ, ನೆನಪು, ಚಿಂತನೆ, ಧ್ಯಾನ |
| ನೆಲೆಗೊಳಿಸು | ಪಸರಿಸು, ವ್ಯಾಪಿಸು, ಛಾಪಮಾಡು. |

| | |
|---|---|
| ನೆರವು | ಸಹವಾಸ, ಸಂಗತಿ, ಆಶ್ರಯ |
| ನೆರಹು | ಕೂಡಿಸು, ಕಲೆಹಾಕು, ಒಂದೆಡೆ ತರು. |
| ನೆನೆ | ಸ್ಮರಿಸು, ಸ್ತುತಿಸು, ಚಿಂತಿಸು, ಯೋಚಿಸು. |
| ನೆಳಲು | ಛಾಯೆ, ಪ್ರತಿಬಿಂಬ. |
| ನೆಗ್ಗಿಲ | ಕ್ಷುದ್ರ, ಮುಳ್ಳು, ಕಂಬಿ. |
| ನೇತ್ರ | ಕಣ್ಣು, ಚಕ್ಷು, ಜ್ಞಾನೇಂದ್ರಿಯ. |
| ನೇಹ | ಸ್ನೇಹ, ವಾತ್ಸಲ್ಯ, ಪ್ರೀತಿ |
| ನೈಜ | ನೈಸರ್ಗಿಕ, ಶ್ರೀ ಸಾಲಿಗ್ರಾಮದಲ್ಲಿರುವ ಸನ್ನಿಧಾನ ಸ್ವಾಭಾವಿಕ ಶ್ರೀ ಹರಿ. |
| ನೈವೇದ್ಯ | ಸಮರ್ಪಣೆ, ಸ್ವಾಹಾರ, ಸ್ವಯೋಗ್ಯ ಆಹಾರ |
| ನೋಕನೀಯ | (ಕನಿಯ= ಅಲ್ಪತ್ವ) ವಿಶಾಲ ಹೃದಯಿ, ಸಮೃದ್ಧ ಶ್ರೀ ಗಣೇಶ (ಕ - ೧೯) |
| ನೋಡು | ಈಕ್ಷಿಸು, ವಿಚಾರಿಸು, ಚಿಂತಿಸು, ಎಣಿಸು |
| ನೋಟ | ದೃಷ್ಟಿ, ಅವಲೋಕನ. |
| ನೋಯಿಸು | ದುಃಖಕೊಡು, ಪೀಡಿಸು. |

## ಪಕಾರ ವಾಚ್ಯ
## ಶ್ರೀ .ಭಾ.ಮು.ಲ
## ಶ್ರೀ ಪರಾಯನಮಃ

| | |
|---|---|
| ಪಂಕ | ಪಾಪ, ಕೆಸರು, ಕಶ್ಮಲ, ಕಿಲ್ಮಿಷ, ರಾಡಿ. |
| ಪ | ಒಡೆಯ, ಶ್ರೇಷ್ಠ, ಪತಿ, ವರಿಷ್ಠ, ರಕ್ಷಕ, ರಾಜಗಣ |
| ಪಂಚ | ಐದು |
| ಪಂಕ್ತಿ | ಸಾಲು, ಶ್ರೇಣಿ, ಗುಂಪು, ಸಂದಣಿ. |
| ಪಂಚಭೇದ | (೧) ಜೀವಪಿ ಜೀವ (೨) ಜೀವ - ಜಡ (೩) ಜಡ ಜಡ (೪) ಜೀವ ಜೀವ - ಈಶ್ವರ (೫) ಜಡ ಈಶ್ವರ ಭೇದ. |

| | |
|---|---|
| ಪಂಚರೂಪಾತ್ಮಕ | ಅನಿರುದ್ಧ, ಪ್ರದ್ಯುಮ್ನ, ಸಂಕರುಷಣ, ವಾಸುದೇವ. ನಾರಾಯಣ ರೂಪಾತ್ಮಕ ಶ್ರೀ ಲಕ್ಷ್ಮೀನರಸಿಂಹ (ಕ - ೧) |
| ಪಂಚಮುಖ | ಶ್ರೀ ರುದ್ರದೇವ (ಕ - ೫) |
| ಪಂಚವಕ್ತ್ರ ತನಯ | ಶ್ರೀ ಮಹೇಶ ನಂದನ, ಶ್ರೀ ಗಣೇಶ (ಕ - ೧೮) |
| ಪಂಚಿಕೆ | ವಿಸ್ತಾರ. |
| ಪಂಚಾಸ್ಯ ಪಂಚಾನನ | ಸಿಂಹ, ಮೃಗರಾಜ, ಕೇಸರಿ. |
| ಪಂಚಸಾಮ | ಅಜ, ಅವಿ, ಗೋ, ಅಶ್ವ, ಮನುಷ್ಯವೆಂಬ ಐದು ಸಾಧು ಪ್ರಾಣಿಗಳು |
| ಪಂಚಕ | ಐದರ ಗುಂಪು, ಐದನೆಯ, ಐದು (ಕ - ೫) |
| ಪಂಚಾಶದ್ ವರ್ಣವೇದ್ಯ | ಅಕಾರಾದಿ ಕ್ಷ ವರಿಯಂತ ೫೧ ಅಕ್ಷರಾತ್ಮಕ ಶ್ರೀ ಹರಿ (ಕ - ೧) |
| ಪಂಡಿತ | ಜ್ಞಾನಿ, ಓದಿಕೊಂಡವ |
| ಪಂಡಿತಮಾನಿಪಿಶುನ | ನಾನೇ ಪಂಡಿತನೆಂದು ಹೇಳಿಕೊಳ್ಳುವ, ಚಾಡಿಕೋರ, ದುರ್ಗರ್ವಿ, ಮಧಾಂಡ. |
| ಪ್ರಕ್ರಿಯಾ | ಒಳ್ಳೆ ಕೆಲಸ, ಅಧಿಕಾರ, ಫಲ. |
| ಪಂಥಾನ | ಮಾರ್ಗ, ಹಾದಿ, ರಹದಾರಿ, ದೊಡ್ಡರಸ್ತೆ. |
| ಪ್ರಕಟ | ವ್ಯಕ್ತ, ಕಾಣುವ, ಗೋಚರ, ಪ್ರತ್ಯಕ್ಷ |
| ಪ್ರಕೃತಿ | ನಿಸರ್ಗ, ಸ್ವರೂಪ, ಲಕ್ಷಣ, ಸ್ವಭಾವ, ದೇಹಸ್ಥಿತಿ, ಸಾಧನ, ಅಚೇತನ ಪ್ರಕೃತಿಮಾನಿ ಶ್ರೀ ಲಕುಮಿ (ಕ - ೨) |
| ಪ್ರಕರಣ | ವಿಷಯ, ಅಧ್ಯಾಯ, ನಿರ್ಣಯ, ಪ್ರಬಂಧ, ಗ್ರಂಥ, ವಿಸ್ತಾರ, ಪ್ರಕಾರ. |
| ಪ್ರಕಟಿಗ | ಕಾಣುವ, ತೋರುವ, ಪ್ರಕಾಶಕ, ಬೆಳಕು ಕೊಡುವ. |
| ಪ್ರಕಾಶ | ಬೆಳಕು, ದ್ಯೋತ, ಆತಪ, ಪ್ರಭಾ, ರುಚಿ, ಕೀರ್ತಿ, ಕಾಣು, ತೋರು, ತೋಚು, ಹೊಳೆ. |
| ಪ್ರಖರ | ಪ್ರಕಾಶ, ಕಾಂತಿ, ತೇಜ. |
| ಪ್ರಕಾರ | ಬಗೆ, ರೀತಿ, ಅಂತೆ. |
| ಪ್ರತಿ | ತಿರು, ಒಂದು, ಒಬ್ಬ, ಒಟ್ಟು, ಒಟ್ಟಿಗೆ, ವ್ಯತಿರಿಕ್ತ, ಯಿಂದ, ಗೆ, ಸಲುವಾಗಿ, ವಿರುದ್ಧ, ಸತತ. |

| | |
|---|---|
| ಪ್ರತಿದಿನ | ದಿನಬಿಡದೆ, ದಿನದಿನ, ಸತತ |
| ಪ್ರತಿಹತ | ನಿರಾಶೆಯಾದ, ಆಶಾಭಂಗವಾದ, ಮನನೊಂದ. |
| ಪ್ರತಿಮ | ಹೋಲಿಕೆ, ಸಾಮ್ಯ, ಉಪಮೆ |
| ಪ್ರತಿಮೆ | ಮೂರ್ತಿ, ವಿಗ್ರಹ, ರೂಪ, ಪ್ರತಿಬಿಂಬ, ಗೊಂಬೆ, ತದ್ರೂಪ |
| ಪತಿ | ಒಡೆಯ ಅಭಿಮಾನಿ, ವಲ್ಲಭ, ಆಳುವ, ರಕ್ಷಕ, ಉದ್ಧಾರಕ. |
| ಪ್ರತಿಪಾದ್ಯ | ಸ್ತುತ್ಯ, ವಿಷಯ |
| ಪ್ರತತಿ | ಸಮೂಹ, ಗುಂಪು |
| ಪತಾಕೆ | ನಿಶಾನೆ, ಧ್ವಜ, ಕೇತನ. |
| ಪ್ರತಿಬಿಂಬ | ತದ್ರೂಪ, ಕನ್ನಡಿಯಲ್ಲಿ ಕಾಣುವ ಪ್ರತಿರೂಪ, ಪ್ರತೀಕ |
| ಪ್ರತಿಹಾರ | ಹಯಸ್ಥ, ಶ್ರೀ ಹರಿ, ಶಂಖಸ್ಥ, ಶ್ರೀ ಹರಿ, ದ್ವಾರಪಾಲಕ. |
| ಪತ್ರ | ಎಲೆ, ಪರ್ಣ, ರೆಕ್ಕೆ, ಪುಚ್ಚ, ಬಾಣ, ಶರ, ಕಾಗದ, ವಾಹನ. |
| ಪತ್ರತಾಪಕ | ಶ್ರೀ ರುದ್ರ (ಕ-೧೮) |
| ಪತಿತ | ಕೆಳಬಿದ್ದ, ಚ್ಯುತ, ಕೆಟ್ಟ, ಪಾಪ, ದುಃಖಿ, ಚಾಂಡಾಲ |
| ಪತಿತಪಾವನ | ಪತಿತರನ್ನು ರಕ್ಷಿಸುವವ, ಪಾಲಿಸುವವ, ಶ್ರೀ ಹರಿ. |
| ಪ್ರತಿಫಲ | ಉಪಕಾರ, ಕಷ್ಟ ಪರಿಹಾರ, ಲಾಭ, ಪರಿಹಾರ. |
| ಪ್ರತಿಭವಾತ | ಶ್ರೀ ಮರುತ (ಕ-೧೮) |
| ಪ್ರತಿವಿಂಧ್ಯ | ಶ್ರೀ ಧರ್ಮರಾಜ ದ್ರೌಪತಿಯರಲ್ಲಿ ಶ್ರೀ ಚಿತ್ರರಥ ಗಂಧರ್ವ ಆವೇಶಯುತ ಶ್ರೀ ಪುರೂರವ ವಿಶ್ವೇ ದೇವನ ಅವತಾರ (ಕ-೧೮) |
| ಪತ್ರಶಾಕ | ಸೊಪ್ಪಿನ ಪಲ್ಯೆ. |
| ಪ್ರಕಾಶನಿ | ಸುಷುಮ್ನಾ ನಾಡಿಯ ಪೂರ್ವಭಾಗದ ಶಾಖಾನಾಡಿ. |
| ಪಕ್ವ | ಬೇಯಿಸಿದ, ಬೆಂದ, ಹಣ್ಣಾದ, ನುರಿತ, ಕಳಿತ, ಮಾಗಿದ, ಬಲಿತ, ಪರಿಣತ. |
| ಪ್ರತ್ಯಗಾತ್ಮ | ಸಕಲರ, ಭಿನ್ನಾತ್ಮ, ಅಂತರ್ಗತ, |

| | |
|---|---|
| ಪಥ್ಯ | ಯೋಗ್ಯ, ಉಚಿತ, ಸ್ವೋಚಿತ. |
| ಪೃಥು | ಪೃಥ್ವಿಯನ್ನು ಧರ್ಮಬೀಜದಿಂದ ಉಳಿದ ಮಹಾತ್ಮ ಈ ಕಾರಣ ಭೂಮಿಗೆ ಪೃಥ್ವಿಯೆಂಬ ಹೆಸರಾದುದು (ಕ-೧೯) |
| ಪೃಥಕ್ | ಬೇರೆ, ಬಿಟ್ಟು, ಅನ್ಯ, ಬಿಡಿಯಾದ |
| ಪಥ | ಹಾದಿ, ದಾರಿ, ಮಾರ್ಗ, ಸರಣಿ, ಪದ್ಧತಿ, ಪದವಿ. ಪೃಥಿವಿ (ಥ್ವಿ) ಭೂಮಿ, ಭೂತ, ಜಗತ್ತು |
| ಪೃಥಾ | ಶ್ರೀ ಕುಂತಿದೇವಿಯ ಮೊದಲನೆಯ ಹೆಸರು |
| ಪ್ರತೀಕ | ಅವಯವ, ತುಣುಕು, ಅಂಶ, ಅಂಗ, ಸದಸ್ಯ, |
| ಪ್ರತಿಬಿಂಬ, | ಪ್ರತಿಕೂಲ, ಮೂರುತಿ. |
| ಪ್ರತಿಕೂಲ | ವಿರೋಧ. |
| ಪ್ರತಿಗ್ರಹಿಸು | ಸ್ವೀಕರಿಸು, ಒಪ್ಪಿಕೊಳ್ಳು |
| ಪದ | ಮಟ್ಟ, ಯೋಗ್ಯತೆ, ಪಾದ, ಅಧಿಕಾರ, ಸ್ಥಾನ, ವಸ್ತು, ರಕ್ಷಣೆ, ಸಾಧನೆ, ಉದ್ಯೋಗ, ಶಬ್ದ |
| ಪದವಿ | ಸ್ಥಾನ, ಮಟ್ಟ, ಅಧಿಕಾರ |
| ಪದಾರ್ಥ | ದಿನಸಿ, ವಸ್ತು, ಸರಕು, ಸಲಕರಣೆ, ವಿಷಯ, ಕಾರ್ಯ, ಸಂಗತಿ. |
| ಪ್ರದ | ಕೊಡುವ, ಈವ, ದ, ಅನುಗ್ರಹಿಸುವ. |
| ಪ್ರದಾಯಕ | ವಿಪುಲತ್ವ, ಕೊಡುವವ. |
| ಪದುಮ ಪದ್ಮ | ಕಮಲ, ನೀರಜ. |
| ಪದ್ಮಜ | ಶ್ರೀ ಬ್ರಹ್ಮ -ಕ-೩) |
| ಪದ್ಮಾಸನ | ಶ್ರೀ ಬ್ರಹ್ಮ (ಕ-೩) |
| ಪದ್ಮಾ | ಶ್ರೀ ಗೋವಿಂದದ ಪತ್ನಿ, ಆಕಾಶರಾಜನ ಮಗಳು, ಶ್ರೀ ಲಕುಮಿ (ಕ-೨) |
| ಪದುಮಜಾಂಡ | ಬ್ರಹ್ಮಾಂಡ |
| ಪದುಮಜಾಂಡೋದರ | ಜಗದುದರ |
| ಪದ್ಮಾಸನ ಸಂಪ್ರಾಪ್ತ | ಭಾವಿ ಬ್ರಹ್ಮ ಶ್ರೀ ವಾಯು (ಕ-೩) |
| ಪ್ರದಕ್ಷಿಣೆ | ಸುತ್ತು ತಿರುಗುವಿಕೆ. |
| ಪದಾತಿ | ಕಾಲಾಳು, ನಡೆದಾಡುವ. |

| | |
|---|---|
| ಪದೇಪದೇ | ಹೆಜ್ಜೆ ಹೆಜ್ಜೆಗೆ, ಆಗಾಗ್ಗೆ, ಮೇಲಿಂದ ಮೇಲೆ |
| ಪ್ರದ್ಯುಮ್ನ | ಶ್ರೀ ಕೃತಿರಮಣ ಶ್ರೀ ಹರಿಯರೂಪ, ಸೋಪಸ್ಕರಸ್ಥ, ದ್ಯು = ಕಾಂತಿ, ಪ್ರಕಾಶ = ಅಪ್ರಾಕೃತ ಕಾಂತಿವಂತ (ಕ - ೧) ಶ್ರೀ ಸರಸ್ವತಿ ಭಾರತಿಯರ ಜನಕ (ಕ-) ಕಾಮಾವತಾರ ಶ್ರೀ ರುಕ್ಮಿಣಿ ಪುತ್ರ (ಕ - ೮) |
| ಪ್ರದ್ಯುಮ್ನಸುತೆಯರು | ಶ್ರೀ ಸರಸ್ವತಿ ಭಾರತಿದೇವಿಯರು (ಕ - ೪) |
| ಪದಕ | ಕರಡಿಗೆ, ಕುಡುಪ, ತಾಯಿತ, ಪದಪ್ರದ, ಶ್ರೀ ಹರಿ.(ಕ - ೧) |
| ಪದ್ಧತಿ | ಪೂರ್ವ ಸಂಪ್ರದಾಯ, ಕ್ರಮ, ಸಂಸ್ಕಾರ. |
| ಪ್ರದೀಪ | ಉರಿಯುತ್ತಿರುವ ದೀಪ, ದೀಪ, ಜ್ಯೋತಿ, ದೀವಿಗೆ, ಹೊಡೆರು, ಆಧ್ಯಾತ್ಮಿಕ ಜ್ಯೋತಿ. |
| ಪ್ರದೀಪವರ್ಣ | ಅಪ್ರಾಕೃತ ಪ್ರಕಾಶಮಾನ ಶ್ರೀ ಹರಿ, ಶ್ರೀ ವಿಶ್ವ. |
| ಪ್ರದ್ವೇಷ | ಬಹುವೈರತ್ವ, ಬದ್ಧದ್ವೇಷ, ತೀವ್ರ ದ್ವೇಷ, ಆಜನ್ಮ ವೈರತ್ವ. |
| ಪ್ರದರ್ಶನ | ತೋರಿಕೆ, ಪ್ರಕಾಶಿಕೆ, ಬೆಳಕಿಗೆ, ತರುವಿಕೆ. |
| ಪದುಮಾಕ್ಷಿ | ಕಮಲನಯನೆ, ಪದ್ಮನೇತ್ರೆ. |
| ಪದುಮಾಕ್ಷ | ಪದ್ಮನೇತ್ರ, ಸರಸಿಜಾಂಬಕ, ವಿಕಸಿತನಯನ. |
| ಪದುಮಾಕ್ಷೀಸರ | ಕಮಲಾಕ್ಷಿ, ಮಣಿಯ ಮಾಲೆ. |
| ಪ್ರದ್ರಾವಣಿಕ | ನುರಿತ ವ್ಯಾಪಾರಿ, ಜಾತ್ಯಾವ್ಯಾಪಾರಸ್ಥ, ಅಚ್ಚು ವೈಶ್ಯ, ಪಕ್ಕಾ ವ್ಯಾಪಾರಿ. |
| | ಪದುಮನಾಭ ಶ್ರೀ ಹರಿ, ಫಲಶಾಕಸ್ಥ (ಕ - ೧) |
| ಪದಾಬ್ಜ | ಪಾದಕಮಲ, ಅಡಿದಾವರೆ. |
| ಪಂಥಾನ | ಹಾದಿ, ಮಾರ್ಗ, ರಸ್ತೆ. |
| ಪ್ರಧಾನ | ಮುಖ್ಯ, ವರಿಷ್ಠ, ಶ್ರೇಷ್ಠ |
| ಪ್ರಧಾನಪುರುಷೇಶ | ದೇವ ದೇವೇಶ ಶ್ರೀ ಹರಿ. |
| ಪನ್ನಗ | ಹಾವು, ಸರ್ಪ, ಕಾಲಿನಿಂದ ನಡೆಯುವ, ಶ್ರೀವರುಣನ ಭೃತ್ಯಗಣ (ಕ - ೨೭) |
| ಪನ್ನಗಪ | ಶ್ರೀ ಶೇಷ (ಕ - ೫) |
| ಪನ್ನಗವಿಭೂಷಣ | ಸರ್ಪಾಲಂಕೃತ, ಉಮಾಪತಿ, |
| ಪಚನ | ಜೀರ್ಣಕಾರ್ಯ, ಜೀರ್ಣಿಸು, ಕರಗಿಸು |

| | |
|---|---|
| ಪ್ರಚುರ | ಬಹಳ, ವಿಪುಲ, ತುಂಬಾ ವರ್ಧಿಸುವ. ಪ್ರಚರ್ಯಯಾಥಾಸ್ಥಿತಸ್ವರ, ವಿಷಯ ಸಂಗ್ರಹ ಸ್ವರ, ಮಂದವಾದಸ್ವರ |
| ಪಠಿಸು | ಓದು, ಪಾರಾಯಣ ಮಾಡು, ಓದಿ ಹೇಳು, ತಿಳಿಸು. |
| ಪರ್ಜನ್ಯ | ವೃಷ್ಟಿ, ಮಳೆ, ಮೋಡ, ಅವಾಂತರ, ಮೇಘಾಭಿಮಾನಿ, ಫಾಲ್ಗುಣ, ಮಾಸದ ನಿಯಾಮಕ ಪರ್ಜನ್ಯ ನಾಮಕ ಸೂರ್ಯ (ಕ - ೨೦) |
| ಪ್ರಜಾ | ಸಂತಾನ, ವಂಶಿಕ, ಅಧೀನವಾಗಿರುವ, ಅಂಕಿತದಲ್ಲಿರುವ, ಜನಾಂಗ, ಸ್ವರಾಷ್ಟ್ರೀಯ. |
| ಪ್ರಜ್ವಾಲೆ | ಕಾಡ್ಗಿಚ್ಚು, ಧಗಧಗ ಉರಿ, ಅಬ್ಬರದ ಉರಿ. |
| ಪಡು | ಅನುಭವಿಸು, ಹೊಂದು, ಧರಿಸು. |
| ಪಟ್ಟಣ | ದೊಡ್ಡ ಊರು, ರಾಜಾದಿವಾಸ. |
| ಪಟ | ವಸ್ತ್ರ, ಅರಿವೆ, ವಸನ. |
| ಪಟುತರ | ನಿಪುಣ, ಕುಶಲ, ಜಾಣ. |
| ಪ್ರಣವ | = ಓಂಕಾರ |
| ಪ್ರಣವಪ್ರತಿಪಾದ್ಯ | = ಓಂ ಕಾರ ಸ್ತುತ್ಯ |
| ಪರ್ಣ | ಎಲೆ, ರೆಕ್ಕೆ, ರೆಂಬೆ |
| ಪಣ್ಣು | ಹಣ್ಣು, ಫಲ |
| ಪ್ರಣತ | ವಿನಮ್ರ, ನಮಸ್ಕರಿಸಿದ, ಬಾಗಿದ, ಶರಣಾಗತ. |
| ಪ್ರಣಾಮ | ನಮಸ್ಕಾರ, ಮನಸಾ ವಂದನೆ, ಸಂಧಾನ ಪೂರ್ವಕ ನಮಸ್ಕಾರ |
| ಪ್ರಣವಸ್ಥ | ಶ್ರೀ = ಓಂ = ಕಾರ ರೂಪ (ಕ-೧) =ಓಂ = ಕಾರಾಂತರ್ಗತ = ಓಂ = ಕಾರ ವಾಚ್ಯ ಶ್ರೀ ಹರಿ (ಕ - ೧) |
| ಪಣೆ | ಹಣೆ, ಲಲಾಟ. |
| ಪ್ರಣತಕಾಮದ | ಶರಣಾಗತರ ಸರ್ವಾರ್ಥಪ್ರದ, ಶರಣಾಗತರ ರಕ್ಷ. |
| ಪ್ರಪನ್ನ | ಆಶ್ರಯಿಸಿದ, ಆಶ್ರಿತ, ಅಭಯಾರ್ಥಿ, ಭಕ್ತ |
| ಪ್ರಪಂಚ | ವಿಸ್ತಾರ, ವಿಶಾಲ, ಬೆಳವಣಿಗೆ, ಅಭಿವೃದ್ಧಿ |
| ಪ್ರಪಿತಾಮಹ | ಮುತ್ತಾತ, ಅಜ್ಜನ ತಂದೆ, ತಂದೆಯ ಅಜ್ಜ. |

| | |
|---|---|
| ಪ್ರಭು | ಒಡೆಯ, ಅಧಿಕಾರಿ, ಸ್ವತಂತ್ರ, ಆಶ್ರಯಾಭಯ ಪ್ರದ. |
| ಪ್ರಭಾವ | ಅಧಿಕಾರ, ಒಡೆತನ, ಅಂತಸ್ತು, ಬಲ, ಶಕ್ತಿ |
| ಪ್ರಭಾ | (ಬೆಳಕು) ಸುಪ್ರಕಾಶ, ಸುಕಾಂತಿ, ಕಾಂತಿದ, ಪ್ರಭದ. |
| ಪ್ರಮೋದ | ಅತ್ಯಾನಂದ, ಪ್ರಹರ್ಷ, ಮೋಕ್ಷಾನಂದ. |
| ಪ್ರಮೇಯ | ವಿಷಯ, ಸಂಗತಿ, ಸಾಹಿತ್ಯ, ರಹಸ್ಯ, ಸ್ತುತಿ, ಜ್ಞಾನ, ಪರಿಜ್ಞಾನ. |
| ಪ್ರಮತಿ | ಬುದ್ಧಿಶಾಲಿ, ಚತುರ, ಕುಶಲ, ಬುದ್ಧಿವಂತ, ವಿಜ್ಞಾನಿ. |
| ಪ್ರಮುಖ | ಅತಿಮುಖ್ಯ, ಮುಖಂಡ, ಮುಂದಾಳು, ಮಹತ್ವದ. |
| ಪ್ರಮಾದ | ಅಜಾಗ್ರತೆ, ಎಚ್ಚರಗೇಡಿತನ, ತಪ್ಪು, ತಿಳಿವಳಿಕೆ, |
| ಪಯ | ನೀರು, ಉದಕ, ಜಲ, ಜೀವ, ಕ್ಷೀರ, ಹಾಲು. |
| ಪಯೋಜ | ಕಮಲ, ನೀರಜ, ಅಬ್ಜ, ಕ್ಷೀರಾಬ್ಧಿಜಾತ ಚಂದ್ರ. ಪಯೋಜಭವಾಂಡ ಪಬ್ರಹ್ಮಾಂಡ |
| ಪ್ರಯುಕ್ತ | ಸಮಂಜಸ, ನ್ಯಾಯವಾದ, ಯೋಗ್ಯ, ಕಾರಣ, ಉಚಿತ. |
| ಪ್ರಯೋಜನ | ಉಪಯೋಗ, ಉದ್ದೇಶ, ಲಾಭ. |
| ಪಯಸ್ವಿನಿ | ಹಾಲು ಕರೆಯುವ ನಾಮಕ ನದಿ. |
| ಪ್ರಯತ್ನ | ಸಾಧನ, ಪ್ರಯಾಸ, ಉದ್ಯಮ, ತೊಡಕು. |
| ಪರ | ಶ್ರೇಷ್ಠ, ಇತರ, ಮತ್ತೊಂದು, ಬೇರೆ. |
| ಪರಮ | ಉತ್ತಮ, ಶ್ರೇಷ್ಠ, ಉದ್ರೇಕ, ಅನನ್ಯಾಧೀನ, ಶ್ರೀ ಹರಿ. |
| ಪರಿಯಂಕ | ಹಾಸಿಕೆ, ಮಂಚ, ಸುಪ್ಪತ್ತಿಗೆ. |
| ಪರಿಮಳ | ಸುಗಂಧ, ಆಮೋದ, ವಿಶುದ್ಧ, ವಿಶಿಷ್ಟ. |
| ಪರಮೋತ್ಸವ | ಹರ್ಷೋದ್ರಿಕ್ತ. |
| ಪರಿಹರ | ನಾಶಕ, ಅಂತರ, ವಿಮುಕ್ತಕ, ವಿಮೋಚನೆ. |
| ಪರಿಪರಿ | ಬಹುವಿಧ, ಬಹು ಮುಖ, ಬಹುರೀತಿ. |
| ಪರಮಾತ್ಮ | ಸರ್ವೋತ್ತಮೋತ್ತಮ ಶ್ರೀ ಹರಿ |
| ಪರಮಾಪ್ತ | ಆಪದ್ಬಾಂಧವ, ಶ್ರೀ ಪರಮಾತ್ಮ |

| | |
|---|---|
| ಪರಮಾನ್ನ | ಶ್ರೇಷ್ಠ ಅನ್ನ, ಪಾಯಸ. |
| ಪರಶು | ಕೊಡಲಿ, ಕುಠಾರ. |
| ಪರಿ | ದ್ರವಿಸು, ಹರಿಯುವಿಕೆ, ಹರಿ, ಬಗೆ, ಅಂತೆ, ಸುತ್ತುವಳೆ, ಸೀಮೆ, ವರೆಗೆ. |
| ಪರಿಖಾ | ಪರದೆ, ಮಡಿ, ಕಾಲುವೆ, ಸುರಂಗ |
| ಪರೀಡಾವತ್ಸರ | ಪರಿ = ಶ್ರೀ ಬೃಹಸ್ಪಯ ಮೇಷಾದಿ ದ್ವಾದಶ ರಾಶಿಗಳಲ್ಲಿ ತಿರುಗುವ ವರ್ಷಾವಧಿ ನಿಯಾಮಕ ಶ್ರೀಪರಿವತ್ಸರ ಶ್ರೀ ಹರಿ ಇಡಾ = ಸೂರ್ಯನು ೨೭ ನಕ್ಷತ್ರಗಳಲ್ಲಿ ೧೨ ಬಾರಿ ತಿರುಗುವ ವರ್ಷ ನಿಯಾಮಕ ಶ್ರೀ ಇಡಾವತ್ಸರ ಹರಿ |
| ಪರಮೇಷ್ಠಿ | ಶ್ರೀ ಬ್ರಹ್ಮ. |
| ಪರವಶ | ಮತ್ತೊಂದರಲ್ಲಿ ತಲ್ಲೀನ, ಶ್ರೇಷ್ಠ ಹರಿಧ್ಯಾನದಲ್ಲಿ, ಅನನ್ಯ, ಏಕಾಗ್ರ. |
| ಪರೇಶ | ಅತ್ಯುತ್ತಮ, ಶ್ರೇಷ್ಠರಲ್ಲಿ ಅತಿಶ್ರೇಷ್ಠ ಸರ್ವೋತ್ತಮ. |
| ಪರಗತಿ | ಶ್ರೇಷ್ಠಸ್ಥಾನ, ಸ್ಥಿತಿ, ಮುಕ್ತಿ |
| ಪರಾವರ | ಉತ್ತಮೋತ್ತಮ ಶ್ರೀ ಹರಿ |
| ಪರಾವರೇಶ | ಸರ್ವೋತ್ತಮೋತ್ತಮ, ಸರ್ವೋತ್ಕೃಷ್ಟ, ಶ್ರೀಹರಿ. |
| ಪರಬೊಮ್ಮ(ಬ್ರಹ್ಮ) | ಶ್ರೀ ಮೂಲೇಶ, ಮೂಲನಾರಾಯಣ (ಕ - ೧) |
| ಪರಸ್ಪರ | ಒಬ್ಬರೊಬ್ಬರು, ಒಬ್ಬರಿಗೊಬ್ಬರು, ತಮ್ಮ ತಮ್ಮ. |
| ಪರಮಾಚ್ಛಾದಿಕ | ಜೀವಾಚ್ಛಾದಿಕದ ಮುಂದೆ ಅನಿರುದ್ಧದೆಡೆ ಪಸರಿಸಿದ ಕಾಮ್ಯಕಾರಣ ಹೊಂದಿಕೆ |
| ಪರಲೋಕ | ಅನ್ಯದೇಶ, ಮತ್ತೊಂದು ಲೋಕ, ಶ್ರೇಷ್ಠಲೋಕ, ಮುಕ್ತಿ, |
| ಪರಲೋಕೈಕನಾಥ | ಶ್ರೀ ಹರಿ (ಕ - ೧) |
| ಪರಿಗ್ರಹ | ಹೆಂಡತಿ, ಆಶ್ರಿತ, ಬಳಗ, ಒಪ್ಪಿಗೆ, ಮೂಲ, ಬೇರು, ಶಾಪ, ಆಣೆ. |
| ಪರೀಕ್ಷಾ | ಸಂಕಟಕಾಲ, ಆಪತ್ತು, ವಿಚಾರ, ಯೋಗ್ಯತಾಮಿತಿ |
| ಪರಿವಾರ | ಅನುಯಾಯಿ, ಆಶ್ರಿತ, ಬಂಧುಬಳಗ, ಸತಿಸುತಾದಿ. |

ಪರಮಸುಹತ್ತಮ — ಅಪಾರಹಂತತವಿಕರುಣ ಹೃದಯಿಖಸವ್ರೋತ್ಕೃಷ್ಟ ಸ್ನೇಹ, ಶ್ರೀ ಹರಿ. (ಕ - ೧)

ಪರಟಿ — ಫಲರಹಿತ, ಚಿಪ್ಪು, ಟೆಂಗಿನ ಕಾಯಿ ಒಳಗಿನ ಕೊಬ್ಬರಿ ತೆಗೆದುಳಿದ ಚಿಪ್ಪು

ಪರಾತ್ಪರ — ಶ್ರೇಷ್ಠರಲ್ಲಿ ವರಿಷ್ಠ, ಶ್ರೀ ಹರಿ (ಕ - ೧)

ಪರಮಸುಖಿ ಬಲಪೂರ್ಣೆ — ಶ್ರೀ ರಮಾ (ಕ - ೨)

ಪರಾಂತಪ — ತ್ರಿಧಾಮಸ್ತ ಅಸುರಜಿತ, ಶ್ರೇಷ್ಠ ತಪಸ್ವಿ ಶ್ರೀ ಹರಿ (ಕ-೧)

ಪರೀಕ್ಷಿತ — ಮುನಿಕುಮಾರ ಶಾಪ ಶಮನಕ್ಕಾಗಿ ಶ್ರೀ ಶುಕ್ರಾ ಚಾರ್ಯರಿಂದ ಏಳು ದಿವಸ ಶ್ರೀ ಮದ್ ಭಾಗವತ ಶ್ರವಣ ಸಾಧನದಿಂದ ಮುಕ್ತಿ ಪಡೆದ ಸುಭದ್ರಾತನಯ ಅಭಿಮನ್ಯುಕುವರ (ಕ-೧೯)

ಪರಮಪವಿತ್ರ — ಅತಿಶುದ್ಧ, ಪರಿಶುದ್ಧ, ಶ್ರೀ ಹರಿ (ಕ-೧)

ಪರಿಚ್ಛೇದ — ಪ್ರಕಾರ, ಹೊದಿಕೆ, ಸುತ್ತುವಳೆ, ಪರದೆ,

ಪರಮಸತ್ಪುರುಷಾರ್ಥದ — ಅತ್ಯತ್ತುಮ ಧರ್ಮಾರ್ಥಕಾಮ ಮೋಕ್ಷಪ್ರದ.

ಪರಿಚ್ಛಿನ್ನ — ಮುರಿದ, ತುಂಡುಗಳನ್ನಾಗಿ ಮಾಡಿದ, ಚಿಕ್ಕ ಚಿಕ್ಕ.

ಪರಂಪದ — ಮುಕ್ತಿ, ಮೋಕ್ಷ, ಸದ್ಗತಿ.

ಪರಿಸರ — ಸುತ್ತಲೂ ತಿರುಗುತ್ತಿರುವ ಶ್ರೀ ವಾಯು (ಕ-೩)

ಪರಾವಸು — ನಾಮಕ ಶ್ರೀ ಗಂಧರ್ವ (ಕ-೧೯)

ಪರಮದುರಂತ ಮಹಿಮ — ಶ್ರೀ ಹರಿ (ಕ-೧)

ಪರಶುರಾಮ — ಶ್ರೀ ಜಮದಗ್ನಿ, ಶ್ರೀ ರೇಣುಕಾತ್ಮಜ (ಕ-೧)

ಪಲ್ಲು — ದಂತ, ಹಲ್ಲು.

ಪಲ್ಲವಿಸು — ಮೊಳಕೆ ಮೂಡು, ಚಿಗಿ, ಹುಟ್ಟು, ಫಲಿಸು.

ಪಲಾಯನ — ಓಟ, ಕಾಲುಕಿತ್ತುವಿಕೆ, ಇಲ್ಲದಾಗುವಿಕೆ

ಪಲ್ಲಕ್ಕಿ — ಮೇಣೆ, ಪಾಲಕಿ, ಶಿಬಿಕಾ, ಯಾಪ್ಯಮಾನ

ಪಲ್ಲವ — ಗುಚ್ಛ, ತುರಾಯಿ, ಗೊಂಚಲು,

ಪವಮಾನ — ಶ್ರೀ ವಾಯು (ಕ-೩), ಶ್ರೀ ನಾಮಕ ಅಗ್ನಿಪುತ್ರ (ಕ - ೨೭)

| | |
|---|---|
| ಪವಿತ್ರ | ಶುದ್ಧ, ಮಂಗಳ, ಅಶೌಚ, ನಿರ್ಮಲ. |
| ಪ್ರವಿತತ | ಸವಾನಿತರ್ಯಾಮಿ, ಶ್ರೀ ಹರಿ (ಕ-೧) ಸರ್ವವ್ಯಾಪಿ. |
| ಪವಿ | ವಜ್ರ. |
| ಪವನ | ಗಾಳಿ, ಶ್ರೀ ವಾಯುದೇವರು (ಕ - ೩) |
| ಪವನಸುತ | ಶ್ರೀ ಹನುಮ ಭೀಮ ಮಧ್ವ (ಕ - ೩) |
| ಪ್ರವರ್ತ್ತಕ | ಪ್ರಚಾರಕ, ನೇವಕ, ಅನುಯಾಯಿ. |
| ಪ್ರವಹ | ಶ್ರೀ ಪ್ರವಹವಾಯು (ಕ-೧೧) ಶ್ರೀ ವಾಯು ಪುತ್ರ |
| ಪವಸನಯ್ಯ | ಶ್ರೀ ಸಂಕರ್ಷಣ (ಕ - ೧) |
| ಪ್ರವಾಹ | ಹರಿಯುವ, ಧಾರೆ, ಸರಿಯುವ |
| ಪರ್ವಕಾಲ | ಗುಳಿಕಾಲ, ಸುಯೋಗ, ನಕ್ಷತ್ರ, ಕಾಲಗಳ ಸಂಮಿಲನ |
| ಪ್ರವಿವಿಕ್ತ | ವಾಸನಾಮಯ ಕರ್ಮ, ಮಾನಸಿಕ ಕರ್ಮ, ಭಿನ್ನರಸ ಭಿನ್ನ, ವಿಂಗಡ, ಪ್ರತ್ಯೇಕ. |
| ಪ್ರವಿವಿಕ್ತಭುಕ್ | ಶ್ರೀ ಹರಿ (ಕ - ೧) |
| ಪ್ರವರ | ಉತ್ಕೃಷ್ಟ, ವರಿಷ್ಠ, ಸರ್ವೋತ್ತಮ. |
| ಪ್ರವೃತ್ತಿ | ವಾರ್ತೆ, ವೃತ್ತಾಂತ, ಅವ್ಯಾಹತ, ದೃಷ್ಟಿ, ಕಟಾಕ್ಷ, |
| ಪ್ರವಾಹ, | ಗತಿ. |
| ಪ್ರವೇಶ | ದ್ವಾರ, ಬಾಗಿಲು, ಒಳಗೆ ಹೋಗು, ಒಳಸೇರು. |
| ಪರ್ವತ | ಅದ್ರಿ, ಗುಡ್ಡ, ಧರಧರ. |
| ಪ್ರವಿಷ್ಟ | ಪೂರ್ಣವ್ಯಾಪ್ತ |
| ಪ್ಲವಗ | ಶ್ರೀ ಗರುಡ (ಕ - ೫) ಅತಿ ವೇಗದಿಂದ ಗಮಿಸುವ ಕಪಿ, ಮರ್ಕಟ. |
| ಪ್ಲವಂಗ | ವಾನರ, ಮರ್ಕಟ, ವಲಿಮುಖ, ಮಗ. |
| ಪವಮಾನ ವಂದಿತ | ಶ್ರೀ ಸಂಕರ್ಷಣ (ಕ - ೧) |
| ಪರ್ವ | ಸಂದು, ಕೀಲು, ಗಂಟು, ಸಂಧಿ. |
| ಪ್ರಸಕ್ತಿ | ಲೋಲುಪತೆ, ವಿಶೇಷ ಆಸಕ್ತಿ, ಆಸ್ಥೆ, ಪ್ರಸಂಗ. |
| ಪ್ರಸೂತಿ | ಶ್ರೀ ದಕ್ಷ ಪ್ರಜೇಶ್ವರನ ಮಡದಿ (ಕ - ೧೫) |
| ಪಶು | ಚತುಷ್ಪಾದ, ನಾಲ್ಕುಕಾಲುಳ್ಳ ಪ್ರಾಣಿ. |
| ಪಶುಪ | ದ್ವಿಪಾದ ಪಶು, ಅಜ್ಞಾನಿ, ಪಶುಗಳಲ್ಲಿ ಶ್ರೇಷ್ಠ ತಿಳಿವಳಿಕೆಯಿಲ್ಲದ. |

| | |
|---|---|
| ಪಶುಪತಿ | ಶ್ರೀ ಶಂಕರ (ಕ - ೫) |
| ಪ್ರಸಾದ | ಅನುಗ್ರಹ, ಶುಭ್ರ, ಹೊಳಪು, ಒಲವು, ಮೆಚ್ಚಿಗೆ, ದಯ. ಕರುಣೆ, ಶ್ರೀ ಭಗವದ್ ನಿವೇದಕ. ಪಸರಿಸು ಹಬ್ಬು, ವಿಸ್ತರಿಸು, ಹರಹು |
| ಪಶ್ಚಿಮ | ಶ್ರೀ ವರುಣನದಿಕ್ಕು. |
| ಪ್ರಸ್ಥಾವ | ಆವಿಯಂತಸ್ಥ ಶ್ರೀ ಹರಿ (ಕ - ೧) |
| ಪಸಾರು | ಸರಕು, ಮರುವ ವದಾರ್ಥದಿನಸು, ಮಾಲು, ಅಂಗಡಿ. |
| ಪ್ರಸಿದ್ಧ | ವಿಖ್ಯಾತ, ಪ್ರಕೀರ್ತ್ರ, ಪ್ರಸಾಧ್ಯ ಅಸಾಧ್ಯ, ಸನ್ನುತ, ಪ್ರಸ್ತುತ್ಯ |
| ಪ್ರಸವಿಸು | ಹುಟ್ಟಿಸು, ಉತ್ಪತ್ತಿ, ಉಂಟು ಮಾಡು, ಜನನಮಾಡು, ಹಡೆ, ಹೆರು, ವಿಕಾಸವಾಗು, ಅರಳು. |
| ಪಳ | ೬ ಪ್ರಾಣಕಾಲ = ೬೦ ಗುರು = ೯೬೦ ನಿಮಿಷ |
| ಪ್ರಹಿತ | ಅನಿಮಿತ್ತ ಬಂಧು, ಪರೋಪಕಾರಿ, ಶ್ರೀ ಹರಿ (ಕ - ೧ ) |
| ಪ್ರಹ್ಲಾದ | ಹಿರಣ್ಯಕಶಿಪುವಿನ ದೈತ್ಯಜಾಲದಲ್ಲಿ ಚಂದನದಂತೆ ಹುಟ್ಟಿದವ, ವಾಯುವಾವೇಶಯುತ (ಕ - ೧೫)ಶ್ರೀಮನ್ ನೃಸಿಂಹ ದೇವರನ್ನು ಕಂಬದಿಂದ ಬರಮಾಡಿಕೊಂಡ ಭಕ್ತಾಗ್ರಣಿ (ಕ - ೧೬) |
| ಪ್ರಹ್ಲಾದತೋಷಕ | ಶ್ರೀ ಮನ್ನೃಹರಿ (ಕ - ೧) |
| ಪ್ರಳಯ | ಕೊನೆ, ಅಂತ, ನಾಶ, ಬ್ರಹ್ಮಾಂಡ, ನಾಶಕಾಲ. ಪಕ್ಷ ಪಂಗಡ, ರೆಕ್ಕೆರೆಂಬೆ, ರೀತಿ, ೧೫ ದಿನ ರಾತ್ರಿಗಳ ಕಾಲ. |
| ಪಕ್ಷಿ | ಹಕ್ಕಿ, ಗಗನಚರ, ರೆಕ್ಕೆವುಳ್ಳ, ದ್ವಿಜ, ಖಚರ. |
| ಪ್ರಕ್ಷಾಲನ | ಚೆನ್ನಾಗಿ, ಉಜ್ಜಿ, ತೊಳೆಯುವಿಕೆ. |
| ಪಾಕ | ಅರ್ಭಕ, ಶಿಶು, ಅಡಿಗೆ ಪೋತ, ಅಡಿಗೆಮಾಡು, ಬೇಯಿಸು, ಜಿಹ್ವಾಭಿಮಾನಿ ಪಾಕ ನಾಮಕ ದೈತ್ಯ. |
| ಪಾಕಶಾಸನ | ಶ್ರೀ ದೇವೇಂದ್ರ (ಕ - ೮) |

| | |
|---|---|
| ಪಾಕಶಾಸನಪೂಜ್ಯ | ಶ್ರೀ ದೇವೇಂದ್ರಪೂಜ್ಯ ಶ್ರೀ ಉಪೇಂದ್ರ (ಕ - ೧) |
| ಪ್ರಾಕೃತ | ಹೀನ, ಕೆಳಮಟ್ಟದ, ನೀಚ ಜಾತಿಯ |
| ಪ್ರಾಕೃತೋಕ್ತಿ | ಹೀನ ಭಾಷೆ, ತುಚ್ಛನುಡಿ, ಕೀಳು ಭಾಷೆ. |
| ಪಾಕಕರ್ತೃ | ಅಡಿಗೆ ಮಾಡುವವ. |
| ಪಾಖಂಡ | ನಾಸ್ತಿಕ, ಸಾಂಪ್ರದಾಯ, ಬಾಹಿರ, ವೇದದ ವಿರುದ್ಧ, |
| ಪ್ರಾಗ್ | ಮುಂಚಿನ, ಹಿಂದಿನ, ಮೊದಲಿನ, ಪೂರ್ವದ |
| ಪ್ರಾಗ್ಜನ್ಮ | ಪೂರ್ವಜನ್ಮ, ಹಿಂದಿನ ಜನ್ಮ. |
| ಪಾಂಚಾಲಿ | ಪಂಚ ಆಲಿ ಸ್ತ್ರೀ ಮಿತ್ರ ಸಖಿ ವುಳ್ಳವಳು, ಶ್ರೀ ಶ್ಯಾಮಲಾ, ಭಾರತಿ, ಶಚಿ, ಉಷಾ, ಭಾರತಿ ಪಾರ್ವತಿ ಎಂಬ ಐವರು ಸಖಿಯರುಳ್ಳ ಶ್ರೀ ದ್ರೌಪದಿ, ಶ್ರೀ ಭಾರತಿ (ಕ - ೪) |
| ಪಾಚಕ | ಬಾಣಸಿಗ, ಅಡಿಗೆಯವ, |
| ಪಾಜಕ | ಶ್ರೀ ಕ್ಷೇತ್ರ, ಶ್ರೀ ಮಧ್ವಾಚಾರ್ಯರ ಜನ್ಮಸ್ಥಳ. |
| ಪಾಟಿ | ಸಾಟಿ, ಎಣಿಸುವಿಕೆ, ಲೆಕ್ಕಿಸುವಿಕೆ. |
| ಪಾಟು | ದುಃಖ, ಅಸಂತೋಷ, ದುಃಖಬಡು. |
| ಪಾಂಡುವ | ಶ್ರೀ ವೇದವ್ಯಾಸರ ಕೃಪಾ ಕಟಾಕ್ಷದಿಂದ ಹುಟ್ಟಿದ ವಾಯ್ವಾವೇಶ ಪರಾವಹ ವಾಯು ಅವತಾರ (ಕ - ೧೮) |
| ಪಾಡು | ಸ್ತವನಗೈಯು, ಸ್ತುತಿಸು, ಹಾಡು, ಸ್ಥಿತಿ, ಅವಸ್ಥೆ |
| ಪ್ರಾಣ | ೧೬ ನಿಮಿಷ = ೧ ಗುರು, ೧೦ ಗುರು = ೧ |
| ಪ್ರಾಣಕಾಲ. | ೧೬೦ ನಿಮಿಷ, ಜೀವ, ಶಕ್ತಿ, ಬಲ, ಪೌರುಷ, ಧೃತಿ. ಶ್ರೀ ವಾಯು (ಕ - ೩), ಶ್ರೀ ಪ್ರಾಣನಾಮಕ ವಸು (ಕ - ೧೮) |
| ಪ್ರಾಣಮಯ | ಶ್ರೀ ಹರಿಯ ಪ್ರಾಣಮಯರೂಪ, ಪ್ರಾಣಮಯ ಕೋಶ. |
| ಪ್ರಾಣಪತಿ | ಶ್ರೀ ಹರಿವಾಯು (ಕ - ೧೩) |
| ಪ್ರಾಣೇಶ | |
| ಪ್ರಾಣಿ | ಜೀವಿ, ಮನುಷ್ಯ, ಪ್ರಾಣವುಳ್ಳ |
| ಪ್ರಾಣದ | ಜೀವದಾನಿ, ಜೀವಪ್ರದ, ಶ್ರೀ ಜಗನ್ನಾಥವಿಠಲ (ಕ - ೧) |

| | |
|---|---|
| ಪ್ರಾಣಿ | ಕೈ, ಹಸ್ತ, ಸ್ಪರ್ಶ ಕರ್ಮೇಂದ್ರಿಯ |
| ಪ್ರಾಣಮತ | ಶ್ರೀ ಮನ್ಮಧ್ವಮತ. |
| ಪ್ರಾಣಹಿಂಸ ಸಕಲದ್ಭುತ | ಹಿಂಸಾಚಾರಿ, ಕ್ರೂರ, ವ್ಯಾಧ |
| ಪಾತಕ | ಹಿಂಸೆ, ಪೀಡೆ, ಪಾಪ. |
| ಪಾತಕಿ | ಪಾಪಿ |
| ಪ್ರಾಂತ | ಸೀಮೆ, ತುದಿ, ಕೊನೆ, ಕಡೆ. |
| ಪಾತ್ರ | ಬಹುಶಃ, ಒಂದುವೇಳೆ, ಊಹೆ, ತರ್ಕ, ಬೆಳಗಿನ ಜಾವ, ಸೂರ್ಯೋದಯ |
| ಪ್ರಾತಃಕಾಲ | ಮುಂಜಾವು, ಬೆಳಿಗ್ಗೆ ದಿನದ ಮೊದಲನೇಭಾಗ,ಜೀವನದ ಮೊದಲನೇ ಹಂತ. |
| ಪಾರ್ಥಸಖ | ಶ್ರೀ ಕೃಷ್ಣ |
| ಪಾರ್ಥ | ಪಾಂಡುಪುತ್ರ. ಕುಂತಿದೇವಿಯಲ್ಲಿ ಇಂದ್ರನಿಂದ ಜನಿಸಿದ ಅರ್ಜುನ. |
| ಪ್ರಾರ್ಥನೆ | ಬಿನ್ನಹ, ಬೇಡಿಕೊಳ್ಳು, ಸ್ತೋತ್ರ, ಬೇಡಿಕೆ, ಹೊಗಳಿಕೆ. |
| ಪಾದ | ಪೂಜ್ಯ, ಮಾನ್ಯ ಕೆಳಕಾಯಿ, ನಡೆಯುವ ಕರ್ಮೇಂದ್ರಿಯ. ಕಾಲಭಾಗ ೧ಃ೪, ಎರಡು. |
| ಪಾದನ್ಯೂನ ಶತಾಬ್ದ | ಪಾದ = ೨, ನ್ಯೂನ = ದ್ವಂದ್ವ, ಶತ್ = ೧೦= ಅಬ್ದಕಲ್ಪ =೨,೨,೧೦=೪೦ಕಲ್ಪ. |
| ಪಾದಪ | ಪಾದದಿಂದ ಕುಡಿಯುವದು, ತಿನ್ನುವದು ಗಿಡ,ಮರ. |
| ಪಾದುಕೆ | ಜಡಾವಿಗೆ, ಜೋಡು, ಪಾದರಕ್ಷೆ, ಮೆಟ್ಟು. |
| ಪಾದಮಾನಿ | ಶ್ರೀ ಜಯಂತ, ಇಂದ್ರಪುತ್ರ (ಕ - ೧೯) |
| ಪ್ರಾದೇಶ | ನಾಮಕ ಶ್ರೀ ಸಂಕರ್ಷಣ (ಕ - ೧) |
| ಪಾನ | ಪೇಯ, ಕುಡಿಯುವಿಕೆ, ಕುಡಿಯುವ. |
| ಪಾಪ | ದುಷ್ಕೃತ, ಅನಿಷ್ಟ, ದುಃಖ, ದುಷ್ಟ, ಕಲುಷ. |
| ಪಾಪರಹಿತ | ನಿರ್ದುಷ್ಟ, ನಿಷ್ಪಾಪಿ, ನಿಷ್ಕಲುಷ, ದುಷ್ಕೃತವಿರದ. |
| ಪ್ರಾಪಕ | ದೊರಕಿಸಿಕೊಡುವ, ಪ್ರಾಪ್ತಿಸಿಕೊಡುವ, ತಂದುಕೊಡುವ. |
| ಪಾಪನಾಶನ | ದುಷ್ಕರ್ಮ, ಪರಿಹಾರಕ ಶ್ರೀ ಹರಿ (ಕ - ೧) |
| ಪಾಪಾಟವಿ | ದುಃಖಾರಣ್ಯ, ಅನಿಷ್ಟವನ. |

| | |
|---|---|
| ಪಾಮರ | ಅಜ್ಞಾನಿ, ದೀನ, ದಲಿತ, ಕೀಳು, ಕ್ಷುಲ್ಲಕ. |
| ಪಾಯು | ಗುದ, ತಿಗೆ, ಆಸನ |
| ಪ್ರಾಯ | ತಾರುಣ್ಯ, ನಡು ವಯಸ್ಸಿನ. |
| ಪಾಲಿಸು | ರಕ್ಷಿಸು, ಸಲಹು, ಅನುಗ್ರಹಿಸಿಕೊಡು. |
| ಪಾರತ್ರಿಕ | ಮೋಕ್ಷ ಸಂಬಂಧ, ಪರಲೋಕ ಸಂಬಂಧ, ಮುಕ್ತಿ ಯೋಗ್ಯ |
| ಪಾರಾವಾರ | ಕಾರುಣ್ಯ ಸಾಗರ, ದಯಾನಿಧಿ, ಕರುಣಾಳು. |
| ಪ್ರಾರಬ್ಧ | ಪಾಲಿಗೆ, ಬಂದ, ಫಲಿಸಿದ, ಹಣ್ಣಾದ, ಸಧ್ಯಭೋಗಿಸಬೇಕಾದ. |
| ಪಾಲು | ಹಾಲು, ಹಂಚಿಕೆ, ವಿಭಾಗ, ವಶ, ಅಧಿನ |
| ಪಾಲಕ | ರಕ್ಷಕ, ತಂದೆ, ರಾಜ ಗುರು, ಶ್ರೀ ಹರಿ ವಾಯು (ಕ - ೧೩) |
| ಪಾಲ್ಗರೆ | ಹಾಲುಸುರಿಸು. |
| ಪಾವನ | ಶುದ್ಧ, ಶುದ್ಧಗೊಳಿಸು, ಸ್ವಚ್ಛ, ಮಂಗಳ, ಶುಭ ಪವಿತ್ರ. |
| ಪಾವಮಾನಿ | ಶ್ರೀ ಪವನಾವತಾರಿ, ಶ್ರೀ ಮದಾನಂದತೀರ್ಥ ಭಗವತ್ಪಾದರು. |
| ಪಾವಮಾನಿಮತಾನುಗ | ಶ್ರೀ ಮಧ್ವಮತಾವಲಂಬಿ ಶ್ರೀ ಮಧ್ವಮತ ಸೇವಕ. |
| ಪಾರ್ವತಿ | ಪರ್ವತನ ಮಗಳು, ಶ್ರೀ ರುದ್ರ ಪತ್ನಿ (ಕ - ೭) |
| ಪಾವು | ಎಲರುಣಿ, ಹಾವು, ಸರ್ಪ. |
| ಪ್ರಾವಹಿ | ಶ್ರೀ ಪ್ರವಾಹ ಮರುತನ ಪತ್ನಿ (ಕ - ೧೭) |
| ಪ್ರಾವಹಿಪತಿ | ಶ್ರೀ ಪ್ರವಹ ಮಾರುತ (ಕ - ೧೦) |
| ಪಾರ್ವತೀ ಪತಿ | ಶ್ರೀ ಮಹೇಶ್ವರ (ಕ - ೫) |
| ಪಾವನಕೆಪಾವನ | ಶ್ರೀ ಹರಿ (ಕ - ೧) |
| ಪಾವಕ | ಅಗ್ನಿ, ಬೆಂಕಿ, ಜ್ವಾಲೆ, (ಕ - ೧೫)ವಡವಾನಲ. ಶ್ರೀ ಅಗ್ನಿ ಪುತ್ರ ವಾವಕ (ಕ) |
| ಪ್ರಾವರಣ, ಪಾವರಣ | ತೇಜಃಪುಂಜ, ತೇಜೋಮಯ. |
| ಪಾವಟಿಗೆ | ಸೋಪಾನ, ಮೆಟ್ಟಿಲು, ಮೇಲೆ, ಹೋಗಲು ಸುಲಭಮಾರ್ಗ |

| | |
|---|---|
| ಪಾಶ | ಬಂಧನ, ಹಗ್ಗ, ಬಾರಕೋಲು. |
| ಪಾರ್ಶ್ವ | ಭಾಗ, ಅಂಗ, ಕಡೆ. |
| ಪಾಷಾಣ | ಶಿಲೆ, ಕಲ್ಲು |
| ಪಾಸಟಿ | ಹೋಲಿಕೆ, ಸಾಮ್ಯ, ಸರಿಸಮಾನ. |
| ಪಾಹಿ | ರಕ್ಷಿಸು, ಸಲಹು, ಕಾಪಾಡು, ಪಾಲಿಸು |
| ಪ್ರಾಜ್ಞ | ಜ್ಞಾನಿ, ಪಂಡಿತ, ತಿಳಿದುಕೊಂಡ, ಹೃದಸ್ಥ ಶ್ರೀ ಹರಿ. |
| ಪಿಕ | ಪರಭೃತ, ಕೋಗಿಲೆ, ವನಪ್ರಿಯೆ, ಕೂಕೂ |
| ಪಿಂಗಳಾ | ಕಪಿಲ = ಕಂದುಬಣ್ಣ |
| ಪಿಗಳೆ | ನಾಮಕ ಶ್ರೀ ಅಪ್ಸರೆ (ಕ - ೧೯) |
| ಪಿತ | ತಂದೆ, ಜನಕ, ಅಪ್ಪ. |
| ಪಿತೃ | ಹಿರಿಯರು, ಪೂರ್ವಜ, ಪಿತೃಗಣ, ಮೂಲಪುರುಷ |
| ಪಿತಾಮಹ | ತಂದೆಯ ತಂದೆ, ಅಜ್ಜ, ಶ್ರೀ ಬ್ರಹ್ಮ (ಕ - ೩) |
| ಪಿನಾಕಿ | ಶ್ರೀ ಮಹೇಶ (ಕ - ೫), ಶರ್ವ, ಶಿವ, ಗಂಗಾಧರ. |
| ಪಿನಾಕಿಸನ್ನುತ | ಶ್ರೀ ಮಹೇಶ ಪೂಜ್ಯ ವಂದ್ಯ ಸ್ತುತ್ಯ ಶ್ರೀ ಹರಿ |
| ಪಿನಾಕಿ ಭಾರ್ಯ ತನುಜ | ಶ್ರೀ ಉಮಾಕುವರ, ಶ್ರೀ ಗಣೇಶ (ಕ - ೧೮) |
| ಪಿಡಿ | ಹಿಡಿದುಕೊಳ್ಳು, ಎರಡು, ಮುಷ್ಟಿ. |
| ಪಿಪಾಸ | ಆತುರ, ನೀರಡಿಕೆ. |
| ಪಿಪ್ಪಲ | ಅರಳಿ, ಅಸ್ವದ್ಥ. |
| ಪಿಪೀಲಿಕಾ | ಇರುವೆ |
| ಪ್ರಿಯ | ಇಚ್ಛಿಸಿದ, ಇಚ್ಛಿತ, ಇಷ್ಟ, ಬೇಕಾದ |
| ಪ್ರಿಯದೃತ | ಯಾವಾಗಲೂ ಭಗವತ್ಪ್ರಿಯ ವೃತಸ್ಥ, ಭಕ್ತಿ ಮಹಾಬಲದಿಂದ ಸರ್ವಭೂತಾದಿಗಳಿಗೂ ತಾವೇ ದಾರಿ ಮಾಡಿ ಕೊಡುವ ಮಹಾತ್ಮ (ಕ - ೧೯) |
| ಪ್ರಿಯತಮ | ಪತಿ, ಯಜಮಾನ, ಧವ, ಮನೋಹರ. |
| ಪಿಶುನ | ಚಾಡಿಕೋರ, ಮತ್ಸರಿ, ನಿಂದಾಕಾರ, ದೂರುಮಾಡುವ |
| ಪಿಶಾಚಿ | ಪಿಶಪಮಾಸ, ಪಮಾಸಾಹರಿ, ವಾಸನಾಮಯದೇಹ, ಭೂತ, ದೆವ್ವ |
| ಪೀಡೆ | ಬಾಧೆ, ವ್ಯಥೆ, ದುಃಖ, ಕಷ್ಟ. |
| ಪೀಡಿಸು | ದುಃಖಿಸು, ಬಾಧೆ, ವಡಿಸು, ಕಷ್ಟಕೊಡು. |
| ಪೀಠ | ಆಸನ, ಮಣೆ. |

| | |
|---|---|
| ಪ್ರೀತಿ | ಅನುಕಂಪ, ಮಮತೆ, ಅನುರಾಗ, ವಾತ್ಸಲ್ಯ ಪ್ರಿತ್ಯಾಭಿಮಾನಿ, ಶ್ರೀ ಶಾರದೆ (ಕ - ೪) |
| ಪಿಯೂಷ | ಅಮೃತ |
| ಪುಂಸ | ಪುರುಷ ಗಂಡು. |
| ಪುಂ | ಪುಲ್ಲಿಂಗ |
| ಪುಂಡ್ರ | ಚಿಹ್ನ, ನಾಮ, ಮುದ್ರೆ. |
| ಪುಂಡರೀಕ | ಕಮಲ, ಸರಸಿಜ, ತಾಮರಸ, ಬಿಳಿಕಮಲ |
| ಪುಣ್ಯ | ಸುಕೃತ, ಶ್ರೀಯಸ್ಸು ಶುಭ, ಮಂಗಳ |
| ಪುಣ್ಯಶ್ರವಣ | ಶ್ರಾವ್ಯ, ಸುಕೃತ, ಶ್ರಾವ್ಯ ಮಂಗಳ. |
| ಪುಣ್ಯಶ್ರವಣಕೀರ್ತನ | ಶ್ರಾವ್ಯಸ್ತುತ್ಯ ಸುರಾರ್ಯ |
| ಪುತ್ರಿ | ಮಗಳು, ಸುತೆ, ಕುವರಿ. |
| ಪುತ್ರ | ಪು = ನರಕ, ತ್ರ = ರಕ್ಷಕ, ನರಕ ವಾಸದಿಂದ ರಕ್ಷಿಸುವವ, ಮಗ, ಆತ್ಮಜ, ಶ್ರೀ ಹರಿ. |
| ಪುಡುಕು | ಹುಡುಕು, ಅರಿಸು, ಗೊತ್ತುಪಡಿಸು |
| ಪುರುಷ | ಪುರುಷಡ್ಗುಣ್ಯೈಶ್ವರ್ಯವುಳ್ಳವ, ಬ್ರಹ್ಮಾಂಡ ತುಂಬ ವ್ಯಾಪಕ, ಪುರು = ಮುಕ್ತರನ್ನು ಪಾಲಿಸುವ ಶ್ರೀ ಚತುರ್ಮುಖ ಬ್ರಹ್ಮ, ಶ್ರೀ ರುದ್ರದೇವ, ಗಂಡಸು. |
| ಪುರುಷೋತ್ತಮ | ಸರ್ವ ಚೇತನಾಂತರ್ಗತ, ಅಚೇತನಾಂತರ್ಗತ ತನ್ನಂತರ್ಗತ. |
| ಪುನರುಕ್ತಿ | ಹೇಳಿದ್ದನ್ನೇ ಮತ್ತೆ ಹೇಳುವದು, ಕಾವ್ಯದೋಷ. |
| ಪುರಂಜನ | ಶ್ರೀ ಹರಿ, ನಿತ್ಯಸಂಸಾರಿ, ಜೀವರಭಿಮಾನಿ |
| ಪುರಂದರ | ಪುರಂ = ದೇಶವನ್ನು ದರ = ನಾಶ, ಶ್ರೀ ಹರಿ, ಶ್ರೀ ದೇವೇಂದ್ರ. |
| ಪುರ | ಪಟ್ಟಣ, ದೇಹ, ಸಮ್ಮುಖ, ಎದುರಾಗಿ, ಹಿಂದಿನ |
| ಪುರಸ್ಸರ | ಆದರ, ಸತ್ಕಾರ ಭಕ್ತಿ |
| ಪುರಂಧ್ರಿ | ಗ್ರಹಿಣಿ, ಮದುವೆಯಾದ ಹೆಣ್ಣುಮಗಳು, ಪರಿಚಾರಿಕೆ |
| ಪುರುಟ | ಚಿನ್ನ, ಹಿರಣ್ಯ, ಬಂಗಾರ, ಹಾಟಕ. |
| ಪುರುಟಗರ್ಭ | ಹಿರಣ್ಯಗರ್ಭ, ಶ್ರೀ ಬ್ರಹ್ಮ (ಕ-೩) |

ಪುರುಟಗರ್ಭ ಹಿರಣ್ಯಗರ್ಭ, ಶ್ರೀ ಬ್ರಹ್ಮ (ಕ - ೩)
ಪುರುಟಗರ್ಭಾಂಡೋದಕ ಶ್ರೀ ಹರಿ, ಜಗದುದರ (ಕ - ೧)
ಪುರಾಣ ದೇವತಾಖ್ಯಾನ, ಪ್ರಾಚೀನ, ಪುರಾತನ.
ಪುರಾಣಪುರುಷ ಅನಾದ್ಯನಂತಕಾಲ, ಶ್ರೀ ಹರಿ (ಕ - ೧)
ಪುರುಹೂತ ಶ್ರೀ ದೇವೇಂದ್ರ (ಕ - ೮)
ಪುರಾರಿ ತ್ರಿಪುರಾರಿ, ಶ್ರೀ ಮಹೇಶ (ಕ - ೫)
ಪುರುಷಬಾಂಡ ಬ್ರಹ್ಮಾಂಡ
ಪುರುಷಸುಕ್ತಸುಮೇಯ ಪುರುಷಸೂಕ್ತದಿಂದ ಸುಕೀರ್ತಿ. ಸ್ತುತ್ಯ ಶ್ರೀ ಹರಿ (ಕ - ೧)
ಪುರುಷಾರ್ಥ ಧರ್ಮಾರ್ಥಕಾಮ ಮೋಕ್ಷವೆಂಬ ಬೇಡಿಕೆ.
ಪುರಾತನ ಆದಿ, ಬಹಳ ಹಳೆಯ
ಪುಷ್ಕರ ಕಮಲ, ಸತ್ಕರ್ಮಾಭಿಮಾನಿ, ಪುಷ್ಕರ (ಕ - ೨೬)
ಪುಷ್ಕರಾಕ್ಷ ಗಗನದೊಡಲ ಶ್ರೀ ಬ್ರಹ್ಮ (ಕ - ೩) ಜ್ಞಾನಿ, ಭಕ್ತ ಕಮಲ ನಯನ, ಶ್ರೀ ಬ್ರಹ್ಮ.
ಪುಷ್ಟಿ ವರ್ಧತ್ವ, ತೃಪ್ತಿ, ಹೆಚ್ಚಳ, ಉತ್ಕರ್ಷ, ಬೆಳವಣಿಗೆ.
ಪುಷ್ಟಿಗೈಸು ತೃಪ್ತಿಬಡಿಸು, ವರ್ಧಿಸು.
ಪುಲಸ್ತ್ಯ ಬ್ರಹ್ಮದೇವರ ಕಿವಿಯಿಂದ ಉತ್ಪನ್ನನು, ಶ್ರೀ ರಾಮ ಭಕ್ತರು, ಉಪಸ್ಥಮಾನಿಗಳ ಸಪ್ತರ್ಷಿಗಳಲ್ಲಿ ಓರ್ವರು.
ಪುಲಿಹ ಬ್ರಹ್ಮನಿಂದ ಉತ್ಪನ್ನನು.
ಪುಲಿ ವ್ಯಾಘ್ರ ಹುಲಿ.
ಪುಲಕ (ಳಕ) ರೋಮಾಂಚನ
ಪುಷ್ಕರಿಣಿ ದೊಡ್ಡ ಕಟ್ಟಡದ ಕೆರೆ, ಕಮಲಗಳವಾಸ, ಪುಸ್ತಕ ವಹಿ, ಗ್ರಂಥ
ಪುಷ್ಪ ಅರಳಿದ ಹೂವು, ಸುಮನ, ಹೂವು.
ಪೂತ ಪುಣ್ಯ, ಧರ್ಮ, ಪವಿತ್ರ
ಪುತಾತ್ಮ ಪುಣ್ಯಾತ್ಮ, ಪುಣ್ಯಕರ್ಮ.
ಪೂತನಿ ಶ್ರೀ ಬಾಲಕೃಷ್ಣನಿಗೆ ವಿಷ ತುಂಬಿದ ಸ್ತನಾಪಾನ ಮಾಡಿಸಿ ಅಸುನೀಗಿದ ಶಾಪಗ್ರಸ್ತ ಅಪ್ಸರೆ, ಊರ್ವಶ್ಯಾಂಶ ರಾಕ್ಷಸಿ

| | |
|---|---|
| ಪೂತನಿಪ್ರಾಣಾಪಹಾರಿ | ಶ್ರೀ ಬಾಲಕೃಷ್ಣ (ಕ - ೧) |
| ಪೂತನಿಯಮೊಲೆಯನುಂಡವ | ವಿಷಾಪಾನ ಮಾಡಿಸಿ ಅಸುನೀಗಿದ ಶಾಪಗ್ರಸ್ತ ಅಪ್ಸರೆ. ಇವಳಿಂದ ಸೇವೆ ಸ್ವೀಕರಿಸಿಶಾಪ ವಿಮೋಚನ ಮಾಡಿದ ಶ್ರೀ ಹರಿ |
| ಪೂರ್ಣ | ತುಂಬ, ಎಲ್ಲ, ಸರ್ವ. |
| ಪೂರ್ಣಾನಂದ | ಪೂರ್ಣ ಆನಂದವುಳ್ಳವ. |
| ಪೂಜೆ | ಅರ್ಚನೆ, ಉಪಾಸನೆ, ಆರಾಧನೆ, ಸನ್ಮಾನ. |
| ಪೂಜ್ಯ | ಅರ್ಚಸಿಲುಯೋಗ್ಯ, ಉಪಾಸ್ಯ, ಆರಾಧ್ಯ, ಸನ್ಮಾನ್ಯ |
| ಪೂಜಕ | ಅರ್ಚಕ, ಉಪಾಸಕ, ಆರಾಧಕ ಇತಿ |
| ಪೂಜಾಸಾಧನ | ಅರ್ಚನೆಯ ಸಲಕರಣೆ, ಸಲಕರಣ, ಸುಮನ ಇತಿ |
| ಪೂಜಿತ | ಅರ್ಚಿಸಲ್ಪಟ್ಟ, ಉಪಾಸಿತ. |
| ಪೂರೈಸು | ಪೂರ್ತಿಮಾಡು, ಒದಗಿಸು, ತಂದುಕೊಡು. |
| ಪೂಷಾ | ಮಾಸಾಭಿಮಾನಿ ಸೂರ್ಯ (ಕ - ೧೮) |
| ಪೂರ್ವ | ಮೊದಲು, ಮೊದಲಿವ, ಹಿಂದಿನ, ಹಳೆಯ, ಇಂದ್ರನ ದಿಕ್ಕು, ಸೂರ್ಯೋದಯ ದಿಶೆ |
| ಪೂರ್ವಕ | ಯಿಂದ, ಮೇರೆಗೆ, ಆಸಕ್ತಿ |
| ಪೆಗಲು | ಹೆಗಲು |
| ಪೆರ್ಚ್ಚ | ಹೆಚ್ಚಳ, ವೃದ್ಧಿ, ಏರಿಕೆ, ಏಳಿಗೆ |
| ಪ್ರೇತ | ಹೆಣ, ನರಕಸ್ಥ, ಯಾತನಾದೇಹ. |
| ಪೆರ್ಮೆ | ಹಿರಿಮೆ, ಕೀರ್ತಿ, ಪ್ರಸಾದ |
| ಪ್ರೇರಣೆ | ಪ್ರಾಚುರ್ಯ, ಚಿತಾವಣೆ, ಇಚ್ಛೋತ್ಪಾದನೆ, ಜ್ಞಾನಕಾರ್ಯ. |
| ಪೇಶಸ್ಕಾರಿ | ಪೇಶ = ಅವಯವ) ಅವಯವಗಳನ್ನು ಮಾಡುವ ಕುಂಬಾರ ಹುಳ, ಕುರಡಿ, ಕುಠಾರ. |
| ಪೇಯಳು | ಸ್ವೀಕರಿಸಲು ಯೋಗ್ಯ, ಅಂಗೀಕರಿಸಬಹುದಾದವಳು. |
| ಪೇಯ | ಕುಡಿಯಲು, ಯೋಗ್ಯ ಕುಡಿಯುವ, ಪಾನೀಯ, |
| ಪ್ರೇಷ್ಯ | ಪ್ರೇರ್ಯ |
| ಪ್ರೇಷ್ಟ | ಪ್ರೇರಿತ |

| | |
|---|---|
| ಪೈತೃಕ | ಪಿತೃಕಾರ್ಯದಿನ |
| ಪೊಂಬಸಿರ | ಶ್ರೀ ಹಿರಣ್ಯಗರ್ಭ, ಶ್ರೀ ಬ್ರಹ್ಮ (ಕ - ೩) |
| ಪೊಂಬಸಿರಪದಯೋಗ್ಯ | ಶ್ರೀ ವಾಯು (ಕ - ೩) |
| ಪೊಂಬಕ್ಕಿ | ಹೊಂಬಣ್ಣ ರೆಕ್ಕೆಯುಳ್ಳ ಶ್ರೀ ಗರುಡ (ಕ - ೫) |
| ಪೊಂಬಕ್ಕಿದೇರ | ಶ್ರೀ ಗರುಡ ವಾಹನ (ಕ - ೧) |
| ಪೊಕ್ಕಳು | ನಾಭಿ, ಹೊಕ್ಕಳು. |
| ಪೊಗೆ | ಧೂಮ, ಹೊಗೆ, |
| ಪೋ್ರತ | ನಾವೆ, ಹಡಗು, ಹರಗೋಲು, ಅರ್ಭಕ, ಶಿಶು. |
| ಪೋ್ರತ | ಅಗಲ, ಅಡ್ಡ. |
| ಪೊಚ್ಚಪೊಸದು | ಅತಿನೂತನ. |
| ಪೊಟ್ಟೆ | ಹೊಟ್ಟೆ, ಉದರ, ಗರ್ಭ. |
| ಪೊಟ್ಟೆಯೊಳಗಿಂಬಿಟ್ಟ, | ಉದರದಲ್ಲಿ ಸ್ಥಾನಕೊಟ್ಟ. |
| ಪೊದೆ | ಗಿಡಗಂಟಿಗಳ ಗುಂಪು, ದಟ್ಟತೆ, ಹೊದೆ. |
| ಪೊನ್ನ | ಚಿನ್ನ, ಬಂಗಾರ, ಕಟಕ, ಕನಕ, ಹಾಟಕ. |
| ಪೋಪದು | ಹೋಗತಕ್ಕದು. ಹೋಗುವ, ಸಂಚಿತ |
| ಪೊನ್ನೊಡಲ | ಹಿರಣ್ಯಗರ್ಭ, ಶ್ರೀ ಹರಿ. |
| ಪೊಗಳು | ಹೊಗಳು, ಆನುದೋದ್ರಿಕದಿಂದ ಸ್ತುತಿಸು, ವರ್ಣಿಸು. |
| ಪೊಂಗನಡವರ | ಪೊಂ = ಚಿನ್ನ, ಕನಡ = ಕನ್ನಡಿಯಂತೆ ಪ್ರತಿಬಿಂಬಿಸುವಿಕೆ, ಪ್ರಶುದ್ಧವರ = ಶ್ರೇಷ್ಠ |
| ಪೊರೆ | ಕಾಪಾಡು, ಸಲಹು, ರಕ್ಷಿಸು, ಭಾರ, ಹೊರುವಿಕೆ. |
| ಪೊರಮಡು | ಹೊರಬೀಳು, ಹೊರಡು. |
| ಪೊಳಲು | ಪಟ್ಟಣ, ಶಂಕರ, ಊರು. |
| ಪೋಲು | ಸಾಮ್ಯ, ಹೋಲಿಕೆ, ಸಂಥ. |
| ಪೋಷಿಸು | ಸಲಹು, ಪುಷ್ಟಿಗೈಸು, ಸಾಕು, ಹೊಟ್ಟೆಗೆ ಹಾಕು. |
| ಪ್ರೌಢ | ವಯಸ್ಕ, ಮೇಧಾವಿ, ಕುಶಲ |
| ಪಾಲೋಮಿ | ಶ್ರೀ ಮಂದ್ರದ್ಯುಮ್ನ, ಇಂದ್ರ ಪತ್ನಿಶಚಿ (ಕ - ೧೦) |
| ಪೌಂಡ್ರಕ | ವೇನದೈತ್ಯ ಅವತಾರ ರೂಪಾಭಿಮಾನಿದೈತ್ಯ. |

# ಫ ವರ್ಣವಾಚ್ಯ
## ಶ್ರೀ . ಭಾ. ಮು.ಲ
## ಶ್ರೀ ಫಲಿಯೇನಮಃ
## ಬ ಕಾರವಾಚ್ಯ
## ಶ್ರೀ .ಮು.ಭಾ.ಲ
## ಶ್ರೀ ಬಲಿಯೇನಮಃ

| | |
|---|---|
| ಫಣಿ | ಹಾವು, ಸರ್ಪ, ದ್ವಿಜಿಹ್ವ. |
| ಫಣೀಂದ್ರ | ಹಾವುಗಳೊಡೆಯ, ಇಂದ್ರ, -ಶ್ರೇಷ್ಠ = ಶ್ರೀ ಶೇಷ (ಕ - ೫) |
| ಫಣಿಪ | ಸರ್ಪಶ್ರೇಷ್ಠ, ಶ್ರೀ ಶೇಷ (ಕ - ೫) |
| ಫಣಿಪತಿ | ಸರ್ಪಗಳೊಡೆಯ, ಶ್ರೀ ಶೇಷದೇವ (ಕ - ೫) |
| ಫಣಿವರಾತ ಪತ್ರ | ಶ್ರೀ ಶೇಷನ ಹರವಾದ ಹೆಡೆಗಳನ್ನೇ ಛತ್ರ ಮಾಡಿಕೊಂಡ ಶ್ರೀ ಕೃಷ್ಣ |
| ಫಣಿ ಫಣಾಂಚಿತ ಮುಕುಟರಂಜಿತ | ಶ್ರೀ ಮಹಾರುದ್ರ (ಕ - ೫) |
| ಫಣಾ | ಹೆಡೆ. |
| ಫಣೆ | ಹಣೆ, ಫಾಲ, ಲಲಾಟ. |
| ಫಲ | ಬೆಳೆ, ಸುಗ್ಗಿ, ಗುರಾಣಿ, ಫಾಲು, ಹಣ್ಣು, ಪರಿಣಾಮ. ಪ್ರಯೋಜನ,ಕಾರ್ಯಗತ, ಕಾರ್ಯಪೂರ್ತಿ, ಅಭಿಪ್ರಾಯ ಲಾಭ, ಉಪಯೋಗ, ಆದಾಯ, ಉತ್ಪತ್ತಿ |
| ಫಲಶಾಕ | ಕಾಯಿಪಲ್ಯ |
| ಫಾಲ | ಹಣೆ, ಲಲಾಟ, ಫಣೆ. |

## ಬ

| | |
|---|---|
| ಬಕ | ಕೊಕ್ಕರೆ, ಬಕಪಕ್ಷಿ, ಮನೋಮಾನಿದೈತ್ಯ |
| ಬಗೆ | ರೀತಿ, ಪ್ರಕಾರ ಹಾಗೆ. |

| | |
|---|---|
| ಬಗೆಬಗೆ | ಬಹುಚಿತ್ರವಾದ, ಅನೇಕ ಪ್ರಕಾರ, ಅನೇಕ ವಿಧ, ವಿಧವಿಧ. |
| ಬತ | ಅನುಕಂಪ, ಅಸಂತೋಷ, ಹಾನಿ, ಕನಿಕರ, ಹೀನಸ್ಥಿತಿ, |
| ಬದ್ಧ | ಅಂಕಿತದೊಳಗಾದ, ಅಧೀನನಾದ, ಬಂಧಿಸಲ್ಪಟ್ಟ |
| ಬದುಕು | ಜೀವನ, ಜೀವಿಸು, ಬಾಳು, ಬಾಳುವೆ. |
| ಬಧಿರ | ಕಿವಿಕೇಳವ, ಕಿವುಡ |
| ಬದರಿ | ಬೋರೆ, ಬಾರಿ. |
| ಬದರ | ನಿಶಾಚರ, ಇಂದು, ಚಂದ್ರ. |
| ಬನ್ನ | ಶ್ರಮ, ದುಃಖ, ವ್ಯಥೆ, |
| ಬಡ | ಹೀನ, ತುಚ್ಛ, ಕನಿಷ್ಠ, ದರಿದ್ರ. |
| ಬಡು | ಪಡು, ಹೊಂದು, ಅನುಭವಿಸು, ಭೋಗಿಸು |
| ಬಣ್ಣಿಸು | ಹೊಗಳು, ವರ್ಣಿಸು, ಸ್ತುತಿಸು, ಕೊಂಡಾಡು. |
| ಬಪ್ಪದು | ಬರತಕ್ಕದ್ದು, ಬರುವದು, ಆಗಾಮಿ, |
| ಬಯಕೆ | ಬೇಡಿಕೆ, ಇಚ್ಛೆ, ಆಶೆ. |
| ಬಯಸು | ಇಚ್ಛಿಸು, ಆಶಿಸು, ಬೇಡು. |
| ಬರಡು | ಗೊಡ್ಡು, ಹಿಂಡದ, ಹಾಲು ಕರೆಯದ ಹಸು. |
| ಬಲ | ಶಕ್ತಿ, ಸಾಮರ್ಥ್ಯ, ಹೆಚ್ಚು, ಬಲಾಭಿಮಾನಿ ಮಾರುತ, |
| ಬಲರಾಮ | ಶ್ರೀ ಶುಕ್ಲಕೇಶಾಯುತ, ಶ್ರೀ ಕೃಷ್ಣನ ಅಣ್ಣ, ಶ್ರೀ ಶೇಷಾವತಾರ. |
| ಬಲರಾಮನಾನು ಜಪಾತ್ರ | ಅನಿರುದ್ಧಾವತರಾ. ಅನಿರುದ್ಧ (ಕ - ೧೦) |
| ಬಲಿ | ವಿರೋಚನಾತ್ಮಜ, ಶ್ರೀ ವಾಮನದೇವನನ್ನು ಬಾಗಿಲ ಕಾಯಿಸುವವ, ಇಂದ್ರ, ಭಗವದ್ಭಕ್ತಿ (ಕ - ೧೯) ಇಂದ್ರ (ಕ - ೧೯)ಗಂಧರ್ವ. |
| ಬಲ್ಲಿದ | ಪಂಡಿತ, ತಿಳಿದವ, ಜ್ಞಾನಿ. |
| ಬಲು | ಬಹು, ಬಹಳ, ವಿಪುಲ, ವಿಸ್ತೃತ. |
| ಬಲ್ಲೆನೆಂಬುವರಿಲ್ಲ | ಶ್ರೀ ಮಹಾಲಕ್ಷ್ಮಿ ಮೊದಲುಗೊಂಡು ಯಾರೂ ಸಾಕಲ್ಯೇನ ತಿಳಿದವರಿಲ್ಲ (ಶ್ರೀ ಹರಿಯನ್ನು) |
| ಬವರ | ಯುದ್ಧ, ಸಂಗ್ರಾಮ. |

| | |
|---|---|
| ಬ್ರಹ್ಮ | ಬೃಹತ್ ಮಂದಿರಸ್ಥ = ಬ್ರಹ್ಮ, ಚತುರ್ಮುಖ ಬ್ರಹ್ಮ, ಸೃಷ್ಟಿಕರ್ತ (ಕ - ೩) |
| ಬ್ರಹ್ಮಕಲ್ಪ | ಒಬ್ಬ ಬ್ರಹ್ಮನ ಆಯುಷ್ಯ |
| ಬ್ರಹ್ಮಾಣಿ | ಬ್ರಹ್ಮಪತ್ನಿ, ಬ್ರಹ್ಮ - ವೇದ ತಪಸ್ಸು ಪರಮಾತ್ಮಣಯತಿ = ಹೊಂದಿಸುವವಳು = ಬಹಾಣಿ (ಕ - ೪) |
| ಬಾಂ | ಗಗನ, ಆಕಾಶ. |
| ಬಾಕುಲಿಕ | ಆಶೆ ಬುರುಕ, ಕೂಳಬಕ್ತ |
| ಬಾಗು | ನಮಸ್ಕರಿಸು, ಬಗ್ಗು, ತಗ್ಗಿಸು, ನಮ್ರತೆ, ಭಕ್ತಿ |
| ಬಾಚು | ಕೊಚ್ಚು, ಕತ್ತರಿಸು, ಕೊಯ್ಯು, |
| ಬಾದರಿ | ಬೋರೆ ವೃಂದ. |
| ಬಾದರಾಯಣ | ಬೋರೆಗಿಡಕ್ಕೆ ಆಶ್ರದಾತ, ಬೋರೆಗಿಡದಡಿ ಸನ್ನಿಹಿತ ಶ್ರೀ ಹರಿ. |
| ಬಾಧ್ಯ | ಕಾಟಪಡತಕ್ಕ, ಕೊರಗತಕ್ಕ, ನೋಯಲ್ಪಡುವ, |
| ಬಾಧಕ | ಪೀಡಿಸುವ, ಕೊರಗಿಸುವ, ನೋಯಿಸುವ, |
| ಬಾಧೆ | ಕಾಟ, ಪೀಡೆ, ವ್ಯಥೆ, ಕೊರಗು, ಯಾತನೆ. |
| ಬಾನ್ನವಿರ | ಗಗನಕೇಶ (ಕ-೫)ಬಾಂ = ಆಕಾಶ, ನವಿರ = ಸೆಟಗೂದಲು, |
| ಬಾನ್ನವಿರಸಖ | ಶ್ರೀ ರುದ್ರದೇವಗೆ ಆಶ್ರಯಪ್ರದ, ಮಿತ್ರರಕ್ಷಕ = ಶ್ರೀ ಹರಿ |
| ಬಾನು | ಆಕಾಶ, ಗಗನ, ಆಗಸ, ವ್ಯೋಮ, |
| ಬಾಣ | ಶರ, ಮಾರ್ಗಣ, ಇಕ್ಷು, ಅಜಿಹ್ಮಗ, ಆಶುಗ ೫ (ಅಂಕಿ) ಚಕ್ಷು ತತ್ವಮಾನಿದೈತ್ಯ |
| ಬಾಯಿ | ಮುಖ, ರಸನದಂತಗಳ ಗೂಡು. |
| ಬಾಲ | ಚಿಕ್ಕ, ಮಗು, ಮಾಣವಕ, ಕೇಶ, ಶಿರೋರುಹ, ಕುಂತಲ. |
| ಬಾಲವಟು | ಬಾಲಬ್ರಹ್ಮಚಾರಿ. |
| ಬಾಲಶ | ಮೂರ್ಖ. |
| ಬಾಯ್ತೆರೆ (ಯ್ಪೆರೆ) | ಅಂಗಲಾಚು, ಬೇಡು, ಯಾಚಿಸು, ಗಟ್ಟಿಯಾಗಿ ಕೂಗು,ಬಾಹ್ಲೀಕಿ ದ್ವಾಪರದಲ್ಲಿಯ ಶ್ರೀ ಪ್ರಹ್ಲಾದಾವತಾರ (ಕ - ೧೯) |

| | |
|---|---|
| ಬ್ರಾಹ್ಮಣ | ಬ್ರಹ್ಮಜ್ಞಾನಿ, ಶ್ರೀವಾಣೀಶ, ಬ್ರಹ್ಮಜ್ಞಾನೋಪದೇಶಕ, ಮುಕ್ತಿ ಮಾರ್ಗದರ್ಶಕ. |
| ಬ್ರಹ್ಮಕರಾರ್ಚಿತ | ಶ್ರೀ ಬ್ರಹ್ಮದೇವನಿಂದ ಪೂಜಿತ, ಶ್ರೀ ಹರಿ. |
| ಬ್ರಹ್ಮಾಂಡ | ಜಗತ್ತು, ಪೃಥ್ವಿ, ಶ್ರೀ ಪರಬ್ರಹ್ಮನಿಂದ ಕಳಚಿಬಿದ್ದ, ಶ್ರೀ ಪರಬ್ರಹ್ಮೋದರದಿಂದ ಸಿಡಿದು ಬಿದ್ದ ಕೋಶ. |
| ಬೃಹತೀ | ಮಹಾ, ಮಹತ್ವದಿಂದಲೂ, ಸಂಖ್ಯೆಯಿಂದಲೂ ದೊಡ್ಡ ಅನಂತಮಹಿಮ ಶ್ರೀ ಹರಿ (ಕ - ೧) |
| ಬೃಹಸ್ಪತಿ | ಶಬ್ದಾಭಿಮಾನಿ, ದೇವಗುರು (ಕ - ೧೦) |
| ಬಹು | ಬಹಳ, ಬಲು, ಅತಿ, |
| ಬ್ರಹ್ಮಸಾವರ್ಣಿ | ನಾಮಕ ಶ್ರೀ ಮನು (ಕ - ೧೯) |
| ಬ್ರಹ್ಮಣ್ಯ | ಬ್ರಾಹ್ಮಣಪ್ರಿಯ, ಸುರಕ್ಷಕ, ಗೊ ರಕ್ಷಕ, ಸತ್ಯ, ದಯ, ತಪ, ಶೋಚಗಳು, ಬ್ರಹ್ಮಪ್ರತಿಪಾದ್ಯ ಇವುಗಳಿಗೆ ಪ್ರಿಯ, ತದ್ವಾಚ್ಯ, ತನ್ನಾಮಕ ಶ್ರೀ ಹರಿ (ಕ - ೧) |
| ಬ್ರಹ್ಮಣ್ಯದೇವ | ಶ್ರೀ ಬಿಂಬ (ಕ - ೧) |
| ಬಹುರೂಪ | ಶ್ರೀ ಬಹುರೂಪನಾಮಕ ರುದ್ರ (ಕ - ೧೮) |
| ಬಳಸು | ಉಪಯೋಗಿಸು, ವಿಯೋಗಿಸು. |
| ಬಳಲು | ವ್ಯಥೆಪಡು, ವ್ಯರ್ಥ ಶ್ರಮಿಸು, ತೊಳಲಾಡು, ಅನುಭವಿಸು ಹೊರಳಾಡು, |
| ಬಳಿ | ಹತ್ತಿರ, ಸಮೀಪ, ಇದ್ದೆಡೆ. |
| ಬಳ್ಳಿ | ಲತೆ, ಬಳುಕ, ಶಾಖಾ. |
| ಬಳೆ | ಕಂಕಣ, ಹಸ್ತಾಭರಣ. |
| ಬಳಗ | ಸುತ್ತುವರಿದ, ನೆರೆದ, ಸಮೂಹ, ಆಪ್ತಜನ, ಹತ್ತಿರದವರು. |
| ಬಹಿರದಿ | ಹೊರೆಗೆ, ಹೊರಗಡೆ, ಹೊರಗಿನ. |
| ಬಸಿರು ಬಸರು | ಗರ್ಭ, ಉದರ, ಹೊಟ್ಟೆ, |
| ಬ್ರಾಹ್ಮೀ | ಶ್ರೀ ಬ್ರಹ್ಮಪತ್ನಿ, ಶ್ರೀ ಸರಸ್ವತಿ (ಕ - ೩) |
| ಬಾಹು | ಭುಜ, ತೋಳು |
| ಬಾಹ್ಯ | ಹೊರಗಿನ, ಪರ, ಪರದೇಶ |
| ಬಾರ್ಹಸ್ಪತ್ಯ | ದ್ವಾದರ ರಾಶಿಗಳಲ್ಲಿ ಶ್ರೀ ಬೃಹಸ್ಪತಿಯ ಗತಿ ಕಾಲಮಾನ. |

| | |
|---|---|
| ಬಾಷ್ಪ | ಅಶ್ರು, ಕಣ್ಣೀರು. |
| ಬಾಳು | ಜೀವ, ಜೀವನ, ಜೀವಿಸು. |
| ಬಾಂಬೊಳೆ | ಆಕಾಶದಿಂದ ಬಂದ ಹೊಳೆ, ಗಂಗಾ. |
| ಬಾಂಬೊಳೆಪೆತ್ತ | ಗಂಗೆಯನ್ನು ಪಡೆದವ. |
| ಬಾಂಬೊಳೆಯಜನಕ | ಗಂಗೆಯನ್ನು ಹುಟ್ಟಿಸಿದವ. |
| ಬಾಂದಳ | ಆಕಾಶ |
| ಬಿಕ್ಕು | ಬಿಕ್ಕಳಿಸು |
| ಬಿತ್ತರಿಸು | ಪ್ರಚಲಿಸು, ಪ್ರಕಟಿಸು, ಬೋಧಿಸು, ವಿಸ್ತರಿಸು. |
| ಬಿತ್ತು | ಬೀಜನಾಟು. |
| ಬಿನ್ನವಿಸು, ಬಿನ್ನೈಸು | ಪ್ರಾರ್ಥಿಸು, ಬೇಡಿಕೊಳ್ಳು, ತಿಳಿಸು. |
| ಬಿಡ | ತ್ಯಜಿಸಲಾರ, ಉಪೇಕ್ಷಿಸಲಾರ, ಕಡೆಗಾಣ. |
| ಬಿಡು | ತ್ಯಜಿಸದೆ, ಅಲಕ್ಷಿಸದೆ. |
| ಬಿಡಿಸು | ಅಗಲಿಸು, ದೂರಮಾಡು. |
| ಬಿಡೌಜ | ಶ್ರೀ ದೇವೇಂದ್ರ (ಕ - ೮) |
| ಬಿಟ್ಟಿ | ನಿಷ್ಫಲ, ಮನಸ್ಸಿಲ್ಲದ, ಬಲಾತ್ಕರಿಸದ. |
| ಬಿಟ್ಟಿವರ | ಧೇನಿಸಿದ, ಸಂಬದ, ಅನಾಶ್ರಯ. |
| ಬಿಸುಡು | ಒಗೆ, ಚೆಲ್ಲು. |
| ಬಿಸಜ | ಕಮಲ (ಬಿಸಪನೀರು)ಜ = ಹುಟ್ಟಿದ = ಪದ್ಮ, ತಾಮರಸ |
| ಬಿಸಜಜ | ಶ್ರೀ ಬ್ರಹ್ಮ(ಕ - ೩) |
| ಬಿಸಮಮಿತ್ರ | ಶ್ರೀ ಸೂರ್ಯ |
| ಬಿಸಜಜಾಂಡ | ಬ್ರಹ್ಮಾಂಡ |
| ಬಿಸಜಜಾಂಡಧಾರಕ | ಶ್ರೀ ಹರಿ (ಕ - ೧) |
| ಬಿಸರು ಹಾಪ್ತ | ಶ್ರೀ ಸೂರ್ಯ |
| ಬಿಸಿಲು | ಸೂರ್ಯಛಾಯೆ, ಸೂರ್ಯಪ್ರಕಾಶ, ಸೂರ್ಯಬೆಳಕು, |
| ಬಿಂದು | ಸಣ್ಣಹನಿ, ತುಂತುರ, ಅಲ್ಪ ಶಬ್ದವಾಚ್ಯ ಶ್ರೀ ಹರಿ (ಕ - ೧) |
| ಬಿಂಬ | ಮಂಡಲ. ತಳ, ಚಕ್ರ, ಮೂಲ, ಮೂರ್ತಿ, ಸ್ವರೂಪದ ನಿಜ ಮೂರ್ತಿ, ಶ್ರೀ ಪರಮಾತ್ಮ (ಕ - ೧) |

| | |
|---|---|
| ಬಿಂಬೋಪಾಸನೆ | ಹೃತ್ಕಮಲ, ಮಧ್ಯನಿವಾಸಿ ಸ್ವರೂಪದ ಮೂಲಾಕೃತಿಯ ಉಪಾಸನೆ, ಧ್ಯಾನ, ಚಿಂತನ, ಮಾನಸಿಕ ಪೂಜಾರ್ಚನೆ. |
| ಬೀಜ | ಉತ್ಪತ್ತಿಯ ಮೂಲ, ಕಾರಣ, ಉದ್ದೇಶ, ವೀರ್ಯ, ಧಾತು, ಮೂಲ. |
| ಬುದ್ಧ | ತ್ರಿಪುರಹರ, ಜನವಿಮೋಹಕ, ಶ್ರೀ ಹರಿಯ ಬುದ್ಧರೂಪ, ತಿಳಿದ, ಜ್ಞಾನಿ, ಜಿತೇಂದ್ರಿಯ, ತಿಳಿಪಡಿಸಿದ. |
| ಬುದ್ಧಿ | ತಿಳುವಳಿಕೆ, ಗ್ರಾಹ್ಯಶಕ್ತಿ, ಪ್ರಜ್ಞೆ, ಶಾಸ್ತ್ರ ವಿಚಾರದಿಂದ ಬರುವ ನಿಶ್ಚಯಜ್ಞಾನ, ನಿರ್ಣಯಾತ್ಮಕ ಜ್ಞಾನ. |
| ಬುಧ | ಸ್ವಾದೋದಕಾಭಿಮಾನಿ, ಚಂದ್ರಪುತ (ಕ - ೨೨), ವಿದ್ಯಾವಂತ, ಜ್ಞಾನಿ, ಪಂಡಿತ |
| ಬೂದಿ | ಭಸ್ಮ, ವಿಭೂತಿ. |
| ಬೆಟ್ಟ | ಗುಡ್ಡ, ಪರ್ವತ, ಸಮೂಹ, ವಿಶಾಲ. |
| ಬೆನ್ನು | ಹೊಟ್ಟೆ, ಎದೆಗಳ ಹಿಂಭಾಗ, ಹಿರಿ ಭಾಗ. |
| ಬೆಟ್ಟ, ಬೆನ್ನಿಲಿ | ಸಮುದ್ರ ಮಥನಕಾಲಕ್ಕೆ ಮಂದರವನು ಹೊರಿಸಿದ ದೇವತೆಗಳು |
| ಬೆರೆ | ಕೂಡಿಕೊಳ್ಳು, ಹೊಂದಿಕೊಳ್ಳು, ಸಂಗಮವಾಗು, ಅಂಟಿಕೊಳ್ಳು, ಬತ್ತು, ಒಣಗಿರು. |
| ಬೆರಗು | ವಿಸ್ಮಯ, ಆಶ್ಚರ್ಯಚಕಿತ, ಅಚ್ಚರಿ. |
| ಬೆಳಗು | ಮುಂಜಾವು, ತೊಳೆ, ತಿಕ್ಕು, ಉಜ್ಜಿತೊಳೆ. |
| ಬೆಲ್ಲ | ಕಬ್ಬಿನ ರಸದಿಂದ ತಯಾರಿಸಿದ ಸಿಹಿ, ಗಂಡ |
| ಬೆಲ್ಲದಚ್ಚಿನ ಬೊಂಬೆ | ಬೆಲ್ಲದ ಗೊಂಬೆ, ಬೆಲ್ಲಮಯ. |
| ಬೆಳಸು | ವರ್ಧಿಸು, ಹೆಚ್ಚಿಸು, ಘಂ, ಸಾಕು, ಸಲಹು. |
| ಬೆಸಕೊಳ್ಳು | ಕೇಳಿಕೊಳ್ಳು, ಯಾಚಿಸು, ಅಪೇಕ್ಷಿಸು. |
| ಬೇಸರ | ಚಿತ್ತ ವೈಕಲ್ಯ, ಅನಾಸಕ್ತಿ, ಉಪೇಕ್ಷ |
| ಬೇಸಿಗೆ | ಗ್ರೀಷ್ಮಋತು, ಉಷ್ಣಕಾಲ. |
| ಬೆಂಬಲ | ಅಭಯ, ಆಶ್ರಮ, ರಕ್ಷಣೆ. |

| | |
|---|---|
| ಬೆಂಬತ್ತು | ಬೆನ್ನುಹತ್ತು, ಬಿಡದಿರು, ಹಿಂದೆಯೇ ಹೋಗು. |
| ಬೈಯು | ನಿಂದಿಸು, ದೂಷಿಸು, ಹಳಿ |
| ಬೋಧ | ಚಿನ್ನ ಸುವರ್ಣ, ಹೌಟಕ, ಅಪರಂಜಿ. |
| ಬಂಧು | ರಕ್ತ ಸಂಬಂಧಿಕ, ಅಣ್ಣ, ತಮ್ಮ, ಅಕ್ಕತಂಗಿ, ತಂದೆತಾಯಿ ಇತಿ |
| ಬಂಡುಣಿ | ಭ್ರಮರಭಂಗ ಷಟ್ಪದಿ |

ಭಕಾರಾಂತರ್ಗತ

ಶ್ರೀ . ಭಾ. ಮು.ಲ

ಶ್ರೀ ಭಗಾಯನಮಃ

| | |
|---|---|
| ಭ | ನಕ್ಷತ್ರ, ಚುಕ್ಕೆ, ಉಡು. |
| ಭಕುತ (ಭಕ್ತ) | ಜ್ಞಾನಯುಕ್ತ, ಸುದೃಡ, ಸ್ನೇಹಿತ, ನಂಬಿಗ. |
| ಭಕುತಿ (ಭಕ್ತಿ) | ಜಾನಯುಕ್ತ (ಮಹಾತ್ಯಜ್ಞಾನ) ಸದೃಢ ಸ್ನೇಹ, ನಂಬಿಕೆ, ವಿಶ್ವಾಸ, ಆಶೆ, ಇಚ್ಛೆ. |
| ಭಕ್ತಾದೀನ | ಭಕ್ತವರ |
| ಭಕ್ತರಸಮಾತು | ಭಕ್ತ್ಯುತ್ಪಾದಕ ನುಡಿ. |
| ಭಕ್ತವತ್ಸಲ | ಭಕ್ತಪ್ರಿಯ, ಭಕ್ತಸಖಿ. ಭಕ್ತಕುಟುಂಬ ಭಕ್ತ ಚಿಂತಾಮಣಿ ಭಕ್ತರಿದ್ದಲ್ಲಿ ನಿಲುವ ಭಕ್ತಾಭೀಷ್ಟದ ಶ್ರೀ ಹರಿ (ಕ - ೧) |
| ಭಕ್ತಯೋಗಿ | ಭಕ್ತಿ, ಪ್ರಾಚುರ್ಯ, ಭಕ್ತಿಯಿಂದ ಸಾಧಕ (ಕ - ೩೧೮) |
| ಭಗ | ಷಡ್ಗುಣ್ಯೈಶ್ವರ್ಯವುಳ್ಳವ. |
| ಭಗದತ್ತ | ಶ್ರೀ ಕುಬೇರನ ಅವತಾರ, ರುದ್ರದೇವ (ಕ - ೧೮) |
| ಭಗವದ್ಭಕ್ತ | ಶ್ರೀ ಹರಿ ಸರ್ವೋತ್ತಮತ್ವ ಅರಿತು ಸುದೃಡವಾಗಿ ಸ್ನೇಹ ಮಾಡುವವ. |

| | |
|---|---|
| ಭೃಗು | ಶೀಘ್ರ ಚಲಿಸುವ, ಶ್ರೀ ಭೃಗುಮುನಿಗಳು(ಕ - ೧೫) ಶ್ರೀ ವೈಕುಂಠನನ್ನು ಕಾಲಿಂದ ಒದ್ದವರು. ಶ್ರೀ ಹರಿಯೇ ಸರ್ವೋತ್ತಮನೆಂದು ಜಗಕೆ ಸಾರಿದ ಮಹಿಮರು. |
| ಭಗವದ್ದತ್ತ | ಶ್ರೀ ಪರಮಾತ್ಮನಿಂದ ಕೊಡಲ್ಪಟ್ಟ |
| ಭೃಗುರಾಮ | ಶ್ರೀ ಭೃಗು ಕುಲೋದ್ಧಾರಕ, ಪರಾಶರ ಋಷಿಗಳಲ್ಲಿ ಅವತರಿಸಿದ. ಶ್ರೀ ಪರಶುರಾಮ (ಕ - ೧) |
| ಭಗವದ್ದಾಸ | ಶ್ರೀ ಹರಿ ಸೇವಕ, ಶ್ರೀ ಹರಿ ಅಣುಗ, ಶ್ರೀ ಹರಿಯಾಧೀನ. |
| ಭಗವದಿಚ್ಛೆ | ಶ್ರೀ ಹರಿ ಸಂಕಲ್ಪ |
| ಭಜನೆ | ಭಕ್ತಿ ಪೂರ್ವಕ ಸ್ತೋತ್ರ, ಸ್ತವನ, ಕೀರ್ತನೆ. |
| ಭಜಕ | ಭಕ್ತ, ಭಕ್ತಿಯು ತಸ್ತೋತ್ರಾದಿ ಕೀರ್ತಕ. |
| ಭಜ | ವಿಭಾಗಿಸು, ಹಂಚು, ಭಾಗ, ಪಾಲು ಮಾಡು, ಭ = ಭಕ್ತಿ, ಜಪಹುಟ್ಟಿದ್ದು, ಭಕ್ತಿಯಿಂದಾಗುವ ಕಾರ್ಯ. |
| ಭರ್ತೃ | ಪತಿ, ಧವ, ಈಶ, ಪೋಷಕ. |
| ಭೃತ್ಯ | ಸೇವಕ, ಅಣುಗ, ಆಜ್ಞಾಧಾರಕ. |
| ಭದ್ರ | ಎತ್ತು, ವೃಷಭ, ಸೌರಮೇಯ, ಗಟ್ಟಿಯಾಗಿ, ಬಿಗಿ, ಅದೃಷ್ಟ, ಸುಖ, ಶುಭ, ಮಂಗಳಷ ಯಶ, ಜೋಕೆ. |
| ಭದ್ರಾ | ಶ್ರೀ ವಾಸುದೇವನ ತಂಗಿಯ ಕೈಕೇಯಿ ದೇವಿಯ ಮಗಳು. ಶ್ರೀ ಹರಿ ಮಡದಿ (ಕ - ೭) |
| ಭ್ರಮರ | ಭೃಂಗ, ಷಟ್ಪದಿ, ಗುಂಗೀಹುಳ, ಮಧುಪ. |
| ಭ್ರಮಣ | ತಿರುಗಾಡುವಿಕೆ, ಸುತ್ತಾಡುವಿಕೆ, ತಿರುಗುವಿಕೆ, |
| ಭರ್ಮ | ಬಂಗಾರ, ಹಾಟಕ, ಹಿರಣ್ಯ |
| ಭರ್ಮಗರ್ಭ | ಹಿರಣ್ಯಗರ್ಭ, ಶ್ರೀ ಬ್ರಹ್ಮ (ಕ - ೩) |
| ಭರ್ಮಗರ್ಭ ಜನಕ | ಶ್ರೀ ವಾಸುದೇವ (ಕ - ೧) |
| ಭ್ರಮೆ (ಮಾ) | ತಪ್ಪು ಗ್ರಹಿಕೆ, ಕುತರ್ಕ, ತಪ್ಪು ತಿಳುವಳಿಕೆ. |
| ಭಯ | ವಿಘ್ನ, ಹೆದರಿಕೆ, ಅಂಜಿಕೆ. |
| ಭರತ | ಭಾರತ ಆಕ್ರಮಿಸಿ ಭರತ ಭೂಮಿಯೆನಿಸಿದ ಶ್ರೀ ದುಷ್ಯಂತ ಪುತ್ರ ಭರತ, ಅವಧೂತ ಶಿಖಾಮಣಿ ಜಡಭರತ, ಶ್ರೀ ರಾಮನನುಜ, ಕಾಮಾವತಾರ ಭರತ (ಕ - ೮), ಶ್ರೀ ಭಾರತಿಪತಿ ಶ್ರೀ ಮಾರುತ (ಕ - ೩) |

| | |
|---|---|
| ಭರ | ತುಂಬ, ತುಂಬಿಸು, ತುಂಬು, ತುಂಬಿದ, ಧರಿಸು, ಧರಿಸಿದ |
| ಭವ | ಏಕಾದಶ ರುದರಲ್ಲಿ ಶ್ರೇಷ್ಟ ಶ್ರೀ ಪಾರ್ವತೀಪತಿ ರುದ್ರದೇವ (ಕ - ೫) ಸಂಸಾರ, ಆಗು, |
| ಭವರೋಗಭೇಷಜ | ಸಂಸಾರಾಮಯಕ್ಕೆ ವೈದ್ಯ, ಸಂಸಾರ ತಾಪ ಶಾಮಕ ಶ್ರೀ ಹರಿ (ಕ - ೧) ಶ್ರೀ ವಾಯು (ಕ - ೩) |
| ಭವಾಬ್ಧಿಪ್ರೋತ | ಸಂಸಾರ ಸಾಗರ ದಾಟಿಸುವ ನಾವೆ. |
| ಭವಾಂಧಕಾರ | ಸಂಸಾರ ದುಃಖ |
| ಭುವವನಧಿ | ಸಂಸಾರ ಸಾಗರ. |
| ಭವದುಃಖ | ಸಂಸಾರ ತಾಪ. |
| ಭವ್ಯ | ಮಂಗಳ, ಶುಭ, ಕಲ್ಯಾಣ, ಕುಶಲ, ಕ್ಷೇಮ, ಸುಂದರ, ಪ್ರಾರಬ್ಧವರ್ತಮಾನ |
| ಭವಾಟವಿ | ಪಾಪಾರಣ್ಯ, ಸಂಸಾರಣ್ಯ. |
| ಭವಿಷ್ಯ | ಮುಂದಿನ, ಮುಂದಾಗುವ, ಮುಂಬರುವ, ಭಾವೀ |
| ಭವಿಷ್ಯದ ಬ್ರಹ್ಮ | ಮುಂಬರುವ ಶ್ರೀ ಬ್ರಹ್ಮ ವಾಯು (ಕ - ೩) |
| ಭವಕಟ್ಟು, ಭವಪಾಶ | ಸಂಸಾರಬಂಧನ. |
| ಭವಜನಿತ | ಸಂಸಾರದಲ್ಲಿ ಬಂದ, ಸಂಸಾರದಿಂದ ಹುಟ್ಟುವ |
| ಭವಾನಿ | ಶ್ರೀ ಉಮಾದೇವಿ (ಕ - ೨) |
| ಭಸ್ಮ | ಬೂದಿ, ವಿಭೂತಿ, ಕ್ಷಾರ, ರಕ್ಷಾ, ನಾಶ, ಲಯ. |
| ಭಕ್ಷ್ಯ | ತಿನಸು, ಭಕ್ಷಿ, ಸಂಯೋಗ್ಯ, ಭಕ್ಷಿಸಲ್ಪಡುವ, |
| ಭಾ | ಕಾಂತಿ, ಪ್ರಕಾಶ, ಶೋಭೆ, ಲಾವಣ್ಯ |
| ಭಾಗವತ | ಶ್ರೀ ಭಾಗವತ ಶಾಸ್ತ್ರ, ಕಥನರೂಪ, ಶ್ರೀ ಮನ್ ವ್ಯಾಸಕೃತ ಮಹಾ ಶಾಸ್ತ್ರ ಪುರಾಣ, ಭಕ್ತ, ಶ್ರೀ ಹಂಸಪ್ರೋತ್ತಮತ್ವಾವಾದಿ. |
| ಭಾಗವತರರಸ | ನಿಸ್ಸೀಮ ಭಕ್ತರ ಒಡೆಯ, ತತ್ವೇಶರೊಡೆಯ. |
| ಭಾಗೀರಥಿ | ಶ್ರೀ ಭಗೀರಥ ರಾಜರ್ಷಿಯಿಂದ ಕರೆತರಲ್ಪಟ್ಟ ಶ್ರೀ ಗಂಗಾದೇವಿ (ಕ - ೨೦) |
| ಭಾರ್ಗವ | ಶ್ರೀ ಪರಶುರಾಮ, ಶ್ರೀ ಭೃಗು ಕುಲೋದ್ಧಾರಕ, ಅಗ್ನಿಯಂತರ್ಗತ (ಕ - ೧) |

| | |
|---|---|
| ಭಾಗ | ಭಾಗ್ಯ, ಪಾಲು, ಅಂಶ, ತುಂಡು, ತುಕಡಿ, ಹಂತ. |
| ಭಾಗೀರಥಿಜನಕ | ಶ್ರೀ ತ್ರಿವಿಕ್ರಮ (ಕ - ೧) |
| ಭಾಮಿನಿ | ಸುಂದರಿ, ಕಾಂತೆ, ಚೆಲುವೆ, ಚಂದ್ರಮುಖಿ, ತ್ರಿಲೋಕ ಸುಂದರಿ, ಶ್ರೀ ಲಕುಮಿ (ಕ - ೨) |
| ಭಾಮಿನಿ ಷಟ್ಪದಿ | ಶ್ರೀ ಪರಮಾತ್ಮನ ಶ್ರೀ ಹರಿಪಾದ ಕಮಲ ಭೃಂಗ ವೆಂದರೆ ಶ್ರೀ ಲಕುಮಿ (ಕ - ೨) ಹಾಗೆಯೇ, ಶ್ರೀ ಹರಿಕಥಾಮೃತಸಾರ ಸೇವಿಸಲು ಯೋಗ್ಯವೆಂದರೆ ಶ್ರೀ ಭಾಮಿನಿ ಷಟ್ಪದಿಯೇ. |
| ಭ್ರಾಮಕ | ಗಮನಾಗಮನ ಬುದ್ಧಿಯ, ಸಂಶಯ ಜ್ಞಾನಿ. |
| ಭಾನುಮಂಡಲಗ | ಸವಿತ ಮಂಡಲ ಮಧ್ಯವರ್ತಿ ಶ್ರೀ ಲಕ್ಷ್ಮೀನಾರಾಯಣ. |
| ಭಾನು | ಸೂರ್ಯ. |
| ಭಾರ | ಒಜ್ಜೆ. |
| ಭಾರತಿ | ಭರತನ ಪತ್ನಿ ಶ್ರೀ ಕೃತಿ ಪತಿಯ ಮಗಳು, ಅವ್ಯಕ್ತ ತತ್ವಕ್ಕೆ ಶ್ರೀ ಲಕುಮಿಯ ನಂತರ ಅಭಿಮಾನಿ, ಶ್ರೀ ಮಾರುತನ ಪತ್ನಿ (ಕ - ४), ಪರಮಾನ, ಮಾನಿ. |
| ಭಾರತೀಶ | ಭರತ, ಶ್ರೀ ಮಾರುತಿ (ಕ - ೩) |
| ಭಾರತೀಶಪಿತ | ಶ್ರೀ ಸಂಕರ್ಷಣ (ಕ - ೧) |
| ಭಾರದ್ವಾಜ | ಶ್ರೀ ಭಾರದ್ವಾಜ ಮಹರ್ಷಿಗಳು. ಇವರ ವೀರ್ಯದಿಂದಲೇ ಶ್ರೀ ದ್ರೋಣಾಚಾರ್ಯರ ಅವತಾರ. |
| ಭಾರ್ಯ | ವಿಶೇಷ ಕಾಂತಿಯುಳ್ಳ, ಹೆಂಡತಿ, ಅರ್ಧಾಂಗಿ, ಪತ್ನಿ. |
| ಭಾರತ | ಭರತಭೂಮಿ, ಮಹತ್ವದಿಂದಲೂ, ವಿಸ್ತೃತದಿಂದಲೂ ಭಾರವಾದ ಶ್ರೀ ಮನ್ ವ್ಯಾಸಗ್ರಂಥ ಐದನೇಯ ವೇದವೆನಿಸುವ ಗ್ರಂಥ. |
| ಭಾರತಿಪ | ಶ್ರೀ ವಾಯು (ಕ - ೩) |
| ಭಾರತಪ್ರತಿಪಾದ್ಯ | ಶ್ರೀ ವೀರನಾರಾಯಣ ಹರಿ (ಕ - ೧) |
| ಭಾರಭೃತ್ | ಭಾರಭರಿತ, ಭಾರವಾಹಕ, ಭಾರಕರ್ತನೂ, ಶ್ರೀ ಹರಿ. ಭಾರ = ಶ್ರೀ ರಮಾ = ಶ್ರೀ ರಮಾಧವ (ಕ - ೧) |

ಭಾವೀ ಮುಂದಾಗುವ, ಮುಂಬರುವ, ಮುಂದಿನ
ಭಾವೀ ವಿರಂಚಿ .ಮುಂದಿನ ಬ್ರಹ್ಮ - ಶ್ರೀ ವಾಯುದೇವರು (ಕ - ೩)
ಭಾವ್ಯ ಭಾವಿಸಲು ಯೋಗ್ಯ, ಭಾವಿತ, ಶ್ರೀ ಹರಿವಾಯು (ಕ - ೧೩)
ಭಾವನೆ ಯೋಚನೆ, ಚಿಂತನೆ, ಆಲೋಚನೆ.
ಭಾವ ಸತ್ತೆ, ಸ್ವಭಾವ, ಚೇಷ್ಟಾ, ಸುಸಂಸ್ಕೃತ,
ಜ್ಞಾನಿ,ಅಸ್ತಿತ್ವ, ನೈಸರ್ಗಿಕ, ಉದ್ದೇಶ, ಅರ್ಥ, ಸಾರಾಂಶ.ತೃಪ್ತಿ, ಅಕ್ಕನ ಗಂಡ, ಗಂಡನ ಅಣ್ಣ, ಹೆಂಡತಿಯ ಅಣ್ಣ.
ಭಾಷೆ ಮಾತು, ನುಡಿ.
ಭಾಷ್ಯ ಗ್ರಂಥಕರ್ತರ ಅಭಿಪ್ರಾಯವನ್ನು ತಿಳಿಸುವಿಕೆ. ಗ್ರಂಥಕರ್ತರ ಇಂಗಿತಾರ್ಥ, ವಿಸ್ತಾರ.
ಭಾಸ್ಕರ ಸೂರ್ಯ, ದಿನಕರ.
ಭಾಸ್ವ ದಿನಪ, ಭಾಸ್ಕರ, ಸೂರ್ಯ.
ಭಾಂಡ ಮಡಿಕೆ, ಕೊಡ, ಪಾತ್ರೆ, ಗಡಿಗೆ.
ಭಾಂಡಕಾರಕ ಕುಂಬಾರ, ಪಾತ್ರೆ ಮಾಡುವವ.
ಭಿಡೆ ದಾಕ್ಷಿಣ್ಯ, ಆಗ್ರಹ, ಆದರ.
ಭೀಮ ಭಯಂಕರ, ಭೈರವ, ಭೀಷ್ಮ, ಘೋರ, ಭೀಷಣ, ಶ್ರೀ ಶ್ರೀನಿವಾಸನ ಭಕ್ತ ಕುಂಬಾರ ಭೀಮ, ಶ್ರೀ ಕುಂತಿದೇವಿಯಲ್ಲಿ, ವಾಯು ಅವತಾರ, ಅಚ್ಚಿನ್ನ ಹರಿಭಕ್ತ, ಶ್ರೀ ಭೀಮಸೇನ.ವೃಕೋದರ ದೈತ್ಯರಿಗೆ ಬಹು ಭಯಂಕರ ಶ್ರೀ ವಾಯು. ಶ್ರೀ ಭೀಮನಾಮಕ ರುದ್ರ (ಕ - ೧೮)
ಭೀಷ್ಮ ಘೋರ, ಗಂಗಾ ಪುತ್ರ, ಕುರುವರ ಮುತ್ತಾತ (ಕ - ೧೮) ದ್ಯು ನಾಮಕ ವಸುವಿನ ಅವತಾರ ಬ್ರಹ್ಮಾವೇಶ.
ಭೀಷ್ಮಕ ಶ್ರೀ ಮಿತ್ರನಾಮಕ ಸೂರ್ಯಾವತಾರ.
ಭೀಯ ಭೀಕರ, ಅಂಜಿಕೆ ಬರುವ, ಅಂಜಿಸುವ.
ಭುಕನುಂಗುವ ಭೋಗಿಸುವ, ಉಣ್ಣುವ, ಭಕ್ಷಕ.
ಭುಜ ತೋಳು, ಬಾಹು.

| | |
|---|---|
| ಭುಜಿ | ಪರಮಾತ್ಮನು ಏನು ಕೊಟ್ಟಿದ್ದರದನ್ನು ಉಂಡು ಅರ್ಪಿಪ ಶ್ರೀ ಶಾರದೇವಿ (ಕ - ೪) |
| ಭುಜಗ | ಸರ್ಪ, ಅಹಿ. |
| ಭುಜಗಭೂಷಣ | ಸರ್ಪಾಲಂಕೃತ ಶ್ರೀ ಉಮೇಶ (ಕ - ೫) |
| ಭುಜಗಭೂಷಣಪೂಜ್ಯ | ಶ್ರೀ ರುದ್ರ ವಂದ್ಯ ಶ್ರೀ ಹರಿ (ಕ - ೧) |
| ಭುಂಜಿಸು | ಉಣ್ಣು, ಅನುಭವಿಸು, ಭಕ್ಷಿಸು. |
| ಭುವನ | ಜಗತ್ತು ಲೋಕ. |
| ಭುವನಪಾವನ | ಜಗತ್‌ಶುದ್ಧಿಕಾರಕ, ಜಗನ್ಮಂಗಳ |
| ಭೂ | ಚತುರಸ್ರ ಶುದ್ಧ ಮಂಡಲಾಭಿಮಾನಿ (ಕ - ೨೫), ಭೂಮಿ, ರಜೋಮಾನಿ, ಶ್ರೀ ಲಕುಮಿಯ ಭೂರೂಪ (ಕ - ೨), ಮಣ್ಣು ಶ್ರೀ ಭೂದೇವಿ, ಭೂಲೋಕ. |
| ಭೂತ | ಆಗಿಹೋದ, ದೆವ್ವ, ಅತತ್ವಾತ್ಮಕ ದೇವತೆ, ಸಾಧಾರಣ ದೇವತೆ, ಲಬ್ಧ, ಪ್ರಾಪ್ತ, ಗೆದ್ದ, ಜೀವ, ಮೂಲವಸ್ತು. |
| ಭೂತಭವ್ಯಭ ವತ್ಪ್ರಭು | ಶ್ರೀ ರುದ್ರವಂದ್ಯ ಶ್ರೀ ಹರಿ (ಕ - ೧) |
| ಭೂತಳ | ಭೂಮಿ, ಪೃಥ್ವಿ, ಭೂಲೋಕ |
| ಭೂತಭಾಹವಪ | ಪಂಚಭೂತಾದಿ ಸೃಷ್ಟಿ ಸ್ಥಿತಿಲಯಕರ್ತಾ ಶ್ರೀ ಹರಿ (ಕ - ೧) |
| ಭೂತಳಾಧಿಪ | ರಾಜ, ಚಕ್ರವರ್ತಿ |
| ಭೂಚರ | ಕುಕ್ಕುಟ, ನೆಲದ ಮೇಲೆ ಸಂಚರಿಸುವ |
| ಭೂಧರ | ನಗ, ಪರ್ವತ, ಅದ್ರಿ. |
| ಭೂಪ | ರಾಜ, ನಿರ್ಭಯ, ವಿಜಯಿ, ಅರಸ, ಭೂಪಾಲ, ಧರಣಿಪತಿ. |
| ಭೂಮ | ಗುಣಪೂರ್ಣ, ಭೂದಾನಿ, ಶ್ರೀ ಭೃಗುರಾಮ (ಕ-೧) |
| ಭೂಮಿ | ಜಾಗ, ಪೃಥ್ವಿ, ಮಣ್ಣು. |
| ಭೂರಿ | ಬಹು, ವಿಪುಲ, ಜತೆ, ಜೋಡಿ. |
| ಭೂಷಣ | ಅಲಂಕಾರ, ಅಲಂಕೃತ, ಶೋಭೆ. |

| | |
|---|---|
| ಭೂಸುರ | ಬ್ರಾಹ್ಮಣ, ಭೂಮಿಯ ಮೇಲಿರುವ ದೇವತೆಗಳು, ಸುಜನರು. |
| ಭೂರುಹ | ಭೂಮಿಯಲ್ಲಿ ಹುಟ್ಟುವ ಗಿಡ, ಮರ, ಬಳ್ಳಿಗಳು. |
| ಭೂರುಹಜ | ಫಲ, ಪುಷ್ಪ, ಧಾನ್ಯ, ಗಿಡ ಬಳ್ಳಿಗಳಿಂದ ಹುಟ್ಟಿದ. |
| ಭೂರಿ | ಶ್ರೀ ಬಾಹ್ಲೀಕ ರಾಜನ ಮಗ ಶ್ರೀ ಅಜೈಕ ಪಾದೂದಕ ರುದ್ರಾವತಾರ (ಕ - ೧೮) |
| ಭೂರಿಶ್ರವ | ಶ್ರೀ ಅಹಿರ್ಬುಧ್ನಿ ನಾಮಕ ರುದ್ರಾವತಾರ (ಕ -೧೮) |
| ಭೃಷ್ಟ | ಚ್ಯುತ, ಕಡೆಗಾಣಿಸಿಕೊಂಡ, ತ್ಯಜಿಸಲ್ಪಟ್ಟ, ಕೆಳಗೆ ಬಿದ್ದ. |
| ಭೇಕ | ಕಪ್ಪೆ, ದುರ್ದುರ. |
| ಭೇದ | ವಿಂಗಡಿಸುವಿಕೆ, ಭಿನ್ನತೆ, ಅಂತರ, ವ್ಯತ್ಯಾಸ. |
| ಭೇದವರ್ಜಿತ | ಶ್ರೀ ಹರಿ ವಾಯು (ಕ - ೧೩) |
| ಭೇಷಜ | ವೈದ್ಯ, ರೋಗಪರಿಹಾರಕ. |
| ಭೇಶ | ಶ್ರೀ ಚಂದ್ರ (ಕ - ೧೨) |
| ಭೋಗ | ಹಾವಿನ ದೇಹ, ಅನುಭವ, ಫಲ, ಪರಿಣಾಮ. |
| ಭೋಗಿ | ಹಾವು, ಸರ್ಪ. |
| ಭೋಗಿಶಯನ | ಶ್ರೀ ಶೇಷಶಾಯಿ ಶ್ರೀ ಮದನಂತ (ಕ - ೧) |
| ಭೋಜನ | ಊಟ, ಆಹಾರ. |
| ಭೋಜ್ಯ | ಉಣ್ಣತ್ಯೋಗ್ಯ, ಉಣತಕ್ಕ, ಉಣ್ಣುವ. |
| ಭೋಕ್ತ | ಉಣ್ಣುವವ, ಭೋಗಿಸುವವ, ಅನುಭವಿಸುವ. |
| ಭೋಗ್ಯ | ಅನುಭವಿಸತಕ್ಕ, ಭೋಗಿಸಲು ಯೋಗ್ಯ. |
| ಭೋಜನದಾಯಿ | ಅನ್ನದಾತಾ, ಆಹಾರಕೊಡುವವ, |
| ಭೌಚ | ನಾಮಕ ಶ್ರೀ ಮನು (ಕ - ೧೯) |
| ಭೃಂಗ | ಆಸಕ್ತ, ರತ, ದುಂಬಿ, ಗುಂಗೀಹುಳ, ಹೀರು. |
| ಭಂಗ | ನಾಶ, ಒಡೆಯುವಿಕೆ, ಹರಿಯುವಿಕೆ, ದೂರ ಊರ್ಮಿ, ತೆರೆ.ವೈಕಲ್ಯ, ಹ್ರಾಸ, ಕೆಡಿಸುವಿಕೆ. |
| ಭಂಗಿಸು | ನಾಶಮಾಡು, ಕಡಿಸು, ಕಳ, ದೂತಮಾಡು. |
| ಭಂಜನ | ಸಂಹಾರ, ಕತ್ತರಿಸುವಿಕೆ, ಬೇರ್ಪಡಿಸುವಿಕೆ, ಮುರಿಯುವಿಕೆ, ವಿಫಲಗೊಳಿಸುವಿಕೆ. |
| ಭಂಡ ಭೃಂಶ | ಹೋದ, ಕಳೆದ, ಭೇದ, ನಾಶ |

## ಮಕಾರಾಂತರ್ಗತ
## ಶ್ರೀ ಭಾ.ಮು.ಲ
## ಶ್ರೀ ಮನುವೇನಮಃ

| | |
|---|---|
| ಮಕರ | ಸಾಮಾನ್ಯವಾಗಿ ಮೊಸಳೆ, ಮುಖ್ಯಾರ್ಥ, ಹಿಮಸಾರಂಗ |
| ಮರ್ಕಟ | ಮಂಗ, ಕೋತಿ, ಚಂಚಲ, ಅಸ್ಥಿತ. |
| ಮಕ್ಕಳು | ಬಾಲಬಾಲೆಯರು, ಆತ್ಮಜರು, ಹುಡುಗ, ಹುಡಿಗಿಯರು. |
| ಮುಕ್ಕಿಸು | ಜೀರ್ಣಿಸು, ದಕ್ಕಿಸಿಗೊಳ್ಳು. |
| ಮುಖ | ಯಾಗ, ಯಜ್ಞ, ಕೃತು |
| ಮಗಳು | ಆತ್ಮಜೆ, ಕುವರಿ ಪುತ್ರಿ. |
| ಮೃಗ | ಮೃಗಶಿರ ನಕ್ಷತ್ರ, ಚಿಗರಿ, ಸಾರಂಗ, ಪಶು |
| ಮಗು | ಕೂಸು, ಅಜ್ಞಾನಿ, ಅಪೂರ್ಣ. |
| ಮಗ | ಪುತ್ರ, ಕುವರ, ಆತ್ಮಜ, ಸುತ. |
| ಮೃಗವೃಕೋದರ | ಶ್ರೀ ಶಶಾಂಕ, ಶ್ರೀ ಚಂದ್ರ |
| ಮಗ್ನ | ಲೀನವಾದ, ಮುಳುಗಿದ, ಆಸಕ್ತಿ. |
| ಮಜ್ಜಾ | ಶುಕ್ರ, ಧಾತು, ವೀರ್ಯ. |
| ಮಜ್ಜನ | ಮುಳುಗುವಿಕೆ, ಸ್ನಾನ |
| ಮತ | ಅಭಿಪ್ರಾಯ, ಸ್ವೀಕೃತ, ಒಪ್ಪಿದ, ಸಿದ್ಧಾಂತ, ವಾದ, ಉಪದೇಶ ತತ್ವ, ನಂಬಿಕೆ, ಅಭಿಮತ, ಸಲಹೆ. |
| ಮರ್ತ್ಯ | ಜೀವ, ಹುಟ್ಟಿದ, ಸಾವುಳ್ಳ, ನಾಶವುಳ್ಳ. |
| ಮತ್ತ | ಸೊಕ್ಕಿದ, ಕೊಬ್ಬಿದ, ಪೂರ್ಣ ತೃಪ್ತಿ, ಮಧಾಂದ. |
| ಮೃತ್ಯುಂಜಯ | ಜಿತಮರಣ, ಯಮನನ್ನು ಮಾರ್ಕಂಡೇಯರ ನಿಮಿತ್ತ ಗೆದ್ದ ಶ್ರೀ ಮಹರುದ್ರದೇವ (ಕ - ೫) |
| ಮೃತ್ಯು | ಮರಣ, ಸಾವು, ಮೃತ್ಯು ಅಭಿಮಾನಿದೇವತೆ, ಯಮ. |
| ಮತ್ಸ್ಯ | ಶಫರ, ಮೀನ, ಶ್ರೀ ಹರಿಯ ಮತ್ಸ್ಯಾವತಾರ. |
| ಮೃತಿ | ಮರಣ, ಸಾವು, ನಾಶ. |

| | |
|---|---|
| ಮತ್ಸರ | ಅಸೂಯೆಪಡುವ, ಹೊಟ್ಟೆಕಿಚ್ಚಿನ, ದ್ವೇಷಿ, ಕಪಟಿ, ಸಹನೆಇಲ್ಲದ, ಸಹಿಸದ. |
| ಮತ್ಸ್ಯಕೇತನ | ಮೀನಾಂಕ ಧ್ವಜ ಶ್ರೀ ಕಾಮ (ಕ - ೮) |
| ಮತ್ಸ್ಯಕೇತನಜನಕ | ಶ್ರೀ ಕಾಮನ ತಂದೆ ಶ್ರೀ ಹರಿ |
| ಮತಿ | ಬುದ್ಧಿ, ತಿಳಿವಳಿಕೆ, ಜ್ಞಾನ. |
| ಮಥನ | ಕಡೆ, ಚುಚ್ಚುಮಾಡು, ನಾಶಮಾಡು ಸಂಹರಿಸು. |
| ಮದನ | ಸುಂದರ, ಚೆಲುವ, ಸ್ಮರೂಪ, ಶ್ರೀ ಕಾಮ (ಕ - ೮) |
| ಮದುವೆ | ಜೋಡಣೆ, ಕೂಡಿಸುವಿಕೆ, ಲಗ್ನ. |
| ಮದಿರ | ಅಪೇಯ, ಮದ್ಯ. |
| ಮೃದ | ಮಣ್ಣು, ಕಲಿಸಿದ ಮಣ್ಣು, ಮೃದುವಾದ ಮಣ್ಣು. |
| ಮೃದು | ಮೆತ್ತಗೆ, ಮೆಲ್ಲಗೆ. |
| ಮದ | ಗರ್ವ, ಸೊಕ್ಕು, ದುರ್ಹೆಮ್ಮೆ, ದುರಹಂಕಾರ. |
| ಮದ್ದಾನೆಯಂದದಿ | ಸೊಕ್ಕಿದ ಆನೆಯಂತೆ, ಲೆಕ್ಕಿಸದೆ, ಗಣಿಸದೆ. |
| ಮೃದಳ | ಸೂಕ್ಷ್ಮ |
| ಮೃದಾಭರಣ | ಮಣ್ಣಿನ ಅಲಂಕಾರಿಕ ಒಡವೆಗಳು, |
| ಮಧುರ | ಸು, ಒಳ್ಳೆ |
| ಮಧುಸಮಹ | ವಸಂತ ಋತು |
| ಮಧುಪ | ಭ್ರಮರ, ಷಟ್ಪದ, ಭೃಂಗ, ಗುಂಗೀಹುಳ. |
| ಮಧ್ಯ | ನಡುವಿನ, ಸಂರಕ್ಷಣೆ, ಟೊಂಕ, ಎರಡರ ನಡುವಿನ ಸ್ಥಿತಿ. |
| ಮಧ್ವ | ಮಣಿಮಂತನನ್ನು ಧ್ವಂಸಮಾಡಿದ, ಮಧು = ಜ್ಞಾನಾಮೃತವನ್ನು ಸುರಿಸುವವ, ಜ್ಞಾನಿಗಳ ಸಂರಕ್ಷಕ, ಜ್ಞಾನಿಗಳ ರಕ್ಷಣೆಯ ಭಾರ ವಹಿಸುವ. |
| ಮಧು | ಜೇನುತುಪ್ಪ, ಮಧು ನಾಮಕ ದೈತ್ಯ, ಅಮೃತ. |
| ಮಧುಸೂದನ | ಮಧುನಾಮಕ ದೈತ್ಯನನ್ನು ದಹಿಸಿದವ ಶ್ರೀ ಹರಿ (ಕ - ೧) |
| ಮಧುವಿರೋಧಿ | ಮಧುನಾಮಕ ದೈತ್ಯಾರಿ ಶ್ರೀ ಹರಿ (ಕ - ೧) |
| ಮಧುಮಥನ | ಮಧುನಾಮಕ ದೈತ್ಯನನ್ನು ಕೊಂದವ ಶ್ರೀಹರಿ (ಕ-೧) ಸಮುದ್ರ ಮಥನ ಮಾಡಿಸಿ ಅಮೃತ ತಂದುಕೊಟ್ಟವ. |

ಮಧುಹಾ ಮಧು ಮಥನ ಶ್ರೀ ಹರಿ. ಮಂಡಿಗೆಯಂತರ್ಗತ (ಕ - ೧) ಸುಖ ಪೂರ್ಣ (ಕ - ೧), ದೈತ್ಯರ ಸುಖವನ್ನು ಭಕ್ತರಿಗೆ ಹಂಚುವವ.

ಮಧ್ಯಮ ನಡುವಿನ, ಎರಡನೆಯ, ಸಾಮಾನ್ಯ. ಸಾಧಾರಣ.

ಮಧ್ವಾಂತಃಕರಣರೂಢ ಶ್ರೀ ಮದಾನಂದ ತೀರ್ಥ ಹೃದಯ ಸಿಂಹಾಸನಾರೂಢ - ಶ್ರೀ ಹರಿ

ಮಧುಕರ ಪುಷ್ಪದ, ಭೃಂಗ, ಭ್ರಮರ.

ಮಧ್ವಲ್ಲಭ ಶ್ರೀ ಮಧ್ವಪತಿ ಶ್ರೀ ಹರಿ (ಕ - ೧)

ಮಧುಕೈಟಭ ಮನ ಬುದ್ಧಿಮಾನಿದೈತ್ಯ ಜತೆ.

ಮಧ್ವಾಗಮಪಯೋಬ್ಧಿ ಶ್ರೀ ಮದಾನಂದ ತೀರ್ಥ ಭಗವತ್ಪಾದರ ಶಾಸ್ತ್ರವೆಂಬ ಕ್ಷೀರಸಾಗರ.

ಮಧ್ಯಗೇಹ ನಡುಮನೆ, ಶ್ರೀ ಮದಾಚಾರ್ಯರು ಅವತರಿಸಿದ ಮನೆತನ.

ಮನು ಮನ್ವಂತರಾಧಿಪ, ಮಾನವಕುಲ ವರ್ಧಕ.

ಮನ ಮನಸ್ಸು, ಭಾವನೆ, ೧೧ ನೆಯ ಇಂದ್ರಿಯ.

ಮನೋಜ ಶ್ರೀ ರತೀಶ ಶ್ರೀ ಕಾಮ (ಕ - ೮), ಶ್ರೀ ಚಂದ್ರ (ಕ - ೧೨ )

ಮನುಷ್ಯಗಂಧರ್ವ ಮಾನವಲೋಕದ ಗಾಯಕಶ್ರೇಷ್ಠ (ಕ - ೩೦)

ಮನನ ಸ್ಮರಣೆ, ಧ್ಯಾನ, ಗಮನ, ಲಕ್ಷ್ಯ

ಮನುಜ ಮನುಶ್ಯ, ನರ, ಮಾನವ.

ಮನುಜಮೃಗ ವರವೇಷ ಶ್ರೀ ನಾರಸಿಂಹ (ಕ - ೧)

ಮನೋಮಯ ಮನೆತುಂಬ, ಮನನಿಯಂತ್ರಕ, ಮನರೂಪ, ಮನ ನಿಯಾಮಕ, ಮಾನಿಸಿಕ.

ಮನ್ಮಥ ಕಾಮ (ಕ - ೮)

ಮನ್ಮಥಜನಕ ಶ್ರೀ ಹರಿ (ಕ - ೧)

ಮನೆ ವಾಸಸ್ಥಳ, ವಸತಿ, ಗೃಹ.

ಮನೋಹರ ಮನೋರಮ ಸುಂದರ, ಚಿತ್ತಾಕರ್ಷಕ, ಚಿತ್ತಾಪಹಾರಿ.

ಮನೋರಥ ಮನಸ್ಸಿನ ಬಯಕೆ, ಅಂತರಿಚ್ಛೆ, ಒಳ ಇಚ್ಛೆ.

ಮನೀಷಿ ಪಂಡಿತ, ಜ್ಞಾನಿ, ಸರ್ವಜ್ಞ, ಶ್ರೀ ಹರಿವಾಯು (ಕ-೧೩)

ಮನ್ನಿಸು ಮರ್ಯಾದೆ ಮಾಡು, ಒಪ್ಪಿಕೊಳ್ಳು.

| | |
|---|---|
| ಮೃಡ | ಸುಖಪ್ರದ, ಶ್ರೀ ಮಹದೇವ (ಕ - ೫) |
| ಮಡಿ | ಶುಚಿ, ಆಲವಾಲ, ವಿಸ್ತರಿಸಿ, ಬೆಳಿಸಿ, ಹೆಚ್ಚಿಸಿ. |
| ಮಡದಿ | ಪತ್ನಿ, ಭಾರ್ಯಾ, ಹೆಂಡತಿ. |
| ಮಣಿ | ಶ್ರೇಷ್ಠ, ವರಿಷ್ಠ, ಮುತ್ತು ಹರಳು. |
| ಮಣಿ ಮಂತ. | ಹಿರಣ್ಯಾಕ್ಷ, ಹಿರಣ್ಯಕಶಿವುಗೆ ಸಮನಾದ ಒಬ್ಬ ಮಹಾದೈತ್ಯ, ಮನೋಭಿಮಾನಿ, |
| ಮಬ್ಬು | ತೋಲುಪತೆ, ಮಗ್ನತೆ, ಬುದ್ಧಿಮಾಂದ್ಯ. |
| ಮಮತೆ | ವಾತ್ಸಲ್ಯ, ಪ್ರೀತಿ, ಮೋಹ. |
| ಮರ್ಮ | ಇಂಗಿತ, ರಹಸ್ಯ, ತಿರುಳು, ತತ್ವ, ಅಭಿಪ್ರಾಯ, ಮನೋಭಾವ, ಕುತ್ಸಿತೆ, ನಿಂದ್ಯ. |
| ಮಮ | ನನ್ನ, ನನ್ನದು. |
| ಮಯ | ತುಂಬಾ, ತುಂಬಿದ, ಪೂರ್ಣ, ವಾಚ್ಯ ನಾಮಕ, ವ್ಯಾಪ್ತ ಅಂತರ್ಗತ. |
| ಮಯೂಖ | ಕಿರಣ, ರಶ್ಮಿ, ಅಂಶು, ಮರೀಚಿ, ದೀಧೀತಿ. |
| ಮರ | ಗಿಡ, ವೃಕ್ಷ, ತರು, ದ್ರುಮ, ಕೇರುವ ಮರಶೂರ್ಪ. |
| ಮರೆ | ವಿಸ್ಮರಣೆ, ನೆನವಿಲ್ಲದಂತಾಗುವಿಕೆ, ಘುಚ್ಚು, ತೆರೆ. |
| ಮರಳು | ಹುಚ್ಚುತನ, ಮತಿಭ್ರಂಶ, ಮೋಸಹೋಗು, ವಶವಾಗು, ವಂಚಿಸಲ್ಪಡುವಿಕೆ. |
| ಮರಳು | ಉಸುಕು, ತಿರುಗಿಬರು. |
| ಮರೀಚಿ | ಇಂದ್ರಿಯ, ಪ್ರಕಾಶ, ಕಿರಣ, ಸೂರ್ಯ, ತೀಕ್ಷ್ಣತೆ, ಹರತ, ಬ್ರಹ್ಮ ಮಾನಸಪುತ್ರರು, ಉಪಸ್ಥ |
| ತತ್ವಮಾನಿ, | ಸಪ್ತರ್ಷಿಗಳಲ್ಲೊಬ್ಬ ಮುನಿಪುಂಗವ (ಕ - ೧೬) |
| ಮರೀಚಿದಮನ | ದೈತ್ಯ ಸಂಹಾರಿ, ಸಂಸಾರ ಮರ್ಧನ, ಇಂದ್ರಿಯ ನಿಗ್ರಹಪ್ರದ ಪರ್ಷಪ್ರದ, ಶ್ರೀ ಹರಿ (ಕ - ೧) |
| ಮರುತ | ಪಾಂಡವರ ತಂದೆ, ಶ್ರೀ ಭಗವದ್ಭಕ್ತರಾಜ (ಕ -೧೯) |
| ಮರುತ್ವಾನ | ಶ್ರೀ ಇಂದ್ರ (ಕ - ೮) |
| ಮಲ | ಹೊಲಸು, ಕಿಲ್ಮಿಷ, ಶೌಚ, ಕೆಟ್ಟಿ |
| ಮಲಿನ | ಹೊಲಸು, ಕಶ್ಮಲ, ಕೊಳೆ. |
| ಮಲೆ | ಹೊಲಸಾಗು, ಕೊಳೆಯಾಗು. ಮಳೆಯನೀರು ಶುದ್ಧನೀರು. |
| ಮಳಲ | ಉಸುಕು, ಉಸುಬು |
| ಮಸ್ತಕ | ಶಿರಲ, ತಲೆ. |

| | |
|---|---|
| ಮೃಷ | ಮೋಸ, ಸುಳ್ಳು, ವಂಚನೆ. |
| ಮಶಕ | ನೊಣ, ನೊರಜು. |
| ಮಹ | ಉದ್ಧರ್ಷ, ಉತ್ಸವ, ಉದ್ಭವ. |
| ಮಹಸ್ | ವಿಶಾಲ, ದೊಡ್ಡ, ವಿಪುಲ, ವಿಸ್ತೃತ ಜ್ಞಾನಿ. |
| ಮಹಾನ್ | ಶ್ರೀ ಮಹಾನ್ ನಾಮಕ ರುದ್ರ (ಕ - ೧೮) |
| ಮಹೇಂದ್ರನಂದನ | ಶ್ರೀ ಪಾರ್ಥ, ಅರ್ಜುನ. ಕಿರೀಟಿ (ಕ - ೮) |
| ಮಹಭಿಕ್ಷಕ | ಶ್ರೀ ವರಣಾವತಾರ, ಮಹಭಿಕ್ಷಗ್ರಾಜ (ಕ - ೧೩) |
| ಮಹಿಂಷಿ | ಭೂಮಿಗೆ ಒಡೆಯಳು, ರಾಣಿ, ರಾಜ್ಞಅರಸಿ ಪಟ್ಟದರಾಣಿ. |
| ಮಹೋರಗ | ಹೆಬ್ಬಾವು, ಘೋರವಿಷಸರ್ಪ. |
| ಮಹತ್ವ | ಪ್ರಭಾವ, ಪ್ರತಿಷ್ಠೆ, ಪ್ರಾಧಾನ್ಯ, ಹೆಚ್ಚಳಿಕೆ. |
| ಮಹದ್ಭೂತವಿಷ್ಣು | ಸಕಲಚೇಷ್ಟಕ ಶ್ರೀ ಹರಿ. |
| ಮಹಿಮೆ | ವಿಸ್ತಾರ, ವರ್ಣನೆ, ದೊಡ್ಡಸ್ತಿಕೆ. |
| ಮಹಿದಾಸ | ಇತರಾದೇವಿಯಲ್ಲಿ ಶ್ರೀ ಹರಿಯ ಅವತಾರ. |
| ಮಹಯಜ್ಞ | ಮಹತ್ತರಯಜ್ಞ, ಘನವಾದ ಯಜ್ಞ, ರಾಜಸೂಯ, ವಾಜಿಪೇಯಾದಿ. |
| ಮಹೋನ್ನತಿ | ಮಹದೇಳಿಗೆ, ಪ್ರವದ್ಧತ್ವ. |
| ಮಹರಾಯ | ರಾಜರಾಜೇಶ್ವರ ಶ್ರೀ ಹರಿ. |
| ಮಹಯೋಗಿ | ಶ್ರೇಷ್ಠಮುನಿ, ದೊಡ್ಡಯೋಗಿ, ಮಹರ್ಷಿ. |
| ಮಹತ್ತತ್ವ | ಅಲ್ಪವಿಕಾರಿತ್ವ, ಪ್ರಸನ್ನತ್ವ, ಜ್ಞಾನ ಪ್ರದಾನತ್ವ, ಶ್ರೀಬ್ರಹ್ಮ ವಾಯುದೇವರಿಗೆ ಅಭಿಮಾನ್ಯ ಶ್ರೀವಾಸುದೇವನಿಂದ ನಿರ್ಮಿತತತ್ವ |
| ಮಹಾಪರಾಧ | ಅಕ್ಷಮ್ಯತಪ್ಪು, ತಮೋಯೋಗ್ಯ ಶಿಕ್ಷಾರ್ಹ. |
| ಮಹಾಪುರುಷ | ಶ್ರೀ ಹರಿ (ಕ - ೧) |
| ಮಹಾಧ್ಯಾತ | ಶ್ರೀ ಹರಿಯಲ್ಲಿ ಯಾವಾಗಲೂ ಎಲ್ಲೆಲ್ಲೂ ಧ್ಯಾನಾಸಕ್ತ ಶ್ರೀ ಗಾಳಿ ದೇವ (ಕ - ೩) |
| ಮಹಾತ್ಮ | ಮಹಿಮೋಪೇತ, ಭಗವದ್ಭಕ್ತ, ಸಜ್ಜನ, ವರಿಷ್ಠ, ಸದ್ಗುಣಿ, ಸಚ್ಚರಿತ. |
| ಮಹೇಶ | ಶ್ರೀ ಉಮೇಶ (ಕ - ೫) |

| | |
|---|---|
| ಮಹೇಶಸಂಭವ | ಶ್ರೀ ವಿನಾಯಕ, ಗಜಾನನ. |
| ಮಹೀಸುರ | ತತ್ವಾಭಿಮಾನಿ, ಬ್ರಾಹ್ಮಣ. |
| ಮಹೀ | ಬ್ರಹ್ಮಾಂಡ, ಜಗತ್ತು, ಭೂಮಂಡಲ. |
| ಮಹದೇವ | ಪರಮಾತ್ಮ ಮಹಾತ್ಮ್ಯ ತಿಳಿದ (ಯೋಗ್ಯತಾನುಸಾರ) ಶ್ರೀ ರುದ್ರದೇವ (ಕ - ೧) |
| ಮಹಲಕುಮಿ | ವಿಸ್ತೃತ ಜ್ಞಾನಾನಂದ, ವಿತ್ತು ರಕ್ಷಿಸುವವಳು. |
| ಮಾ | ಜ್ಞಾನ, ಜ್ಞಾನಿ, ಜ್ಞಾನಪ್ರದ, ಜನನಿ ಶ್ರೀ ಲಕುಮಿ. |
| ಮಾರ್ಕಂಡೇಯ | ಕಲ್ಪಾಯುಷ್ಟಿ, ಮುನಿವರ್ಯ. |
| ಮಾಕಳತ್ರ | ಶ್ರೀ ಲಕುಮಿ ಪತಿ (ಕ - ೧) |
| ಮಾರ್ಗ | ದಾರಿ, ಹಾದಿ, ರೀತಿ, ಪ್ರಕಾರ, ಪರಿ. |
| ಮಾಗಧ | ಮಗಧ ದೇಶದ ರಾಜ, ಜರಾಸಂಧ. |
| ಮಾಗು | ಹಣ್ಣಾಗ, ಪಕ್ವದೆಶೆ ಬರಲು, ಫಲಿಸು, ಫಲವಾಗು. |
| ಮಾಘ | ಮಾಘಮಾಸ. |
| ಮಾರ್ಜನ | ತೊಳೆಯುವಿಕೆ, ಮೈತೊಳೆ, ತಿಕ್ಕಿ ತೊಳೆ, ಉಜ್ಜು, ಸಿಂಪಡಿಸು, |
| ಮಾತರಿಶ್ವ | ಶ್ರೀ ವಾಯುದೇವರು, (ಕ - ೩) ಗತಿ ಗಮನಪ್ರದ. |
| ಮಾತೆ | ತಾಯಿ, ಜನನಿ, ಶ್ರೀ ಲಕುಮಿ (ಕ - ೨) |
| ಮಾತುಳ | ಸೋದರಮಾವ, ತಾಯಿಯ ಅನುಜ. |
| ಮಾತುಳಧ್ವಂಸಿ | ಮಾತುಳಾಂತಕ ಮಾವ ಕಂಸನ ಕೊಂದ ಶ್ರೀ ಹರಿ (ಕ - ೧) |
| ಮಾತರಿಶ್ವಪ್ರಿಯ | ಶ್ರೀ ವಾಯುದೇವರಿಗೆ ಅತಿ ಪ್ರಿಯನು. |
| ಮಾತೃ | ಜನನಿ, ತಾಯಿ, ಅಂಬ, ಹೆತ್ತವಳು. ಮಾತ್ರ ೮ ನಿಮಿಷಗಳಕಾಲ. |
| ಮಾಟ | ಚಿಕ್ಕ, ಪುಟ್ಟ, ಅಂದ, ಚೆಂದ, ಮುದ್ದು. |
| ಮಾಧವ | ಶ್ರೀ ಲಕ್ಷ್ಮೀಪತಿ ಶ್ರೀ ಹರಿ (ಕ-೧), ಭಕ್ಷ್ಯಗ (ಕ-೧) |
| ಮಾಣವಕ | ವಟು, ಬ್ರಹ್ಮಚಾರಿ, ಕೂಸು, ಮಗು, ನಿರಭಿಮಾನಿ, ೩ ರಿಂದ ೮ ವರ್ಷದೊಳಗಿನ ಮಗು. |
| ಮಾಣಿಪ | ರತ್ನ, ಬೆಲೆಯುಳ್ಳ ಕೆಂಪು, ರತ್ನ, ಪದ್ಮರಾಗಮಣಿ, |
| ಮಾಣು | ಮಾಡು. |
| ಮಾನ | ಮರ್ಯಾದೆ, ಹೊಗಳಿಕೆ. |

| | |
|---|---|
| ಮಾನದ | ಯೋಗ್ಯತಾನುಸಾರ ಆದರಿಸುವ, ಮರ್ಯಾದಿಸುವ, ವಸ್ತ್ರದಲ್ಲಿದ್ದು ಮಾನರಕ್ಷಕ |
| ಮಾನವಿ | ಮನುವಿನ ಪತ್ನಿ, ಶ್ರೀ ಶತರೂಪಾ ಸ್ವಾಯಂಭು ಪತ್ನಿ (ಕ - ೧೨) |
| ಮಾನಿಸ | ಮನುಷ್ಯಯೋನಿಯಲ್ಲಿ ಬಂದ, ಮನುಷ್ಯ |
| ಮಾನಿನಿ | ಸ್ತ್ರೀ, ಮಾನ್ಯೆ, ಹೆಂಡತಿ, ಮಡದಿ. |
| ಮನುಷೋತ್ತಮ | ಮನುಜ ಶ್ರೇಷ್ಠ (ಕ - ೩೨) |
| ಮಾಯಾ | ಮೋಸ, ವಂಚನೆ, ಕಣಕಟ್ಟು, ಕಪಟ, ಮೋಹಕ ಶಕ್ತಿ. ಶ್ರೀ ವಾಸುದೇವ ರೂಪಿ ಪರಮಾತ್ಮನ ಮಡದಿ, ಶ್ರೀ ಲಕುಮಿ ರೂಪ (ಕ - ೨) |
| ಮಾಯೇಶ | ಶ್ರೀ ವಾಸುದೇವ, ವಿರಿಂಚಿ ಜನಕ (ಕ - ೧) |
| ಮಾಯಾರಮಣ | ಶ್ರೀ ವಾಸುದೇವ (ಕ - ೧) |
| ಮಾಯಾತರುಣಿ | ಶ್ರೀ ವಾಸುದೇವನ ಲಲನೆ (ಕ - ೨) |
| ಮಾಯಿ | ಮಾಯಾವಾದಿ, ಕಪಟಿ. |
| ಮಾರುತ | ಸಮ್ರ, ಆಚ್ಛಾಧಾರಕ, ಸತ್ವಸತ್ವ, ನಿರ್ವಾಜ್ಯ, ಮಾ = ಜ್ಞಾನ, ಋತ = ನಿಶ್ಚಯ, ಪರಮಾತ್ಮನಲ್ಲಿ ನಿಶ್ಚಯ ಜ್ಞಾನ ಉಳ್ಳವ ಶ್ರೀ ವಾಯುದೇವರು (ಕ - ೩ ) ಬೆಣ್ಣೆಗೆ ಅಭಿಮಾನಿ. |
| ಮಾರಿ | ಮೃತ್ಯು, ಮರಣ ಸಾವು. |
| ಮಾರ | ಶ್ರೀ ಮನ್ಮಥ, ಕಾಮ (ಕ - ೮) |
| ಮಾರಜ | ಕಾಮಪುತ್ರ, ಅನಿರುದ್ಧ (ಕ - ೧೦) |
| ಮಾರಪುತ್ರ | " " "(ನಿಜ = ಸ್ವರೂಪ, ನಿಯತ) ಶ್ರೀ ಭಾರತಿ (ಕ - ४) |
| ಮಾಸ | ೩೦ ದಿನ, ರಾತ್ರಿಗಳ ಕಾಲ = ತಿಂಗಳು |
| ಮಾಸು | ಕಳೆಗುಂದು, ನಿಸ್ತೇಜವಾಗು, ಹೊಲಸಾಗು. |
| ಮಾಷ | ಉದ್ದುಕಾಳು, ಉದ್ದಿನಕಾಳು. |
| ಮಾಷಜ | ಉದ್ದಿನ ಭಕ್ಷ್ಯ, ಉದ್ದಿನಿಂದ ಮಾಡಿದ ತಿಂಡಿ. |
| ಮಾಂಧಾತ | ನಾಮಕ ಹರಿಭಕ್ತ ಚಕ್ರವರ್ತಿ (ಕ - ೧೯) |
| ಮಾಂಸ | ರಕ್ತದ ಕರಣೆ, ಗಟ್ಟಿಯಾದ ಕರಣೆ. |

| | |
|---|---|
| ಮಿಕ್ಕ | ಉಳಿದ, ಬೇರೆ, ವ್ಯತಿರಿಕ್ತ, ಅಳಿದುಳಿದ, ಇತರ, ಎರಡನೆಯ |
| ಮಿಗೆ, ಮಿಗಿಲು | ಶ್ರೇಷ್ಠ, ಉಚ್ಚ, ಹೆಚ್ಚು. |
| ಮಿತ್ರ | ಗೆಳೆಯ, ಸಖ, ರಕ್ಷಕ, ಆಶ್ರಯ ಪ್ರದ, ಅಭಯದ. ಪುತ್ರಶಾಕಮಾನಿ (ಕ - ೧೭) ವಾಯು, ತತ್ವಾಭಿಮಾನಿ, ಮಿತ್ರನಾಮಕಸೂರ್ಯ, ಶ್ರೀ ಜೇಷ್ಠ ಮಾಸ ನಿಯಾಮಕ, ಶ್ರೀ ಕಶ್ಯಪರ ತನುಜ. |
| ಮಿತ್ರವಿಂದಾ | ವಸುದೇವನ ತಂಗಿ ಮಗಳು, ಶ್ರೀ ಹರಿ ಪತ್ನಿ(ಕ-೬) |
| ಮಿತ | ಅಳೆದ, ಗೊತ್ತುಪಡಿಸಿದಷ್ಟು, ನಿರ್ದಿಷ್ಟ, ಅಲ್ಪಸ್ವಲ್ಪ. |
| ಮಿಥ್ಯಾ | ಸುಳ್ಳು, ಅಸತ್ಯ, ತಪ್ಪು, ಅಯೋಗ್ಯ |
| ಮಿಥ್ಯಾವಾದ | ಅಯೋಗ್ಯ, ಅಸತ್ಯವಾದ. |
| ಮಿಂಚು | ಹೊಳಪು, ಪ್ರಕಾಶ, ಶೋಭೆ. |
| ಮಿಸುನಿ (ಣಿ) | ಬಂಗಾರ, ಕಟಿಕ, ಕನಕ, ಹಾಟಕ, ಹಿರಣ್ಯ |
| ಮಿಶ್ರ | ಕೂಡಿದ, ಮಧ್ಯಮ, ಶುದ್ಧಾಶುದ್ಧಯುಕ್ತ, ರಾಜಸ. |
| ಮಿಶ್ರರು | ನಿತ್ಯಸಂಸಾರಿಗಳು. ರಾಜಸರು, ಅಸ್ಥಿರ ಜ್ಞಾನಿಗಳು. |
| ಮೀನ | ಮತ್ಸ್ಯ, ಮತ್ಸ್ಯಾವತಾರಿ ಶ್ರೀ ಹರಿ. |
| ಮೀನಕೇತನ | ಮತ್ಸ್ಯಧ್ವಜ ಉಳ್ಳ ಕಾಮ (ಕ - ೮) |
| ಮೀನಕೇತನ ಜನಕ | ಶ್ರೀ ಹರಿ (ಕ - ೧) |
| ಮೀಯು | ಸ್ನಾನ ಮಾಡು, ಮಜ್ಜನಗೈಯು. |
| ಮೀರು | ದಾಟು, ಹೆಚ್ಚು, ಏರು, ಮುಂದಾಗು. |
| ಮೀಸಲ | ಕಾದಿಟ್ಟ, ಮುಡುಪು. |
| ಮುಕುಂದ | ಮುಕ್ತಿಯನ್ನು ಕೊಡುವವ, ಶ್ರೀ ಮನ್ನಾರಾಯಣ ಬಾಲರೂಪ (ವಟಪತ್ರಶಾಯಿ) |
| ಮುಕ್ಕಣ್ಣ | ಮೂರು ಕಣ್ಣುಳ್ಳ ಶ್ರೀ ಉಮಾರಮಣ (ಕ-೫), |
| ಮುಕ್ತಿ | ವಿಮೋಚನೆ, ಬಿಡುಗಡೆ, ಮೋಕ್ಷ, |
| ಮುಕ್ತ | ವಿಮೋಚಿತ, ವಿಲಿಂಗ, ಲಿಂಗದೇಹದಿಂದ ಹೊರಬಂದ, ಹೊರಪಡಿಸಿದ, |
| ಮುಕ್ತಿದ್ವಾರ | ಮುಕ್ತಿಗೆ ಹೋಗಲು, ತಾರತಮ್ಯ ಜ್ಞಾನದ ಮುಖಾಂತರವೇ ತಾರತಮ್ಯ ಜ್ಞಾನವೇ ದಾರಿ |

| | |
|---|---|
| ಮುಕ್ತಿದಾಯಕ | ಶ್ರೀ ಮುಕುಂದ (ಕ - ೧) |
| ಮುಕುರ | ಕನ್ನಡಿ |
| ಮುಕ್ತಿಯೋಗ್ಯ | ಶ್ರೀ ಅಪರೋಕ್ಷಿಕೃತ ಸುಜ್ಞಾನಿ, ನಿಜಭಕ್ತ. |
| ಮುಕ್ತಾಭ | ಮುತ್ತಿನ ವರ್ಣದಂತೆ ಶೋಭಿಸುವ ಶ್ರೀ ವತ್ಸ ಕೌಸ್ತುಭ ಶ್ರೀ ಪ್ರದ್ಯುಮ್ನದೇವ (ಕ - ೧) |
| ಮುಕುಟ | ಕಿರೀಟ. |
| ಮುಖ | ಬಾಯಿ, ಸ್ವರ, ಮುಖ್ಯ, ವದನ, ಮೊದಲಾಗಿ, ಮೊದಲಾದ. |
| ಮುಖ್ಯ | ಪ್ರಧಾನ, ಗಣ್ಯ, ವರಿಷ್ಠ, ಮಹತ್ವಾತ್ಮಕ. |
| ಮುಖ್ಯಾಮುಖ್ಯ | ಸಾಧಾರಣ, ಸಾಮಾನ್ಯ, ಮಧ್ಯಮ. |
| ಮುಖ್ಯಪ್ರಾಣ | ಶ್ರೀ ಹರಿ ವಾಯು (ಕ - ೧೩) |
| ಮುದಿರ | ಘನ, ಮೋಡ, ಅಬ್ದ. |
| ಮುದ್ರೆ | ಅಚ್ಚು, ಗುರುತು, ಚಿಹ್ನೆ. |
| ಮುದಿರವಾಹನ | ಶ್ರೀ ದೇವೇಂದ್ರ (ಕ - ೮) |
| ಮುನ್ನ | ಮೊದಲಿಗೆ, ಹಿಂದೆ, ಮುಂಚಿತ. |
| ಮುನಿ | ಸಿಟ್ಟಾಗು, ಕ್ರೋಧಿಸು, ತಿರಸ್ಕರಿಸು, ಹಳಿ, ಮನನಶೀಲತ್ವಾತ್ ಮುನಿ = ಜಿತೇಂದ್ರಿಯ, ಋಷಿ |
| ಮುನಿಪ | ಮುನಿಶ್ರೇಷ್ಠ, ಯತಿವರ, ಋಷಿ, ಪುಂಗವ. |
| ಮುಪ್ಪೊಳಲುರಿಗ | ತ್ರಿಪುರ ಧ್ವಂಸಿ ಶ್ರೀ ಮಹೇಶ (ಕ - ೫) |
| ಮುಪ್ಪು | ಜರಾ, ವೃದ್ಧ, ಜೀರ್ಣ, ವಯಸ್ಸಾದ, ಇಳಿವಯಸ್ಸಿನ, ಜೀವನದ ತೃತೀಯಾವಸ್ಥೆ. |
| ಮುಮುಕ್ಷು | ಮುಕ್ತ್ಯಾಪೇಕ್ಷಿ, ಮುಕ್ತಿಯೋಗ್ಯ, ಮುಕ್ತಿ ಮಾರ್ಗಸ್ಥ. |
| ಮುದ | ಹರ್ಷ, ಆನಂದ, ಸಂತಸ, ಬೆಳವಣಿಗೆಯಿಲ್ಲದ. |
| ಮುರಿ | ವಿಂಗಡಿಸು, ಅಲುಗಿಸು, ನಾಶಮಾಡು, ತಗ್ಗಿಸು, ವಿಭಾಗಿಸು |
| ಮುಹೂರ್ತ | ಪುನಃ ಪುನಃ, ಮೇಲಿಂದ ಮೇಲೆ. |
| ಮೂಕ | ಮಾತಾಡಲು ಬಾರದ, ಸ್ವರರಹಿತ, ಮೌನಿ |
| ಮೂಗು | ಘ್ರಾಣೇಂದ್ರಿಯ. |
| ಮೂರ್ಖ | ಅಧಿಕ ಪ್ರಸಂಗಿ, ತನಗೆ ತಿಳಿಯದಿದ್ದರೂ ಅನ್ಯರಿಗೆ ಕಿವಿ ಕೊಡದ ದುರ್ವಾದಿ. |

